# ಮೊಳಕಾಲ್ಮೂರು
# ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ

(ಎಂ.ಫಿಲ್.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರೌಢಪ್ರಬಂಧ)

ಸಂಶೋಧಕರು
**ಮಂಜುನಾಥ ಬಿ.**

ಮಾರ್ಗದರ್ಶಕರು
**ಡಾ.ಎಸ್.ವೈ.ಸೋಮಶೇಖರ್**
ಸಹಾಯಕ ಪ್ರಾಧ್ಯಾಪಕರು



ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ–೫೮೩ ೨೭೬

೨೦೧೫

# ಮೊಳಕಾಲ್ಮೂರು
# ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ

(ಎಂ.ಫಿಲ್.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರೌಢಪ್ರಬಂಧ)



ಸಂಶೋಧಕರು

**ಮಂಜುನಾಥ ಟಿ.**

ಮಾರ್ಗದರ್ಶಕರು

**ಡಾ.ಎಸ್.ವೈ.ಸೋಮಶೇಖರ್**

ಸಹಾಯಕ ಪ್ರಾಧ್ಯಾಪಕರು




ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೫

# ಮಾರ್ಗದರ್ಶಕರ ದೃಢೀಕರಣ

**ಮೊಳಕಾಲ್ಮೂರು ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ** ಎಂಬ ಪ್ರೌಢಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್.ಪದವಿಗಾಗಿ **ಮಂಜುನಾಥ ಟಿ.** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಪ್ರೌಢಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಇಲ್ಲವೆ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಡಾ.ಎಸ್.ವೈ.ಸೋಮಶೇಖರ್**
ಸಹಾಯಕ ಪ್ರಾಧ್ಯಾಪಕರು
ಪ್ರಾಚೀನ ಇತಿಹಾಸ ಮತ್ತು
ಪುರಾತತ್ವ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ: ವಿದ್ಯಾರಣ್ಯ
ದಿನಾಂಕ: 26/08/2012

# ಘೋಷಣಾ ಪತ್ರ

ಮೊಳಕಾಲ್ಮೂರು ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ ಎಂಬ ಪ್ರೌಢಪ್ರಬಂಧವನ್ನು ಡಾ.ಎಸ್.ವೈ.ಸೋಮಶೇಖರ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸುತ್ತಿದ್ದೇನೆ. ಈ ಪ್ರೌಢಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ. ಇದರ ಯಾವುದೇ ಭಾಗ ಎಲ್ಲಿಯೂ ಪ್ರಕಟಗೊಳಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಮಂಜುನಾಥ ಟಿ.
ಸಂಶೋಧಕರು
ಪ್ರಾಚೀನ ಇತಿಹಾಸ ಮತ್ತು
ಪುರಾತತ್ವ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ: ವಿದ್ಯಾರಣ್ಯ
ದಿನಾಂಕ: 29-9-15

# ಪರಿವಿಡಿ

# ಅಧ್ಯಾಯ ಒಂದು

# ಪ್ರಸ್ತಾವನೆ

ಇತಿಹಾಸವಿಲ್ಲದ ರಾಷ್ಟ್ರಕ್ಕೆ ಭವಿಷ್ಯವೇ ಇಲ್ಲ ಎಂಬ ವಿದ್ವಾಂಸರ ಮಾತಿನಂತೆ ಜಗತ್ತಿನ ಪ್ರತಿಯೊಂದು ರಾಷ್ಟ್ರವೂ ಸಹ ತನ್ನದೇ ಆದಂತಹ ಇತಿಹಾಸವನ್ನು ಹೊಂದಿದೆ. ಈ ವಿಷಯದಲ್ಲಿ ಭಾರತವೂ ಸಹ ಹೊರತಾಗಿರದೇ ತನ್ನದೇ ಆದ ಚರಿತ್ರೆ ಮತ್ತು ಸಾಂಸ್ಕೃತಿಕ ಪರಂಪರೆಯನ್ನು ಹೊಂದಿದೆ. ಪ್ರತಿಯೊಂದು ಹಂತದಲ್ಲಿಯೂ ಮಾನವನಲ್ಲಿ ಕುತೂಹಲ ಮತ್ತು ಆಸಕ್ತಿಯನ್ನು ಕೆರಳಿಸುವ ಇತಿಹಾಸವು ಇಡೀ ಮನುಕುಲದ ಜೀವನ ವೃತ್ತಾಂತವಾಗಿದ್ದು, ವರ್ತಮಾನ ಮತ್ತು ಭೂತಕಾಲದ ನಡುವಿನ ಕೊಂಡಿಯಾಗಿದೆ. ವಾಸ್ತವದಿಂದ ಗತದೆಡೆಗೆ ಸಾಗುವ ಚರಿತ್ರೆಯ ಅಧ್ಯಯನ ಹಾಗೂ ಪುನರ್ರಚನೆಯು ಅಂತಿಮವಾಗಿ ಆಕರಗಳನ್ನು ಅವಲಂಬಿಸಿರುತ್ತದೆ. ಆಕರಗಳಿಲ್ಲದೆ ಇತಿಹಾಸವಿಲ್ಲ ಹಾಗಾಗಿ ಅಕರಗಳನ್ನೊರೆತುಪಡಿಸಿ ಚರಿತ್ರೆಯನ್ನು ಪುನರ್ರಚಿಸುವುದು ಇತಿಹಾಸಕಾರರಿಗೆ, ಸಂಶೋಧನಾಕಾರರಿಗೆ ಕಷ್ಟದಾಯಕವಾದುದಾಗಿದೆ. ಇತಿಹಾಸದ ಜೀವಳ/ಆಧಾರಸ್ತಂಭಗಳಾಗಿರುವ ಆಕರಗಳು ಚರಿತ್ರೆಯ ರಚನೆಗೆ ಸಾಹಿತ್ಯಕ ಮತ್ತು ಪುರಾತತ್ವೀಯ ರೂಪದಲ್ಲಿ ಸಹಕಾರಿಯಾಗುತ್ತವೆ. ಕರ್ನಾಟಕವು ಸಾವಿರಾರು ವರ್ಷಗಳ ಇತಿಹಾಸ ಮತ್ತು ಉಜ್ವಲವಾದ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿರುವುದರ ಮೂಲಕ ಇಡೀ ದೇಶದಲ್ಲಿಯೇ ತನ್ನನ್ನು ಬಹು ವಿಶೇಷತೆಯೊಂದಿಗೆ ಗುರುತಿಸಿಕೊಂಡಿದೆ. ಪ್ರಾಯಶಃ ದೇಶದಲ್ಲಿ ತಮಿಳುನಾಡನ್ನು ಹೊರತು ಪಡಿಸಿದರೆ ಕರ್ನಾಟಕದಷ್ಟು ಪ್ರಾಚೀನ, ಇತಿಹಾಸ, ಸಾಹಿತ್ಯ, ಸಾಂಸ್ಕೃತಿಕ ಪರಂಪರೆಯನ್ನು ಹೊಂದಿರುವಂತಹ ಪ್ರದೇಶ ಮತ್ತೊಂದಿಲ್ಲ. ಈ ನೆಲದ ಪ್ರತಿಯೊಂದು ಕಲ್ಲು ಸಹ ಚರಿತ್ರೆಯ ರಚನೆಗೆ ಅಮೋಘ ಕೊಡುಗೆಯನ್ನು ನೀಡಿರುವಂತೆ ಇಲ್ಲಿನ ಒಂದೊಂದು ಹಳ್ಳಿಯೂ ಸಹ ಭಾರತೀಯ ಸಂಸ್ಕೃತಿಗೆ ತನ್ನದೇ ಆದ ಕೊಡುಗೆಯನ್ನು ಕೊಡಬಲ್ಲಂತಹ ಸಂಪತ್ತನ್ನು ಹೊಂದಿದೆ.

ಕರ್ನಾಟಕ ಹಾಗೂ ಭಾರತ ದೇಶದ ಕಾಲಾನುಕ್ರಮದ ಇತಿಹಾಸದ ಪುನರ್ರಚನೆಗೆ ಕರ್ನಾಟಕದ ಮಧ್ಯಬಿಂದುವಿನಂತಿರುವ ಚಿತ್ರದುರ್ಗ ಜಿಲ್ಲೆ ಹಾಗೂ ಜಿಲ್ಲೆಯಲ್ಲಿನ ಮೊಳಕಾಲ್ಮೂರು ಪಟ್ಟಣದ ಕೊಡುಗೆ ಅಪಾರ ಹಾಗೂ ಅವಿಸ್ಮರಣೀಯವಾದುದಾಗಿದೆ. ಸುತ್ತಲೂ ದೈತ್ಯಾಕಾರದ ಬೆಟ್ಟ ಗುಡ್ಡಗಳಿಂದ

ಆವೃತವಾಗಿರುವ ಇಲ್ಲಿನ ಪರಿಸರ, ಪ್ರಾಚೀನ ಶಿಲಾಯುಗದ ಮಾನವನ ವಾಸಕ್ಕೆ ಯೋಗ್ಯವಾಗಿತ್ತು ಎಂಬುದಕ್ಕೆ ಸೂಕ್ಷ್ಮಶಿಲಾಯುಗದಿಂದ-ಆದಿ ಇತಿಹಾಸಕಾಲದವರೆಗಿನ ಇದುವರೆಗೂ ಶೋಧಿತ ಗೊಂಡಿರುವ ಹಲವಾರು ಪುರಾತತ್ವೀಯ ಪ್ರಾಚ್ಯಾವಶೇಷಗಳೇ ಸಾಕ್ಷಿಯಾಗಿವೆ. ದೇಶದ ಆರಂಭಿಕ ರಾಜಕೀಯ ಆಳ್ವಿಕೆಯನ್ನು ಕಟ್ಟಿಕೊಟ್ಟಂತಹ ಮೌರ್ಯ ಸಾಮ್ರಾಜ್ಯದ ಎಲ್ಲೆಯನ್ನು ದಕ್ಷಿಣ ಭಾರತದಲ್ಲಿ ಮೊದಲಬಾರಿಗೆ ಗುರುತಿಸಲು ಸಹಕಾರಿಯಾದ ಅಶೋಕನ ಶಿಲಾಶಾಸನಗಳು(ಬ್ರಹ್ಮಗಿರಿ, ಜಟಂಗಿ ರಾಮೇಶ್ವರ ಮತ್ತು ಅಶೋಕ ಸಿದ್ದಾಪುರ) ಹಾಗೂ ಪ್ರಾಚೀನ ಇಸಿಲ ಪಟ್ಟಣ ಈ ತಾಲೂಕಿನಲ್ಲಿಯೇ ಕಂಡು ಬಂದಿರುವುದು. ಅಶೋಕನ ಶಾಸನಗಳು ದೊರೆತ ತಾಲೂಕಿನ ಈ ನೆಲೆಗಳು ದೇಶದ ಪ್ರಾಗಿತಿಹಾಸ ಹಾಗೂ ಚರಿತ್ರೆಯ ರಚನೆಯಲ್ಲಿ ತಮ್ಮದೇ ಆದಂತಹ ಗುರುತುಗಳನ್ನು ಮೂಡಿಸಿವೆ. ಇಲ್ಲಿನ ಬ್ರಹ್ಮಗಿರಿ, ರೊಪ್ಪಗಳಲ್ಲಿ ಕೈಗೊಂಡ ಉತ್ಖನನವು ಕರ್ನಾಟಕದಲ್ಲಷ್ಟೇ ಅಲ್ಲದೇ ಇಡೀ ಭಾರತದ ಪುರಾತತ್ವೀಯ ಅಧ್ಯಯನದ ಬೆಳವಣಿಗೆಯ ಮೇಲೆ ತನ್ನದೇ ಆದ ಹೊಸ ಬೆಳಕನ್ನು ಚೆಲ್ಲುವುದರ ಮೂಲಕ ಪ್ರಸ್ತುತ ದಿನಗಳಲ್ಲಿ ಪ್ರಾಗಿತಿಹಾಸ, ಚಾರಿತ್ರಿಕ ಹಾಗೂ ಪುರಾತತ್ವೀಯ ದೃಷ್ಟಿಯಲ್ಲಿ ಪ್ರಸಿದ್ಧಿಯನ್ನು ಪಡೆದಂತಹ ಕೀರ್ತಿ ಈ ತಾಲೂಕಿನ ಪರಿಸರಕ್ಕಿರುವುದು ಗಮನಾರ್ಹವಾದುದಾಗಿದೆ. ಇಲ್ಲಿನ ರೇಷ್ಮೆ ಸೀರೆಗಳು ನಾಡಿನಾದ್ಯಂತ ಹೆಸರಾಗಿವೆ

ಒಂದು ದೇಶದಲ್ಲಿ ಹಿಂದೊಮ್ಮೆ ಆಡಳಿತ ನಡೆಸಿ ಇಂದು ಮರೆಯಾಗಿ ಹೋಗಿರುವ ರಾಜಮಹಾರಾಜರುಗಳು ಹಾಗೂ ಅವರ ಸಾಮಂತ ಅಧಿಕಾರಿಗಳು ನಡೆಸಿದ ಕದನಗಳ ಜಯಾಪಜಯಗಳ ರಾಜಕೀಯ ಬದುಕನ್ನು ಗಮನದಲ್ಲಿಟ್ಟುಕೊಂಡು ಚರಿತ್ರೆಯನ್ನು ರಚಿಸುವ ಕಾಲವೊಂದಿತ್ತು. ಆದರೆ ಇತಿಹಾಸ ಲೇಖನಾಕಲೆಯ ಬೆಳವಣಿಗೆಯಿಂದ ಚರಿತ್ರೆಯ ಬರವಣಿಗೆಯು ಸೂಕ್ಷ್ಮ ಅಧ್ಯಯನಗಳ ಕಡೆಗೆ ಸಾಗುತ್ತಿದೆ. ಇದರಿಂದ ಹಲವಾರು ದೃಷ್ಟಿಕೋನಗಳಲ್ಲಿ ಪ್ರಾದೇಶಿಕ ಮಟ್ಟದ ಅಧ್ಯಯನಗಳು ನಡೆದು, ಆ ಪ್ರದೇಶದ ಚಾರಿತ್ರಿಕ ಹಾಗೂ ಅಲ್ಲಿನ ಮಾನವನ ವಿವಿಧ ಕ್ಷೇತ್ರಗಳಲ್ಲಿನ ಸಾಂಸ್ಕೃತಿಕ ಬದುಕಿನ ಸಮಗ್ರ ಜೀವನದ ಚಿತ್ರಣವನ್ನು ಅರಿಯಲು ಸಾಧ್ಯವಾಗುತ್ತದೆ. ಯಾವುದೇ ಒಂದು ನಾಡಿನ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಚರಿತ್ರೆಯನ್ನು ವಸ್ತುನಿಷ್ಠವಾಗಿ ರಚಿಸುವಾಗ ಆ ಪ್ರದೇಶದ ಸಂಪೂರ್ಣ ಅನ್ವೇಷಣೆ ಹಾಗೂ ಮಾಹಿತಿ ಸಂಗ್ರಹಣೆಯ ಕಾರ್ಯವು ಮೊದಲು ಗ್ರಾಮಗಳಿಂದಲೇ ಆರಂಭವಾಗಬೇಕು. ಈ ನಿಟ್ಟಿನಲ್ಲಿ ಅಪಾರ ಶಾಸನಸಂಪತ್ತು, ಕೋಟೆಕೋತ್ತಲಗಳು, ಕೆರೆಕಟ್ಟೆಗಳು, ಗುಡಿಗೋಪುರಗಳು, ಬುರುಜು-ಕಲ್ಯಾಣಿಗಳು, ಮಠ-ಮಂದಿರಗಳು, ಮಸೀದಿಗಳು, ವೀರಗಲ್ಲು-ಮಹಾಸತಿಕಲ್ಲುಗಳು ಹಾಗೂ ವಿಭಿನ್ನ ಧರ್ಮಿಯ ಮೂರ್ತಿಶಿಲ್ಪಗಳನ್ನು ಹೊಂದಿರುವುದರ ಮೂಲಕ ಮೊಳಕಾಲ್ಮೂರು ಪಟ್ಟಣವು ವಿವಿಧ ರಾಜ ಮನೆತನಗಳ ರಾಜಾಡಳಿತಕ್ಕೆ ಒಳಗಾಗಿ ಚಾರಿತ್ರಿಕ ಹಾಗೂ ಸಾಂಸ್ಕೃತಿಕ ಹಿರಿಮೆಯನ್ನು ಹೊಂದಿದೆ.

ಪ್ರಾಗೈತಿಹಾಸಿಕ ಕಾಲದಿಂದ ಸಮಕಾಲೀನ ಕಾಲಘಟ್ಟದವರೆಗೆ ಇಲ್ಲಿನ ಜನರ ನಂಬಿಕೆ, ಆಚಾರ, ವಿಚಾರ, ರೂಢಿಸಂಪ್ರದಾಯ, ಜಾತ್ರೆ-ಉತ್ಸವ, ಹಬ್ಬ- ಹರಿದಿನಗಳ ಸಾಂಸ್ಕೃತಿಕ

ಜೀವಂತಿಕೆಯನ್ನು ಉಳಿಸಿಕೊಂಡು ಬರುವುದರ ಮೂಲಕ ಸಾಂಸ್ಕೃತಿಕ ಪಳೆಯುಳಿಕೆಗಳನ್ನು ಮೊಳಕಾಲ್ಮೂರು ಪ್ರದೇಶವು ತನ್ನ ಒಡಲಲ್ಲಿ ತುಂಬಿಕೊಂಡು ಬಂದಿದೆ. ಪ್ರಸ್ತುತ ದಿನಗಳಲ್ಲಿ ನಾಡಿನಾದ್ಯಂತ ರೇಷ್ಮೆಸೀರೆಗಳ ನೇಯ್ಗೆಗೆ ಹೆಸರಾಗಿರುವ ಈ ಪ್ರದೇಶದ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಪರಂಪರೆಯ ಕುರಿತಾಗಿ ಇದುವರೆಗೂ ಯಾವುದೇ ರೀತಿಯ ಸಮಗ್ರವಾದಂತಹ ಸಂಶೋಧನೆಯು ನಡೆದಿರುವುದಿಲ್ಲ ಈ ವಿಷಯವನ್ನು ಗಮನದಲ್ಲಿಟ್ಟುಕೊಂಡು ಈ ಒಂದು ಸೀಮಿತ ಪ್ರದೇಶದಲ್ಲಿರುವ ಸ್ಮಾರಕ, ಅವಶೇಷಗಳ ಹಾಗೂ ಅಲ್ಲಿನ ಜನರ ಸಾಂಸ್ಕೃತಿಕ ಚಹರೆಯ ವಿವಿಧ ಮಜಲುಗಳ ಹಿಂದೆ ಇರುವ ಚಾರಿತ್ರಿಕ ಸಾಂಸ್ಕೃತಿಕ ಸಾರವನ್ನು ಅಭ್ಯಸಿಸುವುದರ ಮೂಲಕ ಮೊಳಕಾಲ್ಮೂರು ಪ್ರದೇಶದ ಇತಿಹಾಸ ಮತ್ತು ಸಂಸ್ಕೃತಿಯನ್ನು ಪುನರ್‌ರಚಿಸಲಾಗಿದೆ. ಈ ಪ್ರದೇಶದ ಪ್ರಾಚೀನ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಪರಂಪರೆಯನ್ನು ಅರಿತು, ಮುಂದಿನ ತಲೆಮಾರಿಗೆ ದಾಖಲೆಯಾಗಿರಿಸಲು "ಮೊಳಕಾಲ್ಮೂರು: ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ" ಎಂಬ ಶೀರ್ಷಿಕೆಯ ಅಡಿಯಲ್ಲಿ ವಸ್ತುನಿಷ್ಠವಾದ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಈ ನೆಲೆಯು ಚಾರಿತ್ರಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ಇತಿಹಾಸದ ಉದ್ದಕ್ಕೂ ಎಷ್ಟರ ಮಟ್ಟಿಗೆ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ ಎಂಬುದನ್ನು ವಿಶ್ಲೇಷಿಸುವ ಪ್ರಯತ್ನವನ್ನೂ ಸಹ ಈ ಪ್ರಬಂಧದ ರಚನೆಯಲ್ಲಿ ಮಾಡಲಾಗಿದೆ.

## ಅಧ್ಯಯನದ ಉದ್ದೇಶ

ಸಾಮಾನ್ಯವಾಗಿ ಯಾವುದೇ ಒಂದು ವಿಷಯದ ಕುರಿತಾದ ಅಧ್ಯಯನವು ವಸ್ತುನಿಷ್ಠವಾಗಿ ನಡೆಯಬೇಕಾದರೆ ಅದು ತನ್ನದೇ ಆದ ನಿರ್ದಿಷ್ಟ ಗುರಿ ಮತ್ತು ಉದ್ದೇಶವನ್ನು ಒಳಗೊಂಡಿರಬೇಕು. ಒಂದು ವೇಳೆ ಈ ನಿರ್ದಿಷ್ಟ ಗುರಿ ಮತ್ತು ಉದ್ದೇಶವನ್ನು ಹೊರೆತು ಪಡಿಸಿ ಅಧ್ಯಯನವನ್ನು ನಡೆಸಿದರೆ ಅದು ವಸ್ತುನಿಷ್ಠ ಅಧ್ಯಯನ ಎನಿಸಿಕೊಳ್ಳುವುದಿಲ್ಲ ಅಧ್ಯಯನದಲ್ಲಿ ಉದ್ಭವಿಸುವ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳುವುದಾಗಿರುವ ಈ ಗುರಿ ಮತ್ತು ಉದ್ದೇಶಗಳು ಸಂಶೋಧನಾ ಕಾರ್ಯಕ್ಕೆ ಯಾವಾಗಲೂ ಮಾರ್ಗಸೂಚಿಯಾಗಿ ಕಾರ್ಯನಿರ್ವಹಿಸುವಂತಿರಬೇಕು. ಒಂದು ದೇಶದ ಇತಿಹಾಸವನ್ನು ಒಬ್ಬ ವ್ಯಕ್ತಿ ಸಮಗ್ರವಾಗಿ ಅಧ್ಯಯನ ನಡೆಸುವುದು ಕಷ್ಟಸಾಧ್ಯ. ಈ ಕಾರಣದಿಂದ ಹಾಗೂ ಚರಿತ್ರೆ ಮತ್ತು ಸಂಸ್ಕೃತಿಯನ್ನು ಬಿಡಿಬಿಡಿಯಾಗಿ ಅಧ್ಯಯನಿಸುವುದರ ಸಲುವಾಗಿ ಇತಿಹಾಸವನ್ನು ವಿವಿಧ ದೃಷ್ಟಿಕೋನಗಳಿಂದ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಈ ನಿಟ್ಟಿನಲ್ಲಿ ಚಾರಿತ್ರಿಕ ಮತ್ತು ಸಾಂಸ್ಕೃತಿಕ ದೃಷ್ಟಿಯಿಂದ ಸ್ಥಳೀಯ ಇತಿಹಾಸದ ಪುನರ್ರಚನೆಯ ಅಧ್ಯಯನವನ್ನು ಕೈಗೊಳ್ಳುವುದು ಹೆಚ್ಚು ಉಪಯುಕ್ತಕರವೆನಿಸಿಕೊಳ್ಳುತ್ತದೆ.

ಮೊಳಕಾಲ್ಮೂರು ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ ಎಂಬ ಪ್ರಸ್ತುತ ಅಧ್ಯಯನದ ಶೀರ್ಷಿಕೆಗೆ ಸಂಬಂಧಿಸಿದಂತೆ ಈ ಪಟ್ಟಣದ ವ್ಯಾಪ್ತಿಯಲ್ಲಿ ಕಂಡುಬರುವ ಇತಿಹಾಸದ ಪುಟಗಳಲ್ಲಿ ಅಥವಾ ಬೇರೆ ಯಾವುದೋ ಕಾಲದ ಪರಿಣಾಮವೆಂಬಂತೆ ಮೂಲೆಗುಂಪಾಗಿರುವಂತಹ ಚಾರಿತ್ರಿಕ

ಮತ್ತು ಸಾಂಸ್ಕೃತಿಕ ಸಂಗತಿಗಳನ್ನು ವ್ಯವಸ್ಥಿತವಾಗಿ ಕಟ್ಟಿಕೊಡುವುದರ ಜೊತೆಗೆ ಲಭ್ಯವಿರುವ ಮೂಲಧಾರಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸುವುದರ ಮೂಲಕ, ಸತ್ಯದ ಓರೆಗಲ್ಲಿಗೆ ಹಚ್ಚಿ ಹೊರತರುವಂತಹ ಸಣ್ಣ ಪ್ರಾಮಾಣಿಕ ಪ್ರಯತ್ನವನ್ನು ಮಾಡುವುದು ಈ ಅಧ್ಯಯನದ ಪ್ರಮುಖ ಉದ್ದೇಶವಾಗಿದೆ.

ಪ್ರಾಗೈತಿಹಾಸಿಕ ಹಾಗೂ ಐತಿಹಾಸಿಕ ದೃಷ್ಟಿಯಿಂದ ಮಹತ್ವ ಪಡೆದಿರುವ ಈ ಪಟ್ಟಣ ಹಾಗೂ ಸುತ್ತಮುತ್ತಲಿನ ಪರಿಸರದ ಭೌಗೋಳಿಕತೆಯ ಸನ್ನಿವೇಶವನ್ನು ಗಮನದಲ್ಲಿಟ್ಟುಕೊಂಡು ಶಿಲಾಯುಗದ ಮಾನವನ ಕುರುಹುಗಳ ಶೋಧನೆ ಮತ್ತು ಚಾರಿತ್ರಿಕ ಯುಗಕ್ಕೆ ಸಂಬಂಧಿಸಿದಂತೆ ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಆಡಳಿತ ನಡೆಸಿದ ವಿವಿಧ ರಾಜಮಹಾರಾಜರುಗಳು ಹಾಗೂ ಪಾಳೆಯಗಾರರು ನೀಡಿರುವ ಕೊಡುಗೆಗಳ ಬಗ್ಗೆ ವಿವರಿಸುವ ಉದ್ದೇಶವನ್ನು ಹೊಂದಿದೆ. ಈ ಹಿನ್ನೆಲೆಯಲ್ಲಿ ಮೊಳಕಾಲ್ಮೂರು ಪಟ್ಟಣದ ಪರಿಸರವನ್ನು ವಿವರಣಾತ್ಮಕ ಹಾಗೂ ವಿಶ್ಲೇಷಣಾತ್ಮಕ ಅಧ್ಯಯನಕ್ಕೆ ಒಳಪಡಿಸುವುದಾಗಿದೆ. ಅಷ್ಟೇ ಅಲ್ಲದೇ ಕ್ಷೇತ್ರಕಾರ್ಯದ ಮೂಲಕ ಪ್ರಾಚೀನ ಅವಶೇಷಗಳನ್ನು ಗುರುತಿಸಿ ಅವುಗಳನ್ನು ದಾಖಲಿಸುವುದು, ಆ ಪ್ರದೇಶದಲ್ಲಿ ನಿರ್ಮಾಣವಾದ ಎಲ್ಲಾ ಬಗೆಯ ಸ್ಮಾರಕಗಳನ್ನು ಅಧ್ಯಯನಕ್ಕೆ ಒಳಪಡಿಸುವುದು, ಈ ಪ್ರದೇಶದ ಬಗ್ಗೆ ಮಾಹಿತಿಯನ್ನು ತಿಳಿದಿರುವಂತಹ ವಿಶೇಷ ಇತಿಹಾಸ ಕಾರರನ್ನು ಹಾಗೂ ಇಲ್ಲಿ ಅಧ್ಯಯನ ಕೈಗೊಂಡ ಸಂಶೋಧನಾ ಕಾರರನ್ನು ಸಂದರ್ಶಿಸುವುದರ ಮೂಲಕ ಮಾಹಿತಿ ಸಂಗ್ರಹಿಸುವುದು, ಲೇಖನಗಳು, ವೃತ್ತಾಂಶಗಳು ಮತ್ತು ಗೆಸೆಟಿಯರ್‌ಗಳನ್ನು ಪರಿಶೀಲಿಸಿ, ಹೊಸ ಮಾಹಿತಿಗಳನ್ನು ಸೇರ್ಪಡೆ ಮಾಡುವುದರ ಮೂಲಕ ಇದುವರೆಗೆ ಬೆಳಕಿಗೆಬಾರದ ಸ್ಮಾರಕಾವಶೇಷಗಳ ಅಜ್ಞಾತವಾಗಿರುವ ಚರಿತ್ರೆ, ಸಂಸ್ಕೃತಿಯನ್ನು ವಿಶ್ಲೇಷಣೆ ಮಾಡುವುದರ ಮುಖಾಂತರವಾಗಿ ಹೊಸ ಮಾಹಿತಿಯನ್ನು ನೀಡುವುದು ಈ ಪ್ರಬಂಧದ ಪ್ರಮುಖ ಧ್ಯೇಯವಾಗಿದೆ.

ಪ್ರಸ್ತುತ ಪ್ರದೇಶದ ಪ್ರಾಗಿತಿಹಾಸ, ಇತಿಹಾಸ, ಸ್ಥಳನಾಮದ ಹುಟ್ಟು ಬೆಳವಣಿಗೆ, ವಿಕಾಸ, ಹಿನ್ನಲೆ, ಹಾಗೂ ಇಲ್ಲಿನ ಕೋಟೆಕೊತ್ತಲ, ದೇವಾಲಯ, ಮೂರ್ತಿಶಿಲ್ಪ, ಶಾಸನಶಿಲ್ಪಗಳೆಂಬ ಮೊದಲಾದ ಸ್ಮಾರಕಾವಶೇಷಗಳ ಕುರಿತಾಗಿರುವ ಚರಿತ್ರೆ ಮತ್ತು ವಿಭಿನ್ನ ಸಂಪ್ರದಾಯ, ಆಚರಣೆ ಹಾಗೂ ನಂಬಿಕೆಗಳ ಸೂಕ್ಷ್ಮ ಚಿತ್ರಣವನ್ನು ವಿಶಿಷ್ಟವಾದ ರೀತಿಯಲ್ಲಿ ಅತ್ಯಮೂಲ್ಯವಾದ ಹಾಗೂ ಸಮಗ್ರವಾದ ಮಾಹಿತಿಯನ್ನು ಬಿಂಬಿಸುವಂತಹ ಕಾರ್ಯವನ್ನು ಮಾಡಲಾಗಿದೆ.

ಒಟ್ಟಾರೆಯಾಗಿ ಮೊಳಕಾಲ್ಮೂರು: ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ ಎಂಬ ಶೀರ್ಷಿಕೆಯ ವಿಷಯಕ್ಕೆ ಪೂರಕವಾಗಿ ಈ ಪ್ರದೇಶ ಹಾಗೂ ಅದರ ಸುತ್ತಮುತ್ತಲಿನ ಪರಿಸರದಲ್ಲಿ ದೊರೆಯುವ ಪುರಾತತ್ವ ಆಕರಗಳನ್ನು ಸಂಗ್ರಹಿಸುವ ಹಾಗೂ ವಿಶ್ಲೇಷಿಸುವುದರ ಮೂಲಕ ಸ್ಥಳೀಯ ಚರಿತ್ರೆಯನ್ನು ಕಟ್ಟಿಕೊಡಲು ಪ್ರಯತ್ನಿಸಲಾಗಿದೆ. ಅಷ್ಟೇ ಅಲ್ಲದೇ ಈ ಪ್ರದೇಶದಲ್ಲಿ ಈವರೆಗೆ ಲಭ್ಯವಿರುವ

ಪ್ರಾಚ್ಯವಶೇಷಗಳ ಅಧ್ಯಯನದ ಜೊತೆಗೆ ಕ್ಷೇತ್ರಕಾರ್ಯವನ್ನು ಕೈಗೊಂಡು, ಸಂದರ್ಶನಗಳ ಮೂಲಕ ಪ್ರಚಲಿತವಾಗಿರುವ ಐತಿಹ್ಯ ಮತ್ತು ಕಥನಗಳನ್ನು ದಾಖಲಿಸಿಕೊಳ್ಳಲಾಗಿದೆ, ಅಂತಿಮವಾಗಿ ಸಂಗ್ರಹಿತ ಸಂಪನ್ಮೂಲವನ್ನು ವಿವೇಚಿಸಿ ಚರಿತ್ರೆಯಲ್ಲಿ ಅಜ್ಞಾತವಾಗಿರುವ ಅಂಶಗಳನ್ನು ಸಾಂಸ್ಕೃತಿಕ ದೃಷ್ಟಿಕೋನದಲ್ಲಿ ಈ ಪಟ್ಟಣದ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಕೊಡುಗೆಗಳನ್ನು ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಯಲ್ಲಿ ಬೆಳಕಿಗೆ ತರುವುದು ಈ ಪ್ರಬಂಧದ ಪ್ರಮುಖ ಉದ್ದೇಶವಾಗಿದೆ.

## ಅಧ್ಯಯನದ ವ್ಯಾಪ್ತಿ

ಸಂಶೋಧನೆಯ ಪ್ರತಿಯೊಂದು ಅಧ್ಯಯನವನ್ನು ನೋಡಿದಾಗ ಅದು ಸ್ಪಷ್ಟವಾಗಿ ಗುರುತಿಸಲಾಗಿರುವ ವ್ಯಾಪ್ತಿ, ಮೇರೆಗಳನ್ನು ಹೊಂದಿರುತ್ತದೆ. ಸರಿಯಾಗಿ ಗುರುತಿಸಿರುವ ಉಲ್ಲೇಖಗಳಿಲ್ಲದ ಅಧ್ಯಯನ ಕ್ಷೇತ್ರವನ್ನು ಗುರುತಿಸುವುದು ಅಪಾಯಕರ. ಅದೊಂದು "ಭೂಪಟವಿಲ್ಲದೆ ಸಮುದ್ರದಲ್ಲಿ ಚಲಿಸುವ ಹಡಗಿನಂತೆ" ವಿಷಯಗಳನ್ನು ಸ್ಪಷ್ಟವಾಗಿ ಅರ್ಥಮಾಡಿಕೊಂಡು ಸಂಪೂರ್ಣವಾದ ಅರಿವನ್ನು ಗಳಿಸಬೇಕಾದರೆ ಅಧ್ಯಯನದ ವ್ಯಾಪ್ತಿಯನ್ನು ನಿರ್ಧರಿಸಬೇಕಾದುದು ಅವಶ್ಯಕ. ಈ ಪ್ರಸ್ತುತ ಮೊಳಕಾಲ್ಮೂರು ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನದ ವ್ಯಾಪ್ತಿಯನ್ನು ಭೌಗೋಳಿಕ ಮತ್ತು ಕಾಲಾವಧಿ ದೃಷ್ಟಿಯಿಂದ ನಿರ್ಧರಿಸಿಕೊಳ್ಳಲಾಗಿದೆ ಭೌಗೋಳಿಕವಾಗಿ ಅಧ್ಯಯನ ಕ್ಷೇತ್ರದ ಹೆಸರೇ ಹೇಳುವಂತೆ ಮೊಳಕಾಲ್ಮೂರು ಚಾರಿತ್ರಿಕ ಸಾಂಸ್ಕೃತಿಕ ಅಧ್ಯಯನದ ವ್ಯಾಪ್ತಿಯು ಮೊಳಕಾಲ್ಮೂರು ಪಟ್ಟಣಕ್ಕೆ ಸೀಮಿತಗೊಂಡಿದೆ. ಅಧ್ಯಯನದ ಅವಶ್ಯಕತೆಗಾಗಿ ಅದರ ಸುತ್ತಲಿನ ಪರಿಸರ ಹಾಗೂ ಸೂಲೇನಹಳ್ಳಿ ಹಾನಗಲ್, ಮತ್ತು ಕರ್ನಾಟಕ ಆಂದ್ರಪ್ರದೇಶದ ಗಡಿಭಾಗವಾದ ರಾಯದುರ್ಗ ಎಂಬ ನೆಲೆಗಳನ್ನು ತನ್ನ ಮೇರೆಗಳಾಗಿ ಹೊಂದಿದೆ. ಕಾಲಾವಧಿಯಿಂದ ಪ್ರಾಗಿತಿಹಾಸ ಕಾಲದಿಂದ ಪ್ರಸ್ತುತ ಇಂದಿನವರೆಗಿನ ಮೊಳಕಾಲ್ಮೂರುವಿನ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಇತಿಹಾಸವನ್ನು ಕುರಿತು ಸಮಗ್ರವಾಗಿ ಅಧ್ಯಯನ ಮಾಡಲಾಗಿದೆ.

## ಅಧ್ಯಯನದ ವಿಧಾನ

ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನದ ಹಿನ್ನೆಲೆಯನ್ನು ಗಮನದಲ್ಲಿಟ್ಟುಕೊಂಡು ಕೈಗೊಂಡಿರುವ ಪ್ರಸ್ತುತ ಅಧ್ಯಯನವು ಕ್ಷೇತ್ರಕಾರ್ಯ ಆಧಾರಿತವಾದುದಾಗಿದೆ. ವಿಷಯಕ್ಕೆ ಸಂಬಂಧಿಸಿದಂತೆ ಕ್ಷೇತ್ರಕಾರ್ಯವನ್ನು ಕೈಗೊಳ್ಳುವುದರ ಮೂಲಕ ಅಧ್ಯಯನದ ವ್ಯಾಪ್ತಿಗೆ ಒಳಪಡುವ ಪ್ರತಿಯೊಂದು ಸ್ಮಾರಕಗಳ ಬಗ್ಗೆ ದೊರೆಯುವ ಸಂಪನ್ಮೂಲ, ಅವಶೇಷಗಳನ್ನು ಕಲೆಹಾಕಿ, ಪರಿಶೀಲಿಸಿ ದಾಖಲಿಸಿಕೊಳ್ಳಲಾಗಿದೆ. ಪ್ರಾಗೈತಿಹಾಸಿಕ ಕಾಲದ ಪ್ರಾಚ್ಯಾವಶೇಷಗಳು, ಶಾಸನಗಳು, ಕೋಟೆ ಕೊತ್ತಲಗಳು, ದೇವಾಲಯ, ಮೂರ್ತಿ ಶಿಲ್ಪಗಳು ಮೊದಲಾದ ಸ್ಮಾರಕಾವಶೇಷಗಳ ದಾಖಲೀಕರಣ, ಛಾಯಾಚಿತ್ರಗಳನ್ನು ಹಾಕಿಕೊಳ್ಳಲಾಗಿದೆ. ಈ ಪ್ರದೇಶದಲ್ಲಿನ ಮೌಖಿಕ ಕಥನ, ಐತಿಹ್ಯಗಳನ್ನು ತಿಳಿದಿರುವಂತಹ ಸಂಪನ್ಮೂಲ ವ್ಯಕ್ತಿಗಳನ್ನು ಸಂದರ್ಶಿಸುವುದರ ಮೂಲಕ ಜಾನಪದ ವೈಶಿಷ್ಟತೆಯ

ಸಂಗತಿಗಳು, ಸ್ಥಳೀಯ ಚರಿತ್ರೆ ಸಾಂಸ್ಕೃತಿಕ ಪರಂಪರೆಯ ನಂಬಿಕೆ ಉತ್ಸವಾಚರಣೆ ಮೊದಲಾದವುಗಳಿಗೆ ಸಂಬಂಧಿಸಿದ ಪೂರಕ ಮಾಹಿತಿಯನ್ನು ಕ್ರೋಢೀಕರಿಸಲಾಯಿತು. ಅಧ್ಯಯನಕ್ಕೆ ಪೂರಕವಾಗಿ ದೊರೆಯುವ/ದೊರೆತಿರುವ ಸರ್ಕಾರಿ ದಾಖಲೆ ಪತ್ರಗಳು, ಲೇಖನಗಳು, ನಿಯತಕಾಲಿಕೆಗಳು, ದಿನಪತ್ರಿಕೆಗಳು, ಸಂಶೋಧನಾ ಎಂ.ಫಿಲ್.ಮತ್ತು ಪಿಎಚ್.ಡಿ ಸಂಶೋಧನಾ ಪ್ರಬಂಧಗಳು ಸೇರಿದಂತೆ ಎಲ್ಲಾ ಬಗೆಯ ಪ್ರಾಥಮಿಕ ಹಾಗೂ ಅನುಷಂಗಿಕ ಆಕರಗಳನ್ನು ಸಂಗ್ರಹಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಸಂಪ್ರಬಂದದ ರಚನೆಯಲ್ಲಿ ಪ್ರಚಲಿತದಲ್ಲಿರುವ ಇತಿಹಾಸ ಮತ್ತು ಸಾಂಸ್ಕೃತಿಕ ಅಧ್ಯಯನದ ವಿಧಾನಗಳನ್ನು ಅಳವಡಿಸಿಕೊಂಡು ಚಾರಿತ್ರಿಕ ಮತ್ತು ಸಾಂಸ್ಕೃತಿಕ ಆಕರಗಳನ್ನು ವಿಷಯಾನುಸಾರವಾಗಿ ವಿಮರ್ಶಿಸಿ, ವಿಶ್ಲೇಷಿಸಿ, ಸಂಯೋಜಿಸಿ, ಅಂತರ್‌ಶಿಸ್ತಿಯ ಅಧ್ಯಯನದ ಮೂಲಕ ಈ ಪಟ್ಟಣದ ಚಾರಿತ್ರಿಕ ಸಾಂಸ್ಕೃತಿಕ ಪರಂಪರೆಯ ಇತಿಹಾಸವನ್ನು ಯಾವುದೇ ಪೂರ್ವಗ್ರಹಪೀಡನೆಗೆ ಒಳಗಾಗದೇ ನಿರೂಪಿಸಲಾಗಿದೆ. ಈ ಪ್ರಬಂಧದ ರಚನೆಯನ್ನು ವೈಜ್ಞಾನಿಕವಾಗಿ ಮತ್ತು ವಸ್ತುನಿಷ್ಠವಾದ ವಿಧಾನಗಳನ್ನು ಪ್ರಮಾಣಿಕವಾಗಿ ಬಳಸಿಕೊಳ್ಳಲು ಪ್ರಯತ್ನಿಸಲಾಗಿದೆ.

## ಅಧ್ಯಯನದ ಸಮೀಕ್ಷೆ

ಮೊಳಕಾಲ್ಮೂರಿನ ಶಾಸನಗಳು, ದೇವಾಲಯಗಳು, ಕೋಟೆ ಕೊತ್ತಲಗಳು, ಗವಿವರ್ಣಚಿತ್ರಗಳು, ಪ್ರಾಚ್ಯಾವಶೇಷಗಳು, ಸಾಹಿತ್ಯ ಜಾನಪದ, ಸ್ಥಳನಾಮ ಎಂಬ ಹತ್ತು ಹಲವು ವಿಷಯಗಳಿಗೆ ಪೂರಕವಾಗಿ ಇಡಿಯಾಗಿ ಅಧ್ಯಯನ ಕೈಗೊಳ್ಳದಿದ್ದರೂ ಬಿಡಿಯಾದ ಅಧ್ಯಯನಗಳನ್ನು ಕೈಗೊಂಡಿರುತ್ತಾರೆ. ಅಷ್ಟೇ ಅಲ್ಲದೇ ಕೆಲವರು ಸಮಗ್ರ ಅಧ್ಯಯನವನ್ನು ಮಾಡಿದ್ದಾರೆ. ಆದರೆ ತಾಲೂಕು ಕೇಂದ್ರವಾಗಿರುವ ಮೊಳಕಾಲ್ಮೂರು ಪಟ್ಟಣವನ್ನು ಪ್ರಧಾನವಾಗಿಟ್ಟುಕೊಂಡು ನಡೆಸಿದ ಸೂಕ್ಷ್ಮ ಅಧ್ಯಯನಗಳ ಕೊರತೆ ಕಂಡುಬರುತ್ತದೆ. ಹೀಗಾಗಿ ಮೊಳಕಾಲ್ಮೂರು ಪಟ್ಟಣವನ್ನು ಸೀಮಿತಗೊಳಿಸಿಕೊಂಡು ಅಧ್ಯಯನಿಸುವ ಅಗತ್ಯವಿರುವುದರಿಂದ ಇಲ್ಲಿನ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ ಕೈಗೊಂಡಿರುವೆ. ಈ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನಕ್ಕೆ ಸಂಬಂಧಿಸಿದಂತೆ ಈ ವರೆಗೆ ನಡೆದಿರುವ ಅಧ್ಯಯನಗಳ ಸಂಪೂರ್ಣ ಸಮೀಕ್ಷೆ ಈ ಕೆಳಗಿನಂತಿದೆ.

ಬಿ.ಎಲ್.ರೈಸ್ ಅವರ ಸಂಪಾದಕತ್ವದಲ್ಲಿ ಹೊರಬಂದ **'ಎಫಿಗ್ರಫಿ ಕರ್ನಾಟಿಕ'** ಸಂಪುಟ-೧೧ ರಲ್ಲಿ ಮೊಳಕಾಲ್ಮೂರು ತಾಲೂಕಿನಲ್ಲಿ ಕಂಡುಬರುವ ೪೭ ಶಾಸನಗಳಿವೆ. ಅವುಗಳಲ್ಲಿ ಮೊಳಕಾಲ್ಮೂರು ಕೋಟೆಯಲ್ಲಿರುವ ಪಾಳೆಯಗಾರರ ಕಾಲದ ಶಾಸನ ಹಾಗೂ ಮೊಳಕಾಲ್ಮೂರು ಆರಾಧ್ಯದೈವನಾದ ನುಂಕೀಮಲೆ ಸಿದ್ದೇಶ್ವರ ದೇವಾಲಯಕ್ಕೆ ಸಂಬಂಧಿಸಿದ ಕದಂಬರ ಕಾಲದ ಶಾಸನಗಳಿವೆ.

ಕಾಮತ್.ಯು. ಸೂರ್ಯನಾಥ ಅವರ ಸಂಪಾದಕತ್ವದಲ್ಲಿ ಹೊರಬಂದ **'ಕರ್ನಾಟಕ ರಾಜ್ಯ ಗ್ಯಾಸೆಟಿಯರ್'** ಭಾಗ ೩ರಲ್ಲಿ ಮೊಳಕಾಲ್ಮೂರುವಿನ ಸ್ಥಳನಾಮ ಹಾಗೂ ಅಲ್ಲಿನ ಉತ್ತರಕ್ಕಿರುವ ಬೆಟ್ಟ ಪರಿಸರದ ಬಗ್ಗೆ ಮಾಹಿತಿ ದೊರೆಯುತ್ತದೆ.

ಕೆ.ಎನ್. ಭೀಮರೆಡ್ಡಿ ಅವರ **'ಮೊಳಕಾಲ್ಮೂರು ತಾಲೂಕು ದರ್ಶನ'** ಎಂಬ ಪುಸ್ತಕದಲ್ಲಿ ಮೊಳಕಾಲ್ಮೂರು ಪಟ್ಟಣದಲ್ಲಿರುವ ಸ್ಮಾರಕ ಆವಶೇಷಗಳು, ಸ್ಥಳನಾಮ, ಮೊದಲಾದವುಗಳ ಕುರಿತಾಗಿ ಚರ್ಚಿಸಲಾಗಿದೆ.

ಜಯಣ್ಣ ಉಲ್ಲಾನಹಳ್ಳಿ ಅವರ 'ಇತಿಹಾಸ ದರ್ಶನ' ಸಂ.೧೭ರಲ್ಲಿ ಮಂಡಿಸಲಾದ **'ಮೊಳಕಾಲ್ಮೂರು ತಾಲೂಕು ಹಾನಗಲ್ಲಿನ ಪುರಾತತ್ವ ಸಮೀಕ್ಷೆ'** ಎಂಬ ಲೇಖನದಲ್ಲಿ ಮೊಳಕಾಲ್ಮೂರು ಸಮೀಪದಲ್ಲಿರುವ ಹಾನಗಲ್‌ನಲ್ಲಿ ದೊರೆತ ಶಿಲಾಯುಗದ ಮಾನವನ ಪ್ರಚ್ಯಾವಶೇಷಗಳು (ನವಶಿಲಾಯುಗ) ಬೆಳಕಿಗೆ ತಂದಿರುತ್ತಾರೆ. ಹಾಗೆಯೇ ಸಂ. ೧೫ರಲ್ಲಿ ತಿಪ್ಪೇಸ್ವಾಮಿ ಹೆಚ್. ಅವರು ಮೊಳಕಾಲ್ಮೂರು ಬೆಟ್ಟಕ್ಕೆ ತಾಗಿಕೊಂಡಂತಿರುವ **'ನುಂಕೀಮಲೆ ಪರಿಸರದಲ್ಲಿ ಪ್ರಾಗೈತಿಹಾಸಿಕ ನೆಲೆಗಳ ಶೋಧನೆ'**ಗೆ ಸಂಬಂಧಿಸಿದಂತೆ ವಿವಿಧ ಮಾದರಿಯ ನವಶಿಲಾಯುಗದ ಆಯುಧೋಪಕರಣ ಗಳನ್ನು ಶೋಧಿಸಿ ಪ್ರಾಗೀತಿಹಾಸದ ಅಧ್ಯಯನಕ್ಕೆ ದಾರಿ ಮಾಡಿಕೊಟ್ಟಿದ್ದಾರೆ.

ಜಯಣ್ಣ ಯು. ಅವರ **'ಮೊಳಕಾಲ್ಮೂರು ತಾಲೂಕಿನ ಪುರಾತತ್ವೀಯ ಪರಿಸರ'** ಎಂಬ ಅಪ್ರಕಟಿತ ಪಿಎಚ್.ಡಿ.ಮಹಾಪ್ರಬಂಧದಲ್ಲಿ ಪ್ರಾಗಿತಿಹಾಸಕ್ಕೆ ಸಂಬಂಧಿಸಿದಂತೆ, ಮೊಳಕಾಲ್ಮೂರು ಪಟ್ಟಣದಲ್ಲಿರುವ ಬೃಹತ್ ಶಿಲಾಯುಗಕ್ಕೆ ಸಂಬಂಧಿಸಿದ ವಿವಿಧ ಮಾದರಿಯ ಸಮಾಧಿಗಳನ್ನು ಶೋಧಿಸಿರುತ್ತಾರೆ. ಹಾಗೂ ಇಲ್ಲಿನ ಶಾಸನಗಳು ಸೇರಿದಂತೆ ಮೊದಲಾದ ಸ್ಮಾರಕ ಅವಶೇಷಗಳ ಬಗ್ಗೆ ಚರ್ಚಿಸಲಾಗಿದೆ.

ಶಿವತಾರಕ್ ಕೆ.ಬಿ. ಅವರ **'ಕರ್ನಾಟಕದ ಪುರಾತತ್ವ ನೆಲೆಗಳು'** ಎಂಬ ಗ್ರಂಥದಲ್ಲಿ ಮೊಳಕಾಲ್ಮೂರು ಒಂದು ಬೃಹತ್ ಶಿಲಾಯುಗಕ್ಕೆ ಸಂಬಂಧಿಸಿದ ನೆಲೆ ಎಂದು ದಾಖಲಿಸಿರುತ್ತಾರೆ.

ಚಂದ್ರಶೇಖರಯ್ಯ ಬಿ.ಎಂ. ಅವರ **'ಕರ್ನಾಟಕದ ಸಾಂಸ್ಕೃತಿಕ ಇತಿಹಾಸ ಪರಂಪರೆ'** ಎಂಬ ಗ್ರಂಥದಲ್ಲಿ ಮೊಳಕಾಲ್ಮೂರುವಿನ ರೇಷ್ಮೆ ಸೀರೆಗಳ ನೇಯ್ಗೆಗೆ ಸಂಬಂಧಿಸಿದಂತೆ ಮಾಹಿತಿಯನ್ನು ನೀಡುತ್ತದೆ.

ತ.ಸು.ಶಾಮರಾಯರು ಬರೆದಿರುವ **'ಮೂರು ತಲೆಮಾರು'** ಎಂಬ ಗ್ರಂಥವು ಮೊಳಕಾಲ್ಮೂರಿನ ಬಡ ಬ್ರಾಹ್ಮಣನಿಗೆ ಮೈಸೂರು ಒಡೆಯರು ಮರ್ಲಹಳ್ಳಿ ಎಂಬ ಗ್ರಾಮವನ್ನು ದತ್ತಿಯಾಗಿ ನೀಡಿರುವ ವಿಚಾರ ಹಾಗೂ ಮೊಳಕಾಲ್ಮೂರುವಿನಲ್ಲಿರುವ ವೆಂಕಟರಮಣ ದೇವಾಲಯದ ನಿರ್ಮಾಣ, ವಿಗ್ರಹ ಪ್ರತಿಷ್ಠಾಪನೆ, ಪೂಜಾರಿಕೆಗೆ ಸಂಬಂಧಿಸಿದ ಮಾಹಿತಿಯನ್ನು ನೀಡುತ್ತದೆ.

ಮರಿಕುಂಟೆ ತಿಪ್ಪೇಸ್ವಾಮಿ ಅವರ **'ಮೊಳಕಾಲ್ಮೂರು ದರ್ಶನ'** ಎಂಬ ಪುಸ್ತಕದಲ್ಲಿ ಮೊಳಕಾಲ್ಮೂರಿನಲ್ಲಿರುವ ಶಾಸನಗಳು ಹಾಗೂ ಅಲ್ಲಿರುವ ವೀರಗಲ್ಲು ಮಹಾಸತಿಕಲ್ಲು ಎಂಬ ಮೊದಲಾದ ಸ್ಮಾರಕಗಳ ಬಗ್ಗೆ ಅಧ್ಯಯನ ನಡೆಸಿದ್ದಾರೆ.

ಮೊಳಕಾಲ್ಮೂರಿನ ಸ್ಥಳನಾಮಕ್ಕೆ ಸಂಬಂಧಿಸಿದಂತೆ ಮೈಲಾರಪ್ಪ ಅವರ ಅಪ್ರಕಟಿತ ಎಂ.ಫಿಲ್.ಪ್ರಬಂಧವಾದ **'ಮೊಳಕಾಲ್ಮೂರು ತಾಲೂಕಿನ ಸ್ಥಳನಾಮಗಳು'** ಎಂಬ ಅಧ್ಯಾಯನದಲ್ಲಿ ವಿವರಿಸಿರುತ್ತಾರೆ ಶಂ.ಬಾ.ಜೋಶಿ ಅವರ **'ಎಡೆಗಳು ಹೇಳುವ ಕಂನಾಡಕತೆ'** ಯಲ್ಲಿಯೂ ಸಹ ಇಲ್ಲಿನ ಸ್ಥಳನಾಮದ ಕುರಿತಾದ ಮಾಹಿತಿ ಲಭ್ಯವಾಗುತ್ತದೆ.

ಮೊಳಕಾಲ್ಮೂರಿನ ಉತ್ತರಕ್ಕಿರುವ ಬೆಟ್ಟದ ಮೇಲಿರುವ ಕೋಟೆಯ ಬಗ್ಗೆ ಚನ್ನಬಸಪ್ಪ ಎಸ್. ಪಾಟೇಲರ **'ಕರ್ನಾಟಕ ಕೋಟೆಗಳು'** ಎಸ್.ಕೆ.ಜೋಶಿ ಅವರ **'ಕರ್ನಾಟಕದ ಕೋಟೆಕೊತ್ತಲಗಳು'** ಭಾಗ–೧, ಹಾಗೂ ಎಸ್.ತಿಪ್ಪೇಸ್ವಾಮಿ ಅವರ **'ರಕ್ಷಣಾವಾಸ್ತುಶಿಲ್ಪ ಚಿತ್ರದುರ್ಗ ಜಿಲ್ಲೆ'** ಎಂಬ ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ ದಲ್ಲಿ ಅಧ್ಯಯನಗಳು ನಡೆದಿದ್ದು, ಕೋಟೆಯ ನಿರ್ಮಾಣ, ಇತಿಹಾಸ, ಕುರಿತಾದ ವಿಷಯಗಳಿಗೆ ಸಂಬಂಧಿಸಿದ ಮಾಹಿತಿಗಳು ಲಭ್ಯವಾಗುತ್ತಿವೆ.

ಮೊಳಕಾಲ್ಮೂರಿನ ಆರಾಧ್ಯದೈವನಾದ ನುಂಕೀಮಲೆ ಭೈರವನ ಆರಾಧನೆ ಪರಂಪರೆ, ಪೂಜಾ ವಿಧಿ ವಿಧಾನ, ದೇಗುಲ ನಿರ್ಮಾಣ, ಉತ್ಸವ ಆಚರಣೆ, ಮೊಳಕಾಲ್ಮೂರು ಮತ್ತು ನುಂಕೀಮಲೆಗಿರುವ ಸಂಬಂಧ ಎಂಬ ಮೊದಲಾದ ವಿಷಯಗಳಿಗೆ ಸಂಬಂಧಿಸಿದಂತೆ ಸಿದ್ದಣ್ಣ ಎ. ಅವರ **'ನುಂಕೀಮಲೆ ಭೈರವಾರಾಧನೆ ಹೊಳಹು'** ಎಂಬ ಅಪ್ರಕಟಿತ ಎಂ.ಫಿಲ್. ಪ್ರೌಢಪ್ರಬಂಧದಲ್ಲಿ ಅಧ್ಯಯನಿಸಿರುತ್ತಾರೆ.

ಎಸ್.ವೈ.ಸೋಮಶೇಖರ್ ಅವರ ಸಂಪಾದಕತ್ವದಲ್ಲಿ ಹೊರಬಂದ **'ಬ್ರಹ್ಮಗಿರಿ'** ಎಂಬ ಗ್ರಂಥದಲ್ಲಿ ಮೊಳಕಾಲ್ಮೂರುವಿನ ಪ್ರಾಗಿತಿಹಾಸ, ಇತಿಹಾಸ, ಜಾನಪದ, ಸಾಹಿತ್ಯ, ರಕ್ಷಣಾ ವ್ಯವಸ್ಥೆ, ದೇವಾಲಯಗಳ ವಾಸ್ತುಶಿಲ್ಪ, ಪ್ರಾಗಿತಿಹಾಸ ಕಾಲದ ಚಿತ್ರಕಲೆ, ಶಾಸನ, ವೀರಗಲ್ಲು ಮಹಾಸತಿಕಲ್ಲುಗಳು, ಸ್ವಾತಂತ್ರ್ಯ ಹೋರಾಟ ಚಳುವಳಿ ಎಂಬ ಮೊದಲಾದ ವಿಷಯಗಳ ಮೇಲೆ ಬೆಳಕು ಚೆಲ್ಲುತ್ತದೆ.

ಮೊಳಕಾಲ್ಮೂರಿನ ಕೆಳಸಮುದಾಯ ವರ್ಗದವರ ನಂಬಿಕೆ, ಆಚರಣೆ, ಆಚಾರ ವಿಚಾರಗಳ ಕುರಿತಾಗಿ ಹನುಮಂತಪ್ಪ ಡಿ. ಅವರ **'ಮೊಳಕಾಲ್ಮೂರು ಪರಿಸರದ ಮಾದಿಗ ಸಮುದಾಯದ ಆಚರಣೆಗಳು'** ಎಂಬ ಶೀರ್ಷಿಕೆಯ ಅಡಿಯಲ್ಲಿ ಎಂ.ಫಿಲ್. ಅಧ್ಯಯನವನ್ನು ಕೈಗೊಂಡಿರುತ್ತಾರೆ. ಹಾಗೆಯೇ ಮಲ್ಲಿಕಾರ್ಜುನ ಕೆ. ಅವರ ಜಾನಪದ ಹಿನ್ನೆಲೆಯಲ್ಲಿ **'ಮೊಳಕಾಲ್ಮೂರು ಗ್ರಾಮಾಧ್ಯಯನ ಮತ್ತು ಸ್ಥಿತ್ಯಂತರಗಳು'** ಎಂಬ ವಿಷಯದ ಮೇಲೆ ಎಂ.ಫಿಲ್ ಅಧ್ಯಯನ ನಡೆಸಿದ್ದಾರೆ. ಈ ಎರಡೂ ಪ್ರಬಂಧಗಳು ಅಪ್ರಕಟಿತ ರೂಪದಲ್ಲಿ ದೊರೆಯುತ್ತವೆ.

ಎಚ್.ಎಲ್.ನಾಗೇಗೌಡ **ಅವರ 'ಪ್ರವಾಸಿಕಂಡ ಇಂಡಿಯಾ'** ಸಂ.೮ರಲ್ಲಿ ಹೈದರಾಲಿ ಮತ್ತು ಟಿಪ್ಪುಸುಲ್ತಾನರು ಬಂದಿಸಿದ್ದ ಚೇಲಾ ಪಡೆಯವರು ತಪ್ಪಿಸಿಕೊಂಡಿದರ ಪರಿಣಾಮವಾಗಿ, ಆ ಪಡೆಯಲ್ಲಿದ್ದ ಉಳಿದ ೮ ಜನ ಯುರೋಪಿಯನ್ನರನ್ನು ಕ್ರೂರ ಶಿಕ್ಷೆಗೆ ಒಳಪಡಿಸಿ ೬ ತಿಂಗಳುಗಳ ಕಾಲ ಮೊಳಕಾಲ್ಮೂರು ಕೋಟೆಯೊಳಗೆ ಬಂಧಿಸಿದ ವಿಚಾರದ ಬಗ್ಗೆ ಮಾಹಿತಿ ದೊರೆಯುತ್ತದೆ.

ಲಕ್ಷಣ್ ತೆಲಗಾವಿ ಅವರ **'ಎಪ್ಪತ್ತೇಳು ಪಾಳೆಗಾರರು'** ಎಂಬ ಕೃತಿಯಲ್ಲಿ ಮೊಳಕಾಲ್ಮೂರು ಹರತಿಪಾಳೆಯಗಾರರ ಅಧೀನಕ್ಕೆ, ನಂತರ ರಾಯದುರ್ಗದ ಪಾಳೆಯಗಾರನಿಂದ ಮೊಳಕಾಲ್ಮೂರು ಬೆಟ್ಟ ಪ್ರದೇಶವನ್ನು ನಾಯಕನಹಟ್ಟಿಯ ಕಸ್ತೂರಿ ಬೂದಿ ಮಲ್ಲಪ್ಪ ನಾಯಕನು ಪಡೆದು ಇಲ್ಲಿ ಕೆರೆಯನ್ನು ನಿರ್ಮಿಸಿದರ ಬಗ್ಗೆ, ಇಲ್ಲಿನ ಕೋಟೆಯಲ್ಲಿನ ಬಸವನ ಬಾಗಿಲಬಳಿ ಶಾಸನವೊಂದನ್ನು ಕೆತ್ತಿಸಿದ ವಿಚಾರಗಳು ಗೋಚರಿಸುತ್ತವೆ. ಅಷ್ಟೆ ಅಲ್ಲದೇ ಪಾಳೆಯಗಾರರ ನಂತರ ಹೈದರ್ ಮತ್ತು ಟಿಪ್ಪುಸುಲ್ತಾನರಿಂದ ಕಮೀಷನರ್ಸ್‌ಗಳ ಆಳ್ವಿಕೆಗೆ ಹಾಗೂ ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದ ವರೆಗೆ ಮೊಳಕಾಲ್ಮೂರು ಮೈಸೂರು ರಾಜ್ಯದ ಅಧೀನಕ್ಕೆ ಒಳಪಟ್ಟಿರುವುದರ ಕುರಿತಾಗಿ ಹಲವಾರು ವಿಚಾರಗಳು ತಿಳಿದು ಬಂದಿವೆ/ ಬರುತ್ತವೆ. ಇದೇ ಲೇಖಕರ **'ಚಂದ್ರವಳ್ಳಿ'** ಎಂಬ ಪುಸ್ತಕವು ಮೊಳಕಾಲ್ಮೂರು ಹಿಂದೆ ಯಾವ ಯಾವ ರಾಜಮನೆತನಗಳ ಅಧೀನಕ್ಕೆ ಒಳಗಾಗಿತ್ತು ಎಂಬ ವಿಚಾರವು ಸಹ ನೀಡುತ್ತದೆ.

ಇಷ್ಟು ವಿಚಾರಗಳ ಬಗ್ಗೆ ಈ ಮೇಲಿನ ಅಧ್ಯಯನಗಳು ತಿಳಿಸುತ್ತವೆ. ಆದರೆ ಇವುಗಳೆಲ್ಲಾ ಇಡೀ ಮೊಳಕಾಲ್ಮೂರು ತಾಲೂಕಿಗೆ ಸಂಬಂಧಿಸಿದ ವಿಚಾರಗಳಾಗಿವೆ. ಇದರಿಂದ ಮೊಳಕಾಲ್ಮೂರು ನಗರ/ಪಟ್ಟಣಕ್ಕೆ ಸೀಮಿತಗೊಂಡಂತೆ ಸಂಪೂರ್ಣವಾದ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ವಿಫಲಗೊಂಡಿವೆ. ಈ ನಿಟ್ಟಿನಲ್ಲಿ **'ಮೊಳಕಾಲ್ಮೂರು: ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ'** ಎಂಬ ಶೀರ್ಷಿಕೆಯಡಿಯಲ್ಲಿ ಆ ಭಾಗದ ಅಧ್ಯಯನದ ಕೊರತೆಯನ್ನು ನೀಗಿಸುವ ಪ್ರಯತ್ನ ಮಾಡಲಾಗಿದೆ.

## ಅಧ್ಯಯನದ ಸ್ವರೂಪ

ಈ ಮೇಲಿನ ಅಧ್ಯಯನದ ವಿಧಾನದಲ್ಲಿ ಗಮನಿಸಿದಂತೆ ಹಲವಾರು ವಿಧಾನಗಳನ್ನು ಅನುಸರಿಸಿ ಪ್ರತ್ಯೇಕಿಸಲಾದ ವಿಷಯಗಳನ್ನಿಟ್ಟುಕೊಂಡು ಪ್ರಸ್ತುತ ಅಧ್ಯಯನದ ಪ್ರಬಂದದಲ್ಲಿ ಅಧ್ಯಯನದ ಅನುಕೂಲಕ್ಕಾಗಿ ಐದು ಅಧ್ಯಾಯಗಳನ್ನಾಗಿ ವಿಭಾಗಿಸಿಕೊಳ್ಳಲಾಗಿದೆ. ಈ ಐದು ಅಧ್ಯಾಯಗಳು ಒಳಗೊಂಡಿರುವಂತಹ ವಿಷಯ ಮತ್ತು ತಾತ್ವೀಕ ಸ್ವರೂಪವು ಈ ಕೆಳಕಂಡತಿದೆ.

ಮೊದಲನೆಯ ಅಧ್ಯಾಯವಾದ ಪ್ರಸ್ತಾವನೆಯಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ, ಸ್ವರೂಪ ಮತ್ತು ಇದುವರೆಗೂ ನಡೆದಿರುವ ಅಧ್ಯಯನಗಳ ಸಮೀಕ್ಷೆಯನ್ನು ಕುರಿತಾಗಿ ಸ್ಪಷ್ಟೀಕರಿಸಲಾಗಿದೆ.

ಭೌಗೋಳಿಕತೆ ಮತ್ತು ಚರಿತ್ರೆ ಎಂಬ ಎರಡನೆಯ ಅಧ್ಯಾಯದಲ್ಲಿ ಮೊಳಕಾಲ್ಮೂರು ಪ್ರದೇಶದ ಭೌಗೋಳಿಕ ಪರಿಸರದ ಲಕ್ಷಣಗಳು, ಪ್ರಾಗಿತಿಹಾಸ ಕಾಲದ ಮಾನವನ ಕುರುಹುಗಳು, ಚಾರಿತ್ರಿಕ ಕಾಲದಲ್ಲಿ ಇಲ್ಲಿ ಅಡಳಿತ ನಡೆಸಿದ ವಿವಿಧ ರಾಜಮನೆತನಗಳ ಆಳ್ವಿಕೆ ಹಾಗೂ ಚರಿತ್ರೆಯ ರಚನೆಗೆ

ಅವುಗಳು ನೀಡಿರುವ ಕೊಡುಗೆಗಳ ಬಗ್ಗೆ ಚರ್ಚಿಸಿ ವಿವರಿಸಲಾಗಿದೆ. ಹಾಗೆಯೇ ಮೊಳಕಾಲ್ಮೂರು ಸ್ಥಳನಾಮದ ಕುರಿತಾಗಿಯೂ ಚರ್ಚಿಸಲಾಗಿದೆ.

ಕಲೆ ಮತ್ತು ವಾಸ್ತುಶಿಲ್ಪ ಎಂಬ ಮೂರನೆಯ ಅಧ್ಯಾಯದಲ್ಲಿ ವಾಸ್ತುಶಿಲ್ಪಕ್ಕೆ ಸಂಬಂಧಿಸಿದಂತೆ ದೇವಾಲಯಗಳು ಹಾಗೂ ಕೋಟೆಕೊತ್ತಲಗಳೆಂಬ ದೇಗುಲ ಮತ್ತು ರಕ್ಷಣಾ ವಾಸ್ತುಶಿಲ್ಪದ ಕುರಿತಾಗಿ ಚರ್ಚಿಸಲಾಗಿದೆ. ವಿವಿಧ ಧರ್ಮಿಯ ಮೂರ್ತಿಶಿಲ್ಪಗಳ ಬಗ್ಗೆ ಶಾಸನಗಳು, ಶಾಸನಶಿಲ್ಪಗಳಾದ ವೀರಗಲ್ಲು, ಮಹಾಸತಿಕಲ್ಲುಗಳೆಂಬ ವಿವಿಧ ಸ್ಮಾರಕಾವಶೇಷಗಳ ಹಿಂದೆ ಮರೆಯಾಗಿ ಉಳಿದಿರುವ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಪರಂಪರೆಯ ಕುರಿತು ವಿವರಣಾತ್ಮಕವಾಗಿ ಅಭ್ಯಸಿಸಲಾಗಿದೆ.

ಮೌಖಿಕ ಮತ್ತು ಸಾಂಸ್ಕೃತಿಕ ಪರಂಪರೆ ಎಂಬ ನಾಲ್ಕನೆಯ ಅಧ್ಯಾಯದಲ್ಲಿ ಅಧ್ಯಯನ ಕ್ಷೇತ್ರದಲ್ಲಿನ ಜನರ ನಂಬಿಕೆ, ಆಚರಣೆ, ಜಾತ್ರೆ ಉತ್ಸವಗಳಿಗೆ ಹಾಗೂ ಸ್ಮಾರಕಗಳ ಬಗ್ಗೆ ಸ್ಥಳೀಯರಲ್ಲಿ ಬೇರುಬಿಟ್ಟಿರುವ ಹಾಗೂ ಮೌಖಿಕ ಸಾಂಸ್ಕೃತಿಕ ಪರಂಪರೆಯ ಪ್ರತೀಕಗಳಾಗಿ ಇಂದಿಗೂ ಉಳಿದು ಬಂದಿರುವ ಐತಿಹ್ಯಗಳ ಮೂಲಕ ವಿಭಿನ್ನ ಆಚರಣೆಗಳ ಕುರಿತಾಗಿ ಚರ್ಚಿಸುವ ಪ್ರಯತ್ನವನ್ನು ಮಾಡಲಾಗಿದೆ.

ಕೊನೆಯ ಅಧ್ಯಾಯವಾದ ಸಮಾರೋಪದಲ್ಲಿ ಪ್ರಸ್ತುತ ಅಧ್ಯಯನದ ಸಂಕ್ಷಿಪ್ತರೂಪದ ಬಗ್ಗೆ ಚರ್ಚಿಸಲಾಗಿದೆ.

ಅಧ್ಯಾಯದ ಕೊನೆಯ ಭಾಗದಲ್ಲಿ ಅಂದರೆ ಅನುಬಂದದಲ್ಲಿ ಅಧ್ಯಯನಕ್ಕಾಗಿ ಬಳಸಿಕೊಂಡ ವಿಶ್ವಕೋಶ, ಗ್ಯಾಸೆಟಿಯರ್, ಶಾಸನಸಂಪುಟ, ಕೃತಿ, ಲೇಖನ, ಮತ್ತು ಅಂತರ್ಜಾಲದ ವಿವರಣೆಯನ್ನು ಗ್ರಂಥ ಋಣದಲ್ಲಿ ನೀಡಲಾಗಿದೆ. ಹಾಗೆಯೇ ಅನುಬಂಧವು ನಕ್ಷೆ, ವಕ್ತೃವಿವರ ಹಾಗೂ ಛಾಯಾ ಚಿತ್ರಗಳನ್ನು ಸಹ ಒಳಗೊಂಡಿದೆ.

## ಅಧ್ಯಾಯ ಎರಡು

# ಭೌಗೋಳಿಕತೆ ಮತ್ತು ಚರಿತ್ರೆ

ಜಗತ್ತಿನ ಪ್ರತಿಯೊಂದು ರಾಷ್ಟ್ರ ಹಾಗೂ ಜನಸಮುದಾಯಗಳ ಮೇಲೆ ಭೌಗೋಳಿಕ ಪರಿಸರವು ತನ್ನದೇ ಆದ ಪ್ರಭಾವ ಬೀರಿದೆ. ಏಕೆಂದರೆ ಪ್ರತಿಯೊಂದು ದೇಶದ ಚರಿತ್ರೆಯು ಅಲ್ಲಿನ ಭೌಗೋಳಿಕ ಅಂಶಗಳ ಮೇಲೆ ಆಧಾರಿತವಾಗಿರುತ್ತದೆ. ಆದುದರಿಂದಲೇ ಮಾನವನ ಇತಿಹಾಸ ಆಯಾ ಪ್ರದೇಶಗಳ ಸ್ವಾಭಾವಿಕ ಭೌಗೋಳಿಕ ವಾತಾವರಣವನ್ನು ಅವಲಂಬಿಸಿರುತ್ತದೆ ಹಾಗೂ ಅವುಗಳು ಇತಿಹಾಸವನ್ನು ರೂಪಿಸುತ್ತವೆ. ಭೌಗೋಳಿಕ ಅಂಶಗಳ ಪರಿಜ್ಞಾನವಿಲ್ಲದ ಚರಿತ್ರೆಯ ಅಧ್ಯಯನ ಅರ್ಥವಿಲ್ಲದ ವ್ಯರ್ಥ ಅಧ್ಯಯನವಾಗುತ್ತದೆ. ಏಕೆಂದರೆ "ಇತಿಹಾಸವೆಂಬ ನಾಟಕ ಪ್ರದರ್ಶನಕ್ಕೆ ರಂಗಸಜ್ಜಿಕೆಯಂತಿರುವುದೇ ಭೂಗೋಳ" ಯಾವುದೇ ಒಂದು ಪ್ರದೇಶದ ಪ್ರಾಕೃತಿಕ ಸನ್ನಿವೇಶಗಳನ್ನು ತಿಳಿಯುವಾಗ ಆ ಪ್ರದೇಶದ ಫಲವತ್ತಾದ ಭೂಪ್ರದೇಶ, ಜನ ಸಮುದಾಯಗಳು, ಸ್ವಾಭಾವಿಕ ಸಸ್ಯವರ್ಗ, ಪ್ರಾಣಿವರ್ಗ, ವಾಯುಗುಣ, ಖನಿಜ ಸಂಪತ್ತು, ನದಿ, ಅರಣ್ಯ, ತೀರಪ್ರದೇಶ, ಕಣಿವೆ ಪರ್ವತ ಪ್ರದೇಶಗಳೆಂಬ ಮೊದಲಾದ ಅಂಶಗಳನ್ನು ಗಮನಿಸಬೇಕಾಗುತ್ತದೆ. ಏಕೆಂದರೆ ಭೌಗೋಳಿಕ ಅಂಶಗಳಾದ ಬೆಟ್ಟ, ಗುಡ್ಡ, ನದಿ, ಪರ್ವತ, ಕಣಿವೆ, ಹವಾಗುಣ, ಅರಣ್ಯ ಎಂಬ ಮುಂತಾದ ಅಂಶಗಳು ಒಂದು ಪ್ರದೇಶದ ಜನ ಜೀವನದ ಮೇಲೆ ಹಾಗೂ ಅಲ್ಲಿನ ಜನರ ಉಡುಗೆ-ತೊಡುಗೆ, ಭಾಷೆ, ಆಚಾರ-ವಿಚಾರಗಳ ಮೇಲೆ ಪ್ರಭಾವ ಬೀರಿ ಆ ಪ್ರದೇಶದ ಇತಿಹಾಸ ನಿರ್ಮಾಣಕ್ಕೆ ಸಹಕಾರಿಯಾಗುತ್ತವೆ. ಹೀಗೆ ಇತಿಹಾಸ ಮತ್ತು ಭೂಗೋಳಶಾಸ್ತ್ರಗಳೆರಡು ಪರಸ್ಪರ ನಿಕಟವಾದ ಸಹಸಂಬಂಧವನ್ನು ಹೊಂದಿರುವುದರಿಂದಲೇ "ಇತಿಹಾಸ ಮತ್ತು ಭೂಗೋಳವನ್ನು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ" ಎಂದು ಕರೆಯಲಾಗಿದೆ. ಹಾಗೆಯೇ ಮಾನವನ ರಾಜಕೀಯ, ಧಾರ್ಮಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳು ಭೌಗೋಳಿಕ ಅಂಶಗಳಿಂದಲೇ ಪ್ರಭಾವಿತ ಗೊಂಡಿರುತ್ತವೆ. ಆದ್ದರಿಂದ "ಮಾನವನನ್ನು ನಿಸರ್ಗದ ಶಿಶು" ಎಂತಲೂ, "ಭೌಗೋಳಿಕ

ಅಂಶಗಳನ್ನು ಇತಿಹಾಸದ ಮಾತೃ ಸಂಕೇತ" ಗಳೆಂದು ಕರೆಯುತ್ತೇವೆ. ಇತಿಹಾಸವು ಭೂಗೋಳದಂತೆ ಕಾಲಗಣನ ಶಾಸ್ತ್ರದೊಂದಿಗೂ ಸಹ ತನ್ನದೇ ಆದ ಸಂಬಂಧವನ್ನು ಬೆಸೆದುಕೊಂಡಿರುವುದರಿಂದ ಚರಿತ್ರೆಯ ರಚನೆಯಲ್ಲಿ ಕಾಲಗಣನೆಯು ಸಹ ಪ್ರಮುಖ ಪಾತ್ರ ವಹಿಸುತ್ತದೆ.

ರಾಜ್ಯದ ಬೆಂಗಳೂರು ಆಡಳಿತ ವಿಭಾಗದಲ್ಲಿ ಬರುವ ಚಿತ್ರದುರ್ಗ ಜಿಲ್ಲೆಯ ಆರು ತಾಲೂಕು ಕೇಂದ್ರಗಳಲ್ಲಿ ಒಂದಾಗಿರುವ, ಮೊಳಕಾಲ್ಮೂರು ಅನಾವೃಷ್ಟಿ, ಅಭಾವಗಳಿಗೆ ತುತ್ತಾದರೂ ರೇಷ್ಮೆ ಸೀರೆಗಳಿಗೆ ಇಡೀ ರಾಜ್ಯದಲ್ಲಿಯೇ ಹೆಸರಾಗಿದೆ. ಈ ತಾಲೂಕಿನಲ್ಲಿ ಹಾದು ಹೋಗಿರುವ ಬೀದರ್-ಶ್ರೀರಂಗಪಟ್ಟಣ ರಾಜ್ಯ ಹೆದ್ದಾರಿಯಲ್ಲಿ ಬರುವ ಹಾನಗಲ್ ಕ್ರಾಸ್‌ನಿಂದ ಪೂರ್ವಾಭಿಮುಖವಾಗಿ ಐದು ಕಿ.ಮೀ. ಸಂಚರಿಸಿದರೆ ಮೊಳಕಾಲ್ಮೂರು ಪಟ್ಟಣವು ಕಂಡು ಬರುತ್ತದೆ. ಈ ಪ್ರದೇಶದ ಭೌಗೋಳಿಕತೆಯ ಸಂಕ್ಷಿಪ್ತ ಪರಿಚಯ ಕೆಳಗಿನಂತಿದೆ.

## ಭೌಗೋಳಿಕ ಪರಿಸರ

ಚಿತ್ರದುರ್ಗದಿಂದ ೮೧ ಕಿ.ಮೀ ದೂರದಲ್ಲಿರುವ ಮೊಳಕಾಲ್ಮೂರು ರಾಜಧಾನಿಯಾದ ಬೆಂಗಳೂರಿನಿಂದ ೨೯೫ ಕಿ.ಮೀ. ಅಂತರದಲ್ಲಿದೆ. ಜಿಲ್ಲೆಯ ಅತೀ ಚಿಕ್ಕ ತಾಲೂಕು ಕೇಂದ್ರವಾಗಿರುವ ಮೊಳಕಾಲ್ಮೂರು ಉತ್ತರ ಅಕ್ಷಾಂಶ ೧೪°.೦೪ ರಿಂದ ೧೫°.೦೨, ಪೂರ್ವ ರೇಖಾಂಶ ೨೬°.೪ ರಿಂದ ೭೭°.೦೭ ರವರೆಗೆ ಚಾಚಿಕೊಂಡಿದೆ.[೧] ಈ ಪಟ್ಟಣವು ಉತ್ತರಕ್ಕೆ ನುಂಕೇಮಲೆ ಬೆಟ್ಟ ಶ್ರೇಣಿಯನ್ನು ದಕ್ಷಿಣಕ್ಕೆ ಮರ್ಲಹಳ್ಳಿ, ಪೂರ್ವಕ್ಕೆ ಆಂಧ್ರಪ್ರದೇಶ ಗಡಿ ಭಾಗವಾದ ರಾಯದುರ್ಗ, ಪಶ್ಚಿಮಕ್ಕೆ ಸೂಲೇನಹಳ್ಳಿ ಹಾಗೂ ವಾಯುವ್ಯಕ್ಕೆ ಹಾನಗಲ್ ಎಂಬ ಗ್ರಾಮಗಳನ್ನು ತನ್ನ ಮೇರೆಗಳನ್ನಾಗಿ ಗುರುತಿಸಿಕೊಂಡಿದೆ. ತಾಲೂಕಿನ ಹೋಬಳಿ ಕೇಂದ್ರವಾಗಿರುವ ಮೊಳಕಾಲ್ಮೂರು ೧೫ ವಾರ್ಡ್‌ಗಳು ಮತ್ತು ೩೩೪೯ ಕುಟುಂಬಗಳಿಂದ ಕೂಡಿರುವ ಪಟ್ಟಣ ಪಂಚಾಯಿತಿಯಾಗಿದ್ದು, ಒಟ್ಟಾರೆಯಾಗಿ ೪.೧೦ ಕಿ.ಮೀ. ವಿಸ್ತೀರ್ಣವನ್ನು ಹೊಂದಿದೆ.[೨]

೨೦೧೧ ರ ಜನಗಣತಿಯ ಪ್ರಕಾರ ಈ ಪಟ್ಟಣವು ೧೫,೭೯೭ ಜನಸಂಖ್ಯೆಯನ್ನು ಹೊಂದಿದೆ.[೩] ಇದರಲ್ಲಿ ೭,೯೫೪ ಪುರುಷರ ಸಂಖ್ಯೆಯಾದರೆ ೭,೮೪೩ ಮಹಿಳೆಯರ ಸಂಖ್ಯೆಯಾಗಿದೆ. ಅಷ್ಟೇ ಅಲ್ಲದೇ ಈ ನಗರದ ಲಿಂಗಾನುಪಾತದ ಪ್ರಮಾಣ ಪ್ರತಿ ೧೦೦೦ ಪುರುಷರಿಗೆ ೯೮೬ ಮಹಿಳೆಯರಿದ್ದಾರೆ. ಇಲ್ಲಿನ ಸಾಕ್ಷರತೆಯ ಪ್ರಮಾಣ ಶೇ.೮೦.೯೭ ರಷ್ಟಿದೆ. ಇದರಲ್ಲಿ ಶೇ.೮೮.೭ ಪುರುಷರ ಪ್ರಮಾಣವಾದರೆ, ಶೇ.೭೩.೭೭ ಮಹಿಳೆಯರ ಸಾಕ್ಷರತೆಯ ಪ್ರಮಾಣವಾಗಿದೆ ಮೊಳಕಾಲ್ಮೂರು ಪಟ್ಟಣವು ಸಮುದ್ರಮಟ್ಟದಿಂದ ೩,೦೨೨ ಅಡಿಗಳಷ್ಟು ಎತ್ತರವಾಗಿದೆ.[೪]

### ಬೆಟ್ಟಗಳು

ಇಲ್ಲಿನ ಹೆಚ್ಚಿನ ಭೂಭಾಗವು ಕಣಶಿಲೆಯ ದುಂಡಾದ ಬಂಡೆಗಲ್ಲುಗಳಿಂದ ಕೂಡಿದ ದೈತ್ಯಾಕಾರದ ಬೆಟ್ಟಗುಡ್ಡಗಳಿಂದ ಕೂಡಿದ್ದು, ತಗ್ಗಿನ ಬೆಟ್ಟಗಳ ಸಾಲುಗಳು ಕಂಗೊಳಿಸುತ್ತವೆ. ಬಹುಮಟ್ಟಿಗೆ ಎಲ್ಲವೂ ನಗ್ನ ಶಿಲಾಮಯವಾಗಿದ್ದು ಅಲ್ಲಲ್ಲಿ ಕಣವೆ ಪ್ರದೇಶಗಳಿವೆ ಈ ಪಟ್ಟಣದ ಸುತ್ತಲೂ ಕಣಶಿಲೆಯಲ್ಲದೆ ಮರಳುಗಲ್ಲು ಮತ್ತು ಬೆಣಚುಕಲ್ಲುಗಳಿಂದ ಅವೃತಗೊಂಡಿರುವಂತಹ ಬೆಟ್ಟಗುಡ್ಡಗಳಿವೆ. ನಗರದಿಂದ ಪಶ್ಚಿಮಕ್ಕೆ ಎರಡು ಮೈಲಿ ದೂರದಲ್ಲಿ ನುಂಕೀಮಲೆಯ ಕಣಿವೆ ಪ್ರದೇಶವಿದೆ. ಈ ಕಣಿವೆಗೆ 'ಕೋತಲಗೊಂದಿ'[೫] ಎಂದು ಕರೆಯುತ್ತಾರೆ. ಪ್ರಾಚೀನ ಶಿಲಾಯುಗದ ಮಾನವನ ವಾಸಕ್ಕೆ ಯೋಗ್ಯವೆನಿಸುವ ಇಲ್ಲಿನ ಬೆಟ್ಟ ಪ್ರದೇಶಗಳಲ್ಲಿ ಸಂಚರಿಸಿದ ಪುರಾತತ್ವ ಶಾಸ್ತ್ರಜ್ಞ ಹಾಗೂ ಪ್ರಾಗಿತಿಹಾಸದ ಪಿತಾಮಹನಾದ ರಾಬರ್ಟ್ ಬ್ರೂಸ್‌ಫುಟ್ ಅವರು "ಇಲ್ಲಿನ ಬೆಟ್ಟಪ್ರದೇಶಗಳು ವಿಶಿಷ್ಟ ಸೌಂದರ್ಯದಿಂದ ಕೂಡಿವೆ"[೬] ಎಂದು ವರ್ಣಿಸಿದ್ದಾರೆ.

### ಹವಾಗುಣ–ಮಳೆ

ಬಯಲು ಸೀಮೆಯ ಬಿಸಿಲು ನಾಡಿನ ತಾಣವಾಗಿರುವ ಮೊಳಕಾಲ್ಮೂರು ಬಳ್ಳಾರಿ ನಗರಕ್ಕೆ ಸಮೀಪದಲ್ಲಿರುವುದರಿಂದ ಬಳ್ಳಾರಿಯ ಬಿಸಿಲು–ತಾಪಮಾನವನ್ನೇ ಹೋಲುತ್ತದೆ. ಬೇಸಿಗೆಯಲ್ಲಿ ಇಲ್ಲಿ ಸರಾಸರಿ ೩೮.೪೦° ಸೆಂಟಿಗ್ರೇಡ್ ಬಿಸಿಲಿನ ತಾಪ ಹೆಚ್ಚಾಗಿದ್ದರೆ, ಚಳಿಗಾಲದಲ್ಲಿ ೨೮° ಸೆ. ನಷ್ಟು ತುಂಬ ಹಿತಕರವಾದ ಹವಾಗುಣವನ್ನು ಹೊಂದಿದೆ.[೭] ಪ್ರತಿ ಮೂರು ವರ್ಷಕ್ಕೊಮ್ಮೆ ತೀವ್ರ ಅಭಾವದ ಪರಿಸ್ಥಿತಿ ಉಂಟಾಗುವ ಈ ಪ್ರದೇಶದ ವಾರ್ಷಿಕ ಮಳೆಯ ಪ್ರಮಾಣ ೫೮೮.೯ ಮಿ.ಮೀ. ಇಲ್ಲಿನ ವಾಡಿಕೆ. ಆದರೆ ವಾಸ್ತವವಾಗಿ ೫೯೮.೯ ಮಿ.ಮೀ ವಾರ್ಷಿಕ ಮಳೆಯ ಪ್ರಮಾಣವಾಗಿದೆ. ಮೊಳಕಾಲ್ಮೂರಿನಲ್ಲಿ ಒಂದು ಮಳೆ ಮಾಪನ ಕೇಂದ್ರವಿದೆ. ಇದನ್ನೊರೆತುಪಡಿಸಿದರೆ ಇಡೀ ತಾಲೂಕಿನಲ್ಲಿ ರಾಂಪುರ, ಬಿ.ಜಿ.ಕೆರೆ, ರಾಯಾಪುರ, ಮತ್ತು ದೇವಸಮುದ್ರ ಎಂಬ ನೆಲೆಗಳಲ್ಲಿ ತಲಾ ಒಂದೊಂದು ಮಳೆ ಮಾಪನ ಕೇಂದ್ರಗಳಿರುವುದನ್ನು ಕಾಣಬಹುದಾಗಿದೆ.[೮] ಇಲ್ಲಿ ಮುಂಗಾರು ಮಳೆಯು ಕ್ಷೀಣಿಸಿ ಅಕ್ಟೋಬರ್ ನಲ್ಲಿ ಹಿಂಗಾರು ಮಳೆಯು ಸ್ವಲ್ಪ ಮಟ್ಟಿಗೆ ಚೇತರಿಸಿಕೊಳ್ಳುತ್ತದೆ.

### ಮಣ್ಣು

ಮೊಳಕಾಲ್ಮೂರು ಪ್ರದೇಶದಲ್ಲಿ ಕೆಂಪು, ಕಪ್ಪು ಹಾಗೂ ಗರಸು ಮಣ್ಣುಗಳು ಕಂಡು ಬರುತ್ತವೆ. ಈ ಮಣ್ಣುಗಳು ಹಾಗೂ ಇಲ್ಲಿನ ಬೆಟ್ಟಗಳ ನಡುವಿನ ಫಲವತ್ತಾದ ಮೈದಾನ ಪ್ರದೇಶವು ಕೃಷಿಗೆ ಯೋಗ್ಯವಾದ ಭೂಮಿಯಾಗಿದೆ. ಈ ಭೂಮಿಯಲ್ಲಿ ಜೋಳ, ರಾಗಿ, ಮೆಕ್ಕೆಜೋಳ, ಸಜ್ಜೆ, ನವಣೆ, ಶೇಂಗ, ಹತ್ತಿ, ಸೂರ್ಯಕಾಂತಿ, ಈರುಳ್ಳಿ ಎಂಬ ಮೊದಲಾದ

ಬೆಳೆಗಳನ್ನು ಬೆಳೆಯುತ್ತಾರೆ. ಕೃಷಿಗೆ ಸಂಬಂಧಿಸಿದಂತೆ ಅಲ್ಪ ಪ್ರಮಾಣದಲ್ಲಿ ನೀರಾವರಿ ಸೌಲಭ್ಯವಿದೆ. ಹಾಗಾಗಿ ಇಲ್ಲಿನ ಕೃಷಿಯು ಹೆಚ್ಚಾಗಿ ಮಳೆಯನ್ನೆ ಅವಲಂಬಿಸಿದೆ. ಶೇಂಗಾ ಮತ್ತು ರಾಗಿ ಹೆಚ್ಚಿನ ಪ್ರಮಾಣದಲ್ಲಿ ಬೆಳೆಯುವ ಬೆಳೆಗಳಾಗಿವೆ.

## ಖನಿಜ ಸಂಪತ್ತು

ಮೊಳಕಾಲ್ಮೂರು ಪಟ್ಟಣದಲ್ಲಿ ಆರ್ಥಿಕ ಅಭಿವೃದ್ಧಿಗೆ ಸಹಾಯಕವಾಗುವಂತಹ ಯಾವುದೇ ರೀತಿಯ ಖನಿಜ ಸಂಪನ್ಮೂಲಗಳು ಕಂಡುಬಂದಿರುವುದಿಲ್ಲ.

## ಜಲ ಸಂಪನ್ಮೂಲ

ಈ ತಾಲೂಕಿನ ವ್ಯಾಪ್ತಿಯಲ್ಲಿ ಹೇಳಿಕೊಳ್ಳುವಷ್ಟರ ಮಟ್ಟಿಗೆ ಯಾವುದೇ ರೀತಿಯ ದೊಡ್ಡದಾದ ನದಿ ಹರಿಯುವುದಿಲ್ಲ. ಪ್ರಮುಖವಾಗಿ 'ಚಿನ್ನಹಗರಿ' ಎಂಬ ನದಿಯು ಮಾತ್ರ ಹರಿಯುತ್ತದೆ. ಇದನ್ನು ಜನಿಗೆ ಹಳ್ಳ, ಚಿಕ್ಕಹಗರಿ, ಹನೆಯತೊರೆ, ಅಘಹರಿ, ಪಾಪನಾಶಿನಿ, ಎಂಬ ಹಲವಾರು ಹೆಸರುಗಳಿಂದ ಕರೆಯಲಾಗಿದೆ.[೧೦] ಚಿನ್ನಹಗರಿ ನದಿಯು ತುಂಗಭದ್ರಾನದಿಯ ಮುಖ್ಯ ಉಪನದಿಯಾದ 'ಹಗರಿ' ನದಿಯ ಒಂದು ಕೂಡು ನದಿಯಾಗಿದೆ. ಇದು ಚಿತ್ರದುರ್ಗದ ಬೆಟ್ಟಗಳ ಸಮೀಪದ 'ಗೊಡಬನಾಳ್' ಎಂಬ ಗ್ರಾಮದ ಬಳಿಯಿಂದ ಹೊಳಲ್ಕೆರೆ ತಾಲೂಕಿನ 'ಓಬಳದೇವರಗುಡ್ಡ'ದಲ್ಲಿ ಹುಟ್ಟಿ, ಚಿತ್ರದುರ್ಗ ಜಗಳೂರು, ಮತ್ತು ಮೊಳಕಾಲ್ಮೂರು ತಾಲೂಕುಗಳಲ್ಲಿ 'ಜನಿಗೆಹಳ್ಳ' ಎಂಬ ಹೆಸರಿನಿಂದ ಹರಿದು ಹಲವಾರು ಕೆರೆಗಳಿಗೆ ಜಲಮೂಲವಾಗಿದೆ. ಮುಂದೆ ಕೂಡ್ಲಿಗಿ ತಾಲೂಕಿನ ದಕ್ಷಿಣದಲ್ಲಿ ಕಲ್ಲಹಳ್ಳಿ ಸಮೀಪ ಬಳ್ಳಾರಿ ಜಿಲ್ಲೆಯನ್ನು ಪ್ರವೇಶಿಸಿ, ಚಿತ್ರದುರ್ಗ, ಬಳ್ಳಾರಿ ಜಿಲ್ಲೆಗಳ ಗಡಿಯಾಗಿ ಸ್ವಲ್ಪ ದೂರ ಹರಿದು ಆಂಧ್ರಪ್ರದೇಶದ ರಾಯದುರ್ಗ ತಾಲೂಕಿನ ಉತ್ತರದಲ್ಲಿ ವೇದಾವತಿ ನದಿಯನ್ನು ಸೇರುತ್ತದೆ. ಚಿತ್ರದುರ್ಗ ಮತ್ತು ಜಗಳೂರು ತಾಲೂಕುಗಳ ಮುಖಾಂತರ ಹರಿದು ಬರುವ ಈ ನದಿ ಮೊಳಕಾಲ್ಮೂರು ತಾಲೂಕು ಮತ್ತು ಬಳ್ಳಾರಿ ಜಿಲ್ಲೆಯ ಎಲ್ಲೆಯಾಗಿ ಸ್ವಲ್ಪದೂರ ಹರಿದು ತಾಲೂಕಿನ ಮಧ್ಯಭಾಗದಲ್ಲಿ ಪ್ರವೇಶಿಸಿ, ಮುಂದೆ ಈಶಾನ್ಯಾಭಿಮುಖವಾಗಿ ಹರಿಯುತ್ತದೆ. ಹೀಗೆ ಮೊಳಕಾಲ್ಮೂರು ತಾಲೂಕಿನ ಮಧ್ಯಭಾಗದಲ್ಲಿ ಹರಿದು ಹೋಗುವ ಈ ನದಿಯು ಇಲ್ಲಿನ ಸಿದ್ದಾಪುರ, ನಾಗಸಮುದ್ರ, ತುಪ್ಪದಕ್ಕನಹಳ್ಳಿ, ಭಟ್ರಹಳ್ಳಿ ಹಿರೆಕೆರೆಹಳ್ಳಿ ಪಕ್ಕುರ್ತಿ ಎಂಬ ಹಲವಾರು ಕೆರೆಗಳಿಗೆ ನೀರನ್ನು ಒದಗಿಸುತ್ತದೆ. ಬೊಮ್ಮಕ್ಕನ ಹಳ್ಳ, ಯರ್ರೇನಹಳ್ಳಿ, ಹಾನಗಲ್ ಹಳ್ಳ, ಗುಂಡೇರಿ ಹಳ್ಳ, ಗಂಗಮ್ಮನ ಹಳ್ಳ ಎಂಬ ಮೊದಲಾದ ಹಳ್ಳಗಳು ಸಹ ಈ ನದಿಯನ್ನು ಸೇರುತ್ತವೆ.[೧೧] ಈ ನದಿಗೆ ಹಾನಗಲ್ ಬಳಿ ರಂಗಯ್ಯನ ದುರ್ಗ ಜಲಾಶಯವನ್ನು ನಿರ್ಮಿಸಿ ನೀರಾವರಿಗೆ ಅನುಕೂಲವನ್ನು ಕಲ್ಪಿಸಲಾಗಿದೆ. ಈ ಜಲಾಶಯದಿಂದ ಮೊಳಕಾಲ್ಮೂರು ಪಟ್ಟಣಕ್ಕೆ ಕುಡಿಯುವ ನೀರಿನ ಸೌಕರ್ಯವನ್ನು ಕಲ್ಪಿಸಲಾಗಿದೆ.

ತಾಲೂಕಿನ ಮಧ್ಯಭಾಗದಲ್ಲಿ ಜನಿಗೆಹಳ್ಳ ನದಿಯು ಹರಿಯುವುದರಿಂದ ಮೊಳಕಾಲ್ಮೂರು ಪಟ್ಟಣದಲ್ಲಿ ಇದರ ಪಾತ್ರ ಕಂಡು ಬರುವುದಿಲ್ಲ. ಮೊಳಕಾಲ್ಮೂರು ಪಟ್ಟಣದಲ್ಲಿ ಯಾವುದೇ ನದಿಯು ಹರಿಯದಿದ್ದರೂ ಸಹ ಇಲ್ಲಿನ ಜನರು ಪೂರ್ವದಿಂದಲೂ ನೀರಿನ ಪೂರೈಕೆಗಾಗಿ ಹಲವಾರು ಕಡೆ ಬಾವಿಗಳನ್ನು ತೋಡಿಸಿದ್ದಾರೆ. ಜೊತೆಗೆ ಅನೇಕ ಕೆರೆಗಳನ್ನು, ಹೊಂಡಗಳನ್ನು ನಿರ್ಮಿಸಿದ್ದಾರೆ. ಪಟ್ಟಣದ ಉತ್ತರಕ್ಕಿರುವ ಬೆಟ್ಟದ ಮೇಲೆ ಪಾಳೆಯಗಾರರ ಕಾಲದಲ್ಲಿ ನಿರ್ಮಿತಗೊಂಡ ಲಕ್ಷ್ಮವ್ವ ನಾಗತಿಕೆರೆ ಇದೆ. ಪಶ್ಚಿಮಕ್ಕೆ ಕೋತಲಗೊಂದಿಕೆರೆ, ಬೆಟ್ಟದ ಮೇಲೆ ಕಂಪಿಲ ರಾಯನ ಹೊಂಡ, ಊರುಬಾಗಿಲು ಹೊಂಡ, ಐಯ್ಯಣ್ಣನ ಕುಂಟೆ ಎಂಬ ಹಲವಾರು ಕೆರೆ, ಹೊಂಡಗಳಿವೆ. ಅಷ್ಟೆ ಅಲ್ಲದೇ ಬಸವನ ಬಾವಿ, ವೆಂಕಣ್ಣನ ಬಾವಿ, ಲಾಲಾದ ಬಾವಿ, ಭರಮಪ್ಪನ ಬಾವಿ, ಕಛೇರಿಬಾವಿ, ಮಠದಬಾವಿ, ಆಸ್ಪತ್ರೆಬಾವಿ, ಕೋಟೆಬಾವಿ, ಶ್ಯಾನುಬೋಗರ ಬಾವಿ, ಎಂಬ ಮೊದಲಾದ ಬಾವಿಗಳವೆ. ಈ ಬಾವಿಗಳಲ್ಲಿ ಕೆಲವು ಕಾಲಗರ್ಭದಲ್ಲಿ ಹುದುಗಿ ಹೋಗಿದ್ದರೆ, ಮತ್ತೆ ಕೆಲವು ಬಳಕೆಯಿಲ್ಲದೇ ಇಂದು ಹಾಳು ಬಿದ್ದಿರುವುದನ್ನು ಗಮನಿಸಿಬಹುದಾಗಿದೆ. ಕುಡಿಯುವ ನೀರಿಗಾಗಿ ಲಕ್ಷ್ಮವ್ವ ನಾಗತಿಕೆರೆ, ರಂಗಯ್ಯನ ದುರ್ಗಜಲಾಶಯ ಹಾಗೂ ಕೋತಲಗೊಂದಿ ಕೆರೆಯಷ್ಟೇ ಅಲ್ಲದೇ ಹಲವಾರು ಬಾವಿಗಳಿಂದಲೂ ವ್ಯವಸ್ಥೆಯನ್ನು ಕಲ್ಪಿಸಿಕೊಂಡಿದ್ದಾರೆ.

**ಅರಣ್ಯ-ಸಸ್ಯವರ್ಗ-ಪ್ರಾಣಿವರ್ಗ**

ಮೊಳಕಾಲ್ಮೂರು ತಾಲೂಕು ೭೩೬ ಚ.ಕಿ.ಮೀ ವಿಸ್ತೀರ್ಣವನ್ನು ಹೊಂದಿದೆ. ಆದರೆ ಅರಣ್ಯ ಪ್ರದೇಶ ಅತಿ ಕಡಿಮೆ ಇದೆ. ಇಡೀ ತಾಲೂಕಿನಲ್ಲಿ ೧೫,೩೪೩ ಹೆಕ್ಟೇರ್ ಅರಣ್ಯಪ್ರದೇಶವಿದ್ದರೂ, ದಟ್ಟವಾದ ಕಾಡುಗಳು ಇಲ್ಲ ಈ ತಾಲೂಕಿನಲ್ಲಿ ಒಣಹವೆಯಿರುವುದರಿಂದ ಅಲ್ಲಲ್ಲಿ ಉರುವಲಿಗಾಗಿ ಉಪಯೋಗಿಸುವಂತಹ ಕುರುಚಲು ಕಾಡಿದೆ ಮೊಳಕಾಲ್ಮೂರು ನಗರದ ಉತ್ತರಕ್ಕಿರುವ ಬೆಟ್ಟಶ್ರೇಣಿ ಹಾಗೂ ಅಲ್ಲಿಂದ ವಾಯುವ್ಯಕ್ಕಿರುವ ನುಂಕೀಮಲೆ ಪರ್ವತಶ್ರೇಣಿಗಳಲ್ಲಿ ಅಲ್ಪ ಪ್ರಮಾಣದಲ್ಲಿ ಅರಣ್ಯ ಕಂಡು ಬರುತ್ತದೆ. ಈ ಕಾಡುಗಳಲ್ಲಿ ಅಲ್ಲಲ್ಲಿ ಹುಣಸೇ, ಮಾವು, ಹಿಪ್ಪೇಮರ, ಬೇವಿನಮರ ಎಂಬ ಮೊದಲಾದ ಮರಗಳ ಜೊತೆಗೆ ಜಾಲಿ ಜಾತಿಯ ಮುಳ್ಳಿನ ಗಿಡಗಳು, ಸೀತಾಫಲ, ತಂಗಡಿಕೆ, ಬಂದರಿಕೆ, ದಿಂಡಿಗ, ಕಕ್ಕೆ, ಚುಜ್ಜಲು ಎಂಬ ಹಲವಾರು ಜಾತಿಯ ಗಿಡಮರಗಳು ವ್ಯಾಪಕವಾಗಿ ಬೆಳೆದುಕೊಂಡಿವೆ.

ಬೆಟ್ಟ ಶ್ರೇಣಿಯ ಇಲ್ಲಿನ ಅರಣ್ಯ ಪ್ರದೇಶದಲ್ಲಿ ಚಿರತೆ, ಕರಡಿ, ಕಾಡುಹಂದಿ, ಉಡ, ಮುಂಗುಸಿ, ಮೊಲ, ಕಾಡುಬೆಕ್ಕು, ಅಳಿಲು ಮತ್ತು ಮಂಗಗಳು ಪ್ರಮುಖವಾಗಿ ಕಂಡು ಬರುತ್ತವೆ. ಉರಗ ಜಾತಿಯಲ್ಲಿ ನಾಗರಹಾವು, ಮಂಡಲದ ಹಾವುಗಳು ಹೆಚ್ಚಾಗಿ ಕಂಡುಬಂದರೆ ಅಲ್ಲಲ್ಲಿ ಮಿಡಿನಾಗರಗಳೂ ಸಹ ಕಂಡುಬರುತ್ತವೆ. ಮಂಡರಗಪ್ಪೆ ಮತ್ತು ಇತರ ಜಾತಿಯ

ವಿಷಪೂರಿತ ಚೇಳುಗಳು ಹೇರಳವಾಗಿವೆ. ಕಾಡುಕಾಗೆ, ಮೈನಾ, ಮರಕುಟಿಗ, ಕಾಡು ಪಾರಿವಾಳಗಳು, ಹಸಿರು ಪಾರಿವಾಳ, ಕಾಡು ಕೋಳಿ, ಕೌಜುಗ, ನೀರುಕೋಳಿ, ಕೋಗಿಲೆ, ಬಾನಾಡಿಗಳೆಂಬ ಮೊದಲಾದ ಜಾತಿಯ ಪಕ್ಷಿ ಸಂಕುಲವೂ[೧೨] ಸಹ ಇಲ್ಲಿ ಕಂಡುಬರುತ್ತದೆ.

**ಜನವರ್ಗ-ಆರ್ಥಿಕ ಸ್ಥಿತಿಗತಿ**

ಮೊಳಕಾಲ್ಮೂರು ಪಟ್ಟಣದಲ್ಲಿ ಹಿಂದೂ ಮತ್ತು ಮುಸ್ಲಿಮರು ಹೆಚ್ಚಾಗಿ ಕಂಡುಬರುತ್ತಾರೆ. ಹಿಂದುಗಳಲ್ಲಿ ಮ್ಯಾಸ ಬುಡಕಟ್ಟು ನಾಯಕ ಜನಾಂಗದವರು ಹೆಚ್ಚಾಗಿದ್ದಾರೆ. ಆದಿ ದ್ರಾವಿಡರು ಇಲ್ಲಿನ ಮೂಲ ನಿವಾಸಿಗಳಾಗಿದ್ದಾರೆ. ನಾಯಕ ಜನಾಂಗವನ್ನು ಸೇರಿದಂತೆ ಗೊಲ್ಲರು, ವೀರಶೈವರು, ವೈಶ್ಯರು, ವಡ್ಡರು(ಭೋವಿ) ಮಾದಿಗರು, ಕುರುಬರು, ಎಂಬ ಮೊದಲಾದ ವಿವಿಧ ಕೋಮಿನ ಜನರು ಕಂಡುಬರುತ್ತಾರೆ. ಇಲ್ಲಿನ ಆಡಳಿತ ಭಾಷೆ ಕನ್ನಡ ಮೂಲತಃ ಆಂಧ್ರಪ್ರದೇಶ ಕರ್ನಾಟಕದ ಗಡಿಭಾಗದ ಪ್ರದೇಶವಾಗಿದ್ದರಿಂದ ಇಲ್ಲಿ ತೆಲುಗು ಭಾಷೆಯ ಪ್ರಭಾವವು ಹೆಚ್ಚಾಗಿ ಕಂಡು ಬರುತ್ತದೆ. ಇದರಿಂದ ತೆಲುಗು ಕನ್ನಡದ ಸಮ್ಮಿಶ್ರಭಾಷೆಯೂ ಉತ್ಪತ್ತಿಯಾಗಿದೆ.[೧೩] ಈ ಪಟ್ಟಣದಲ್ಲಿ ಮುಸ್ಲಿಂರು ಆಧಿಕ ಸಂಖ್ಯೆಯಲ್ಲಿರುವುದರಿಂದ ಉರ್ದು ಭಾಷೆಯು ಅಸ್ತಿತ್ವದಲ್ಲಿದೆ. ಕನ್ನಡ, ತೆಲುಗು, ಉರ್ದು, ಭಾಷೆಗಳ ಜೊತೆಯಲ್ಲಿ ಮರಾಠಿ, ತಮಿಳು, ಹಾಗೂ ಲಂಬಾಣಿ ಭಾಷೆಗಳು ಅಲ್ಪ ಪ್ರಮಾಣದಲ್ಲಿ ಚಾಲ್ತಿಯಲ್ಲಿರುವುದನ್ನು ಗುರುತಿಸಬಹುದಾಗಿದೆ.

ಆರ್ಥಿಕ ದೃಷ್ಟಿಯಿಂದ ಮೊಳಕಾಲ್ಮೂರು ತುಂಬಾ ಶೋಚನೀಯ ಸ್ಥಿತಿಯಲ್ಲಿದೆ ಇಲ್ಲಿ ಆಲೆಯ ಸೊಪ್ಪು-ಹುಣಸೇ ಬೀಜ ತಿಂದು ಬದುಕುತ್ತಿದ್ದ ಬಡತನವೂ ಒಂದು ಕಾಲದಲ್ಲಿತ್ತು.[೧೪] ಯಾವುದೇ ರೀತಿಯ ಖನಿಜ ಸಂಪನ್ಮೂಲಗಳು ದೊರೆಯದ ಕಾರಣ ಜನರ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸುವಂತಹ ದೊಡ್ಡ ಹಾಗೂ ಸಣ್ಣಪ್ರಮಾಣದ ಕೈಗಾರಿಕೆಗಳು, ಉದ್ಯಮಗಳು ಇಲ್ಲ. ಆದ್ದರಿಂದ ಇಲ್ಲಿನ ಜನರು ಮಳೆಯನ್ನೇ ನಂಬಿಕೊಂಡು ವ್ಯವಸಾಯ ಮಾಡುವ ಜನವರ್ಗ ಹೆಚ್ಚಿನ ಪ್ರಮಾಣದಲ್ಲಿದೆ. ಮಧ್ಯಮ ವರ್ಗ ಮತ್ತು ಹಿಂದುಳಿದ ವರ್ಗದ ಜನವರ್ಗವೇ ಹೆಚ್ಚಾಗಿರುವ ಈ ಪಟ್ಟಣದಲ್ಲಿ ಆರ್ಥಿಕ ಸ್ಥಿತಿಯನ್ನು ಸುಧಾರಿಸುವಲ್ಲಿ ರೇಷ್ಮೆ ಸೀರೆಗಳ ವ್ಯಾಪಾರ ಮತ್ತು ಕೃಷಿ ಬಹು ಪ್ರಮುಖವಾಗಿದೆ. ಇಲ್ಲಿನ ಮಧ್ಯಮವರ್ಗದವರು ರೇಷ್ಮೆ ಸೀರೆಗಳ ವ್ಯಾಪಾರ ಮತ್ತು ಕೃಷಿಯಲ್ಲಿ ತೊಡಗಿದರೆ, ಹಿಂದುಳಿದ ವರ್ಗದ ಜನರಲ್ಲಿ ಕೆಲವರು ಮಾತ್ರ ರೇಷ್ಮೆ ಸೀರೆಯ ನೇಯ್ಗೆಯ ವೃತ್ತಿಯನ್ನು ಕೈಗೊಂಡರೆ, ಉಳಿದವರು ಕೃಷಿಕಾರ್ಮಿಕರಾಗಿ ಕಷ್ಟಪಟ್ಟು ದುಡಿಯುವ ಶ್ರಮಜೀವಿಗಳಾಗಿದ್ದಾರೆ. ಪಟ್ಟಣದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿರುವ ಸ್ವಕುಳಸಾಲಿ, ಪದ್ಮಸಾಲಿ, ಪಟ್ಟಸಾಲಿ ಜನಾಂಗದವರು ಪಾರಂಪರಿಕ ರೇಷ್ಮೆನೇಯ್ಗೆಯ ವೃತ್ತಿದಾರರಾಗಿದ್ದಾರೆ. ಆದರೆ ಈಗ ಮುಸ್ಲಿಮರು, ಗೊಲ್ಲರು, ನಾಯಕ

ಜನಾಂಗದವರೂ ಸಹ ಈ ರೇಷ್ಮೆ ಸೀರೆಯ ನೇಯ್ಗೆಯ ವೃತ್ತಿಯನ್ನು ಕೈಗೊಂಡು ಆರ್ಥಿಕವಾಗಿ ಸಬಲರಾಗಲು ಪ್ರಯತ್ನಿಸುತ್ತಿದ್ದಾರೆ. ಹೀಗಾಗಿ ಇಲ್ಲಿನ ಚೌಕಳಿಯ ಒಡಲಿನ ಸೀರೆಗಳು, ದೊಡ್ಡಮನೆ, ಬಾಲಾಮಣಿ, ರುದ್ರಗಂಜಿ, ಜೋಡುಗೆರೆ, ಇಂದ್ರಾಣಿ, ಸಣ್ಣ ಮತ್ತು ದೊಡ್ಡ ಪಟ್ಟಾ ಪಟ್ಟಿ ಎಂಬ ವಿವಿಧ ಮಾದರಿಯ ರೇಷ್ಮೆ ಸೀರೆಗಳು[೧೫] ನಾಡಿನಾದ್ಯಂತ ಜನಪ್ರಿಯಗೊಂಡಿವೆ. ಇಲ್ಲಿನ ಮುಸ್ಲಿಂ ಸಮುದಾಯ ಹೆಚ್ಚಾಗಿ ವ್ಯಾಪಾರವನ್ನು ಅವಲಂಬಿಸಿದೆ. ಕೃಷಿ, ರೇಷ್ಮೆ ಸೀರೆಗಳ ನೇಕಾರಿಕೆ ಅಲ್ಲದೆ ಕೋಳಿ ಸಾಕಾಣಿಕೆಗೆ[೧೬] ಮೊಳಕಾಲ್ಮೂರು ಹೆಸರು ವಾಸಿಯಾಗಿದೆ. ರೈತರು ಕೂಲಿ ಕಾರ್ಮಿಕರು ಹಾಗೂ ಕಡು ಬಡವರಿಂದ ಕೂಡಿದ ಇಲ್ಲಿನ ಜನರ ಪ್ರಮುಖ ಆಹಾರ ರಾಗಿಮುದ್ದೆ ಮತ್ತು ರೊಟ್ಟಿಯಾಗಿದೆ. ಅಲ್ಲದೇ ಈರುಳ್ಳಿ, ಬದನೇಕಾಯಿಗಳನ್ನು ವಿಶೇಷವಾಗಿ ಉಪಯೋಗಿಸುವುದರ ಜೊತೆಗೆ ಹಲವಾರು ಬಗೆಯ ತರಕಾರಿ ಪದಾರ್ಥಗಳನ್ನು ಸಹ ಆಹಾರವಾಗಿ ಸೇವಿಸುತ್ತಾರೆ. ಈ ಪರಿಸರದಲ್ಲಿ ಬೆಟ್ಟಗುಡ್ಡಗಳು ಹೆಚ್ಚಾಗಿ ಕಂಡು ಬರುವುದರಿಂದ ಇಲ್ಲಿನ ಜನರು ತಮ್ಮ ವಾಸಕ್ಕೆ ವಿಶೇಷವಾಗಿ ಕಲ್ಲಿನಿಂದ ಕಟ್ಟಿದಂತಹ ಮಾಳಿಗಿ ಮನೆಗಳನ್ನು ನಿರ್ಮಿಸಿಕೊಂಡಿದ್ದಾರೆ.

### ೨.೨ ಪ್ರಾಗಿತಿಹಾಸ

ಪ್ರಾಚೀನ ಮಾನವನ ವಿಕಾಸ ಹಾಗೂ ಆತನು ಸಾಗಿ ಬಂದ ಹಾದಿ ಮತ್ತು ದೀರ್ಘಕಾಲದ ಆತನ ಜೀವನ ಶೈಲಿಯಲ್ಲಿ ಅಧ್ಯಯನದ ಸಲುವಾಗಿ ಪ್ರಾಗಿತಿಹಾಸ, ಆದಿಇತಿಹಾಸ ಮತ್ತು ಇತಿಹಾಸ ಎಂಬ ಮೂರು ಕಾಲಾನುಕ್ರಮ ಹಂತಗಳನ್ನಾಗಿ ವಿಭಾಗಿಸಲಾಗಿದೆ. ಮೊದಲನೆಯ ಹಂತವಾಗಿರುವ ಪ್ರಾಗಿತಿಹಾಸವು ಬರವಣಿಗೆಯ ಪೂರ್ವಕಾಲವಾಗಿದೆ. ಈ ಪ್ರಾಗಿತಿಹಾಸದ ಅಧ್ಯಯನವು ಮಾನವನು ಭೂಮಿಯ ಮೇಲೆ ಉದಯಿಸಿದಂದಿನಿಂದ, ಲಿಪಿಯ ಬಳಕೆ ಆರಂಭವಾದ ಕಾಲಘಟ್ಟದವರೆಗೆ ಸಾಗುತ್ತದೆ. ಈ ಹಂತದಲ್ಲಿ ಮಾನವನು ನಿರಕ್ಷರಕುಕ್ಷಿಯಾಗಿದ್ದು, ಯಾವುದೇ ರೀತಿಯ ಬರವಣಿಗೆಯನ್ನಾಗಲಿ, ಲಿಪಿಯನ್ನಾಗಲಿ ಕಂಡುಕೊಂಡಿರಲಿಲ್ಲ. ಆದ್ದರಿಂದ ಪ್ರಾಗಿತಿಹಾಸ ಅಂದರೆ ಲಿಪಿ ಬಳಕೆಯ ಪೂರ್ವದ ಸಮಾಜಗಳ ಗತಕಾಲ, ಅಂದಿನ ಸಮಾಜದಲ್ಲಿ ಬದುಕಿದ್ದ ಮಾನವನ ಬೆಳವಣಿಗೆ, ವಿಕಾಸ, ಹಾಗೂ ಆತನ ಜೀವನ ಕ್ರಮದ ಕುರಿತಾದ ಸಾಹಿತ್ಯವಾಗಲೀ, ದಂತಕಥೆಗಳಾಗಲೀ, ನಮಗೆ ಲಭ್ಯವಾಗುವುದಿಲ್ಲ. ಆದರೂ ಪ್ರಾಚೀನ ಕಾಲದ/ಪ್ರಾಗಿತಿಹಾಸ ಕಾಲದ ಮಾನವನು ತನ್ನ ಗತ ಜೀವನವನ್ನು ತಿಳಿಯಲು ನಮಗೆ ತನ್ನ ಇರುವಿಕೆಯ ಕುರುಹುಗಳನ್ನು ಅವಶೇಷಗಳ ರೂಪದಲ್ಲಿ ಉಳಿಸಿ ಹೋಗಿದ್ದಾನೆ. ಅಂದರೆ ಪ್ರಾಚೀನ ಮಾನವ ತನ್ನ ದಿನನಿತ್ಯದ ಬದುಕಿನಲ್ಲಿ ಬೇಟೆಯಾಡಲು, ಆಹಾರ ಸಂಗ್ರಹಿಸಲು ಬಳಸಿದಂತಹ ಕಲ್ಲಿನ ಆಯುಧಗಳು, ಮಣ್ಣಿನ ಮಡಿಕೆ-ಕುಡಿಕೆಗಳು, ಮಡಿಕೆಯ ಚೂರುಗಳು, ಹಾಗೂ ಮಣ್ಣಿನ ಪಾತ್ರೆಗಳೆಂಬ ಮೊದಲಾದ ಆಯುಧೋಪಕರಣಗಳನ್ನು ಮತ್ತು ಪ್ರಕೃತಿಯಲ್ಲಿ ತನಗೆ ಕಂಡದ್ದನ್ನು ತನಗಾದ ಅನುಭವಗಳನ್ನು ಆತನಲ್ಲಿ ಮೂಡಿದ

ಭಾವನೆಗಳನ್ನು ತಾನು ವಾಸ ಮಾಡಿದಂತಹ ಗುಹೆಗಳಲ್ಲಿ ಬೆಟ್ಟಗುಡ್ಡಗಳಿಂದ ಕೂಡಿದ ಬಂಡೆಗಳ ಮೇಲೆ ಅಭಿವ್ಯಕ್ತಿಗೊಳಿಸಿದ ಕುಟ್ಟು, ಗೀರು ಮತ್ತು ವರ್ಣರೇಖಾ ಚಿತ್ರಗಳು ಮತ್ತು ಸಮಾಧಿಗಳ ನೆರವಿನಿಂದ ಆತನ ಗತ ಜೀವನವನ್ನು ನಾವು ತಿಳಿಯಬಹುದಾಗಿದೆ. ಈ ರೀತಿಯ ವರ್ಣ ರೇಖಾಚಿತ್ರಗಳು ಮತ್ತು ಸಮಾಧಿಗಳು ಪ್ರಾಚೀನ ಚಿತ್ರಕಲೆ ಮತ್ತು ವಾಸ್ತುಶಿಲ್ಪದ ಕುರುಹುಗಳಾಗಿವೆ. ಪ್ರಾಗಿತಿಹಾಸ ಕಾಲದ ಮಾನವನ ಗತ ಜೀವನವನ್ನು ಅರಿಯಲು ಆಯುಧಗಳೇ ನಮಗೆ ಪ್ರಮುಖ ಆಧಾರಗಳಾಗಿವೆ. ಈ ಆಯುಧಗಳು ಬಹುತೇಕವಾಗಿ ನಿಸರ್ಗದಲ್ಲಿ ದೊರೆಯುವ ಶಿಲೆಗಳಿಂದ ತಯಾರಿಸಲ್ಪಟ್ಟಿವೆ. ಹಾಗಾಗಿ ದೊರೆತಂತಹ ಆಯುಧಗಳ ಆಧಾರದ ಹಿನ್ನೆಲೆಯಲ್ಲಿ ಪ್ರಾಗಿತಿಹಾಸದ ಅಧ್ಯಯನವನ್ನು 'ಶಿಲಾಯುಗ' ಎಂದು ಕರೆಯಲಾಯಿತು. ಈ ಪ್ರಾಚೀನ ಪ್ರಾಗಿತಿಹಾಸದ ಮಾನವನು ಶಿಲಾಯುಗದ ಉದ್ದಗಲಕ್ಕೂ ಒಂದೇ ರೀತಿಯಾಗಿರಲಿಲ್ಲ. ಬದಲಾಗಿ ಆತನು ಭೌತಿಕವಾಗಿ ಹಾಗೂ ಶಾರೀರಿಕವಾಗಿಯೂ ಬದಲಾವಣೆಯನ್ನು ಹೊಂದು ವುದರ ಜೊತೆಗೆ, ತನ್ನ ಸುತ್ತಲಿನ ಭೌತ ಜಗತ್ತಿನಲ್ಲಿಯೂ ಪರಿವರ್ತನೆಯನ್ನುಂಟು ಮಾಡುತ್ತಿದ್ದನು. ಪ್ರಾಗಿತಿಹಾಸಕಾಲದ/ಶಿಲಾಯುಗದ ಮಾನವನ ಬದುಕಿನ ಪರಿಯ ಗತ ಜೀವನದ ವೃತ್ತಾಂತವನ್ನು ಅಧ್ಯಯನಿಸುವ ಸಲುವಾಗಿ, ಶಿಲಾಯುಗದ ಸಂಸ್ಕೃತಿಯನ್ನು ಹಳೆಯ ಶಿಲಾಯುಗ, ಮಧ್ಯ ಶಿಲಾಯುಗ, ನವಶಿಲಾಯುಗ, ಮತ್ತು ಬೃಹತ್ ಶಿಲಾಯುಗ ಎಂಬ ನಾಲ್ಕು ಭಾಗಗಳಾಗಿ ವರ್ಗೀಕರಿಸಲಾಗಿದೆ.

ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲೂಕು ಪರಿಚಿತವಾಗಿರುವುದು ಮೌರ್ಯ ಚಕ್ರವರ್ತಿಯಾದ ಅಶೋಕನ ಬಂಡೆಗಲ್ಲು ಶಾಸನಗಳಿಂದ ಬ್ರಹ್ಮಗಿರಿ, ಜಟಂಗಿ ರಾಮೇಶ್ವರ, ಸಿದ್ದಾಪುರ, ನುಂಕೀಮಲೆ ಎಂಬ ಮೊದಲಾದ ನೆಲೆಗಳು ಈ ತಾಲೂಕಿನ ಪ್ರಮುಖ ಪ್ರಾಗೈತಿಹಾಸಿಕ ನೆಲೆಗಳಾಗಿವೆ. ಇತಿಹಾಸಪೂರ್ವದ ಶಿಲಾಯುಗದ ಕಾಲದಿಂದಲೂ ಇಲ್ಲಿನ ಪರಿಸರದಲ್ಲಿ ಜನವಸತಿ ನೆಲೆಸಿತ್ತು ಎಂಬುದಕ್ಕೆ ಪುರಾತತ್ವಶಾಸ್ತ್ರಜ್ಞರಿಗೆ, ಇತಿಹಾಸ ಆಸಕ್ತರಿಗೆ ಹಾಗೂ ಸಂಶೋಧನಾಕಾರರಿಗೆ ದೊರೆತಂತಹ ಪ್ರಾಚ್ಯಾವಶೇಷಗಳು ಹಾಗೂ ಬ್ರಹ್ಮಗಿರಿಯಲ್ಲಿ ಕೈಗೊಂಡಂತಹ ಉತ್ಖನನದ ವರದಿಗಳಿಂದ ತಿಳಿದು ಬಂದಿದೆ. ಹೀಗೆ ಕರ್ನಾಟಕದ ಪ್ರಾಗಿತಿಹಾಸ ಕಾಲದ ದೃಷ್ಟಿಯಿಂದ ಈ ತಾಲೂಕು ತನ್ನದೇ ಆದ ಮಹತ್ವದ ಸ್ಥಾನವನ್ನು ಪಡೆದುಕೊಂಡಿರುವುದು ಚರಿತ್ರೆಯ ಪುಟಗಳಲ್ಲಿ ದಾಖಲಾಗಿದೆ.

**ಹಳೆಯ ಶಿಲಾಯುಗ**(Palaeo lithic)

ಶಿಲಾಯುಗದ ಸಂಸ್ಕೃತಿಗಳಲ್ಲಿಯೇ ಅತ್ಯಂತ ಪ್ರಾಚೀನವಾದುದು ಹಳೆಯ ಶಿಲಾಯುಗ ಸಂಸ್ಕೃತಿಯಾಗಿದೆ. ಹಳೆಯ ಶಿಲಾಯುಗವನ್ನು ಅಧ್ಯಯನದ ಅನುಕೂಲಕ್ಕಾಗಿ ಆದಿ ಹಳೆಯ, ಮಧ್ಯ ಹಳೆಯ, ಮತ್ತು ಅಂತ್ಯ ಹಳೆಯ ಶಿಲಾಯುಗಗಳೆಂದು ಮೂರು ಭಾಗಗಳಾಗಿ ವಿಭಾಗಿಸಿದ್ದಾರೆ. ಭಾರತದಲ್ಲಿ ಮೊಟ್ಟಮೊದಲ ಬಾರಿಗೆ ೧೮೬೩ ಮೇ ೩೦ ರಂದು ರಾಬರ್ಟ್

ಬ್ರೂಸ್‌ಫುಟ್‌ರವರು ತಮಿಳುನಾಡಿನ ಚೆನ್ನೈ ಸಮೀಪದ "ಪಲ್ಲಾವರಮ್"[೧೭] ಎಂಬಲ್ಲಿ ಶಿಲಾಯುಗ ಸಂಸ್ಕೃತಿಗೆ ಸಂಬಂಧಿಸಿದ ಕಲ್ಲಿನ ಕೈಕೊಡಲಿ ಯೊಂದನ್ನು ಪತ್ತೆ ಹಚ್ಚುವುದರ ಮೂಲಕ ಪ್ರಾಗಿತಿಹಾಸದ ಅಧ್ಯಯನಕ್ಕೆ ಭದ್ರವಾದ ಬುನಾದಿಯನ್ನು ಹಾಕಿದರು. ಕರ್ನಾಟಕದ ಮಟ್ಟಿಗೂ ಇವರೇ ಪ್ರಾಗಿತಿಹಾಸ ಅಧ್ಯಯನದ ನೇತಾರರಾಗಿದ್ದಾರೆ. ಈ ಹಿನ್ನೆಲೆಯಲ್ಲಿಯೇ ರಾಬರ್ಟ್‌ಬ್ರೂಸ್‌ಫುಟ್‌ರವರನ್ನು "ಭಾರತೀಯ ಪ್ರಾಗೈತಿಹಾಸಿಕ ಅಧ್ಯಯನದ ಪಿತಾಮಹ" ಎಂದು ಕರೆಯಲಾಗಿದೆ.

ಕರ್ನಾಟಕದಲ್ಲಿ ಇದುವರೆಗೂ ನಡೆದ ಸಂಶೋಧನೆಗಳಿಂದ ಹಲವಾರು ನೆಲೆಗಳಲ್ಲಿ ಹಳೇಯ ಶಿಲಾಯುಗ ಸಂಸ್ಕೃತಿಗೆ ಸಂಬಂಧಿಸಿದಂತಹ ಅನೇಕ ಆಯುಧ ಪರಿಕರಗಳು ಕಂಡುಬಂದಿವೆ. ಪ್ರಸ್ತುತ ಅಧ್ಯಯನ ಕ್ಷೇತ್ರವಾದ ಮೊಳಕಾಲ್ಮೂರು ನೆಲೆಯಲ್ಲಾಗಲೀ ತಾಲೂಕಿನಲ್ಲಾಗಲೀ ಇದುವರೆಗೂ ನಡೆದ ಸಂಶೋಧನೆಗಳಲ್ಲಿ ಈ ಕಾಲಘಟ್ಟದ ಆಯುಧಗಳೂ ಕಂಡು ಬಂದಿರುವುದಿಲ್ಲ. ಹಾಗಾಗಿ ಈ ಬಗೆಗೆ ಹೆಚ್ಚಿನ ಸಂಶೋಧನೆಯ ಅಗತ್ಯವಿದೆ. ಆದರೆ ಈ ತಾಲೂಕು ಸಂಬಂಧಪಡುವ ಚಿತ್ರದುರ್ಗ ಜಿಲ್ಲೆಯ ಜಾನಕಲ್,[೧೮] ಮತ್ತು ತಾಳ್ಯ[೧೯]ಗಳೆಂಬ ಎರಡು ನೆಲೆಗಳಲ್ಲಿ ಮಾತ್ರ ಹಳೆಯ ಶಿಲಾಯುಗ ಸಂಸ್ಕೃತಿಯ ಕುರುಹುಗಳು ಪತ್ತೆಯಾಗಿವೆ.

### ಮಧ್ಯ ಶಿಲಾಯುಗ

ಶಿಲಾಯುಗದ ಎರಡನೇಯ ಹಂತವಾಗಿರುವ ಮಧ್ಯಶಿಲಾಯುಗವು ಹಳೆಯ ಶಿಲಾಯುಗ ಮತ್ತು ನವಶಿಲಾಯುಗಗಳ ನಡುವಿನ ಕಾಲಖಂಡಕ್ಕೆ ಸಂಬಂಧಿಸಿದಂತಹ ಸಾಂಸ್ಕೃತಿಕ ಹಂತವಾಗಿದೆ. ಈ ಶಿಲಾಯುಗ ಸಂಸ್ಕೃತಿಯ ಜನರು ತಯಾರಿಸಿದ ಶಿಲಾಉಪಕರಣಗಳು ತುಲನಾತ್ಮಕವಾಗಿ ಗಾತ್ರದಲ್ಲಿ ಅತಿಚಿಕ್ಕದಾದ ಆಯುಧಗಳಾಗಿದ್ದವು. ಆದ್ದರಿಂದ ಮಧ್ಯ ಶಿಲಾಯುಗವನ್ನು ಸೂಕ್ಷ್ಮ ಶಿಲಾಯುಗ, ಸ್ಥಿತ್ಯಂತರ ಸೂಕ್ಷ್ಮ ಶಿಲಾಯುಗ ಎಂಬ ಹೆಸರುಗಳಿಂದ ಕರೆಯಲಾಗಿದೆ.

ಕರ್ನಾಟಕದ ಹೆಚ್ಚಿನ ಭಾಗಗಳಲ್ಲಿ ಈ ಸಂಸ್ಕೃತಿಯ ಹಲವಾರು ನೆಲೆಗಳು ಪತ್ತೆಯಾಗಿವೆ. ಇದುವರೆಗೂ ನಡೆದ ಅಧ್ಯಯನಗಳ ಹಿನ್ನೆಲೆಯಲ್ಲಿ ಹೇಳುವುದಾದರೆ ಮೊಳಕಾಲ್ಮೂರು ತಾಲೂಕಿನ ಪ್ರಾಗಿತಿಹಾಸ ಆರಂಭವಾಗುವುದೇ ಸೂಕ್ಷ್ಮಶಿಲಾಯುಗದಿಂದ ಎನ್ನಬಹುದಾಗಿದೆ. ಈ ತಾಲೂಕಿನಲ್ಲಿ ಸೂಕ್ಷ್ಮಶಿಲಾಯುಗಕ್ಕೆ ಸಂಬಂಧಿಸಿದ ಕುರುಹುಗಳು ಮೊದಲ ಬಾರಿಗೆ ಎಂ ಹೆಚ್ ಕೃಷ್ಣರವರು ಕೈಗೊಂಡ ಇಲ್ಲಿನ ಬ್ರಹ್ಮಗಿರಿಯ ಉತ್ಖನನ ಕಾರ್ಯದಲ್ಲಿ ಶೋಧಿತಗೊಂಡವು. ಇದರಿಂದ ಚಿತ್ರದುರ್ಗ ಜಿಲ್ಲೆಯಲ್ಲಿ ಮೊದಲಬಾರಿಗೆ ಸೂಕ್ಷ್ಮಶಿಲಾಯುಗ ಸಂಸ್ಕೃತಿಯ ಇರುವಿಕೆಯು ದೃಢಪಟ್ಟಂತಾಯಿತು. ಎಂ. ಶೇಷಾದ್ರಿಯವರು ಕೈಗೊಂಡ ಬ್ರಹ್ಮಗಿರಿಯ ಸರ್ವೇಕ್ಷಣೆಯಲ್ಲಿ ಸೂಕ್ಷ್ಮಶಿಲಾಯುಗಕ್ಕೆ ಸಂಬಂಧಿಸಿದಂತಹ ಚಾರ್ಟ್, ಜಾಸ್ಪರ್ ಶಿಲೆಯಲ್ಲಿ ರೂಪಿಸಿದಂತಹ ಆಯುಧಗಳು ದೊರೆತವು. ಇತ್ತೀಚಿಗೆ ನಡೆದ ಸಂಶೋಧನೆಗಳ ಫಲವಾಗಿ ಬ್ರಹ್ಮಗಿರಿಯಲ್ಲಷ್ಟೆ

ಅಲ್ಲದೇ ತಾಲೂಕಿನಲ್ಲಿ ಬರುವ ಬೊಮ್ಮಕ್ಕನಹಳ್ಳಿ ನುಂಕೀಮಲೆ, ಪೂಜಾರಹಟ್ಟಿ, ಹಳೆಕೆರೆ, ಮತ್ತು ಹಾನಗಲ್ ಎಂಬ ಆರು ನೆಲೆಗಳಲ್ಲಿ ಈ ಸಂಸ್ಕೃತಿಯ ಸೂಕ್ಷ್ಮಶಿಲಾಯುಧಗಳು ಪತ್ತೆಯಾಗಿವೆ.[೨೦]

ಅಧ್ಯಯನ ಕ್ಷೇತ್ರವಾದ 'ಮೊಳಕಾಲ್ಮೂರು' ನೆಲೆಯಲ್ಲಿ ಈ ವರೆಗೆ ನಡೆದಂತಹ ಸಂಶೋಧನೆಗಳಲ್ಲಿ ಸೂಕ್ಷ್ಮಶಿಲಾಯುಗಕ್ಕೆ ಸಂಬಂಧಿಸಿದಂತಹ ಆಯುಧ ಶಿಲೋಪಕರಣಗಳು ಶೋಧಗೊಂಡಿರುವುದಿಲ್ಲ. ಆದರೆ ಈ ಕ್ಷೇತ್ರಕ್ಕೆ ಸು.೩ ಕಿ.ಮೀ. ಅಂತರದಲ್ಲಿರುವ ನುಂಕೀಮಲೆ ಬೆಟ್ಟಶ್ರೇಣಿಯಲ್ಲಿ ಹಾಗೂ ಈ ಬೆಟ್ಟಶ್ರೇಣಿಯ ಸಮೀಪವಿರುವ ಪೂಜಾರಹಟ್ಟಿ ಮತ್ತು ಹಳೆಕೆರೆಗಳ ನಡುವೆ ಹರಿಯುವಂತಹ ಹಳ್ಳವೊಂದರ ದಂಡೆಯಲ್ಲಿ ಜಾಸ್ಪರ್ ಶಿಲೆಯಿಂದ ತಯಾರಿಸಿದಂತಹ ಬ್ಲೇಡ್, ಬೈರಿಗೆ ಹಾಗೂ ಕೋರ್‌ಗಳೆಂಬ ಆಯುಧಗಳು ದೊರೆತಿವೆ.[೨೧] ಹಾಗೆಯೇ ಮೊಳಕಾಲ್ಮೂರು ಪಟ್ಟಣದಿಂದ ೫. ಕಿ.ಮೀ ದೂರದಲ್ಲಿರುವ ಹಾನಗಲ್‌ನ ಅಕ್ಕಮ್ಮನ ಗುಡ್ಡದಲ್ಲಿ ಚಾರ್ಟ್, ಆಗೇಟ್, ಚಾಲ್ಸಿಡೋನಿ, ಡೈಕ್, ಹಾಗೂ ಸ್ಥಳೀಯವಾಗಿ ದೊರೆಯುವ ಬೆಣಚುಕಲ್ಲುಗಳಿಂದ ತಯಾರಿಸಿದಂತಹ ವಿವಿಧ ಮಾದರಿಯ ಸೂಕ್ಷ್ಮಶಿಲಾಯುಧಗಳು ದೊರೆತಿವೆ.[೨೨] ಹೀಗೆ ಮೊಳಕಾಲ್ಮೂರು ನಗರದ ಸುತ್ತಮುತ್ತಲಿನ ಐದಾರು ಕಿ.ಮೀ. ಗಳ ದೂರದಲ್ಲಿನ ನುಂಕೀಮಲೆ, ಹಾನಗಲ್, ಹಳೇಕೆರೆ, ಪೂಜಾರ ಹಟ್ಟಿ, ಎಂಬ ನೆಲೆಗಳಲ್ಲಿ ಈ ಸಂಸ್ಕೃತಿಯ ಕಾಲಘಟ್ಟದ ಸೂಕ್ಷ್ಮವಾದ ಆಯುಧ ಪರಿಕರಗಳು ದೊರೆತಿದ್ದರ ಹಿನ್ನೆಲೆಯಲ್ಲಿ ಮೊಳಕಾಲ್ಮೂರು ಸೂಕ್ಷ್ಮ ಶಿಲಾಯುಗ ಕಾಲಘಟ್ಟದಿಂದ ಜನವಸತಿಯನ್ನು ಹೊಂದಿತ್ತು ಎಂದು ಹೇಳಬಹುದಾಗಿದೆ.

ಈ ಸೂಕ್ಷ್ಮ ಶಿಲಾಯುಗ ಸಂಸ್ಕೃತಿಯ ಕುರುಹುಗಳು ಚಿತ್ರದುರ್ಗ ಜಿಲ್ಲೆಗೆ ಸಂಬಂಧಿಸಿದಂತೆ ಪ್ರಮುಖವಾಗಿ ಆರು ನೆಲೆಗಳಲ್ಲಿ ಕಂಡುಬಂದಿವೆ. ಆ ಆರು ನೆಲೆಗಳು ಮೊಳಕಾಲ್ಮೂರು ತಾಲೂಕಿನ ಪರಿಸರದಲ್ಲಿ ಪತ್ತೆಯಾಗಿರುವುದು ವಿಶೇಷವಾಗಿದೆ.

## ನವ ಶಿಲಾಯುಗ

ಸೂಕ್ಷ್ಮ ಶಿಲಯುಗ ಸಂಸ್ಕೃತಿಯ ನಂತರ ಕಂಡುಬರುವ ಕಾಲವೆಂದರೆ ಮಾನವ ತನ್ನನ್ನು ತಾನು ಸುಧಾರಿಸಿಕೊಂಡಂತಹ ನವಶಿಲಾಯುಗ ಅಥವಾ ನೂತನ ಶಿಲಾಯುಗ. ಈ ಹಂತದಲ್ಲಿ ಮನುಷ್ಯ ಜೀವನದ ರೀತಿ ನೀತಿಗಳು ಸಾಕಷ್ಟು ಬದಲಾವಣೆಗೊಂಡವು. ಈ ಸಂಸ್ಕೃತಿಯ ಹಂತವನ್ನು ಗುರುತಿಸುವಾಗ ಉಜ್ಜಿ ನಯಗೊಳಿಸಿದಂತಹ ಮೇಲ್ಮೈಯುಳ್ಳ ಕೈಕೊಡಲಿಗಳು ಹಾಗೂ ಬೂದು ವರ್ಣದ ಮಡಿಕೆಗಳನ್ನು ಗಣನೆಗೆ ತೆಗೆದುಕೊಳ್ಳಲಾಗುತ್ತದೆ. ಈ ಉಪಕರಣಗಳು ಪ್ರಾಚೀನ ಶಿಲಾಯುಧಗಳಂತೆ ಒರಟಾಗಿರದೆ, ಉಜ್ಜಿನಯಗೊಳಿಸಿದ ಶಿಲಾಯುಧಗಳಾಗಿವೆ. ಅಲ್ಲದೇ ಈ ಹಿಂದಿನ ಸೂಕ್ಷ್ಮ ಶಿಲಾಯುಗದ ಕೊನೆಯಲ್ಲಿ ಆರಂಭವಾಗಿದ್ದ ಪಶುಪಾಲನೆ ಮತ್ತು ಕೃಷಿಪದ್ದತಿಗಳು ಈ ಕಾಲದಲ್ಲಿ ಸಾಕಷ್ಟು ಅಭಿವೃದ್ದಿ ಹೊಂದಿದ್ದವು.

ಬೂದು ಬಣ್ಣದ ಪಾತ್ರೆಗಳ ತಯಾರಿಕೆ, ವ್ಯವಸ್ಥಿತವಾದ ವಾಸದ ಮನೆಗಳ ನಿರ್ಮಾಣ ಈ ಕಾಲದ ನವೀನತೆಗಳಾಗಿವೆ. ಈ ಕಾಲದ ಆರಂಭವನ್ನು ಸೂಚಿಸುವ ಬೂದಿದಿಬ್ಬಗಳು ಪಶು ಪಾಲನೆಯ ಸಂಕೇತಗಳಾದರೆ, ಕಲ್ಲಿನಿಂದ ಮಾಡಿ ಉಜ್ಜಿ ನಯಗೊಳಿಸಿದ ಕೈಕೊಡಲಿಯು ಕಾಡನ್ನು ಕಡಿದು ಕೃಷಿ ಆರಂಭಿಸಿದುದನ್ನು ಸಾರುತ್ತದೆ. ಹಾಗೆಯೇ ಮಣ್ಣಿನಿಂದ ಮಾಡಿದ ಮಡಿಕೆ ಕುಡಿಕೆಗಳು ಸಂಗ್ರಹಣಾ ಪರಿಕರಗಳಾದರೆ, ಕೃಷಿಯ ಆರಂಭವು ಮಾನವನು ಒಂದೆಡೆ ನೆಲೆನಿಂತು ಗ್ರಾಮ ಸಂಸ್ಕೃತಿಯ ನಿರ್ಮಾಣಕ್ಕೆ ನಾಂದಿಯಾಯಿತು.[೨೩]

ಕರ್ನಾಟಕದಲ್ಲಿ ನವ ಶಿಲಾಯುಗ ಸಂಸ್ಕೃತಿಗೆ ಸಂಬಂಧಿಸಿದ ಪರಿಕರಗಳನ್ನು ಪ್ರಥಮವಾಗಿ ೧೮೭೨ ರಲ್ಲಿ ಬಳ್ಳಾರಿ ಜಿಲ್ಲೆಯ ಕಪ್ಪಗಲ್ಲು ಬೆಟ್ಟದಲ್ಲಿ "ಫ್ರೇಸರ್" ರವರು ಗುರುತಿಸಿದರು. ತದನಂತರದಲ್ಲಿ ಮಸ್ಕಿ, ಪಿಕ್ಲೆಹಾಳ್, ತೆಕ್ಕಲಕೋಟೆ, ಹಳ್ಳೂರು, ಟಿ.ನರಸೀಪುರ, ಹೆಮ್ಮಿಗೆ, ಬನಹಳ್ಳಿ ಎಂಬ ಮೊದಲಾದ ನೆಲೆಗಳಲ್ಲಿ ಶೋಧಿತಗೊಂಡವು.[೨೪] ಚಿತ್ರದುರ್ಗ ಜಿಲ್ಲೆಗೆ ಸಂಬಂಧಿಸಿದಂತೆ ಸಂಗೇನಹಳ್ಳಿ ಚಿತ್ರದುರ್ಗ ಚಂದ್ರವಳ್ಳಿ, ಪರಶುರಾಂಪುರ ಎಂಬ ಮೊದಲಾದವುಗಳು ಈ ಸಂಸ್ಕೃತಿಗೆ ಸಂಬಂಧಿಸಿದಂತಂತಹ ನೆಲೆಗಳಾಗಿವೆ.[೨೫]

ಅಧ್ಯಯನ ಪ್ರದೇಶದಲ್ಲಿ ಕೈಗೊಂಡ ಕ್ಷೇತ್ರನ್ವೇಷಣೆಯ ಫಲವಾಗಿ ಮೊಳಕಾಲ್ಮೂರಿನ ಬೆಟ್ಟದಲ್ಲಿ ನವಶಿಲಾಯುಗಕ್ಕೆ ಸಂಬಂಧಿಸಿದಂತಹ ಕಲ್ಲಿನ ಕೈಕೊಡಲಿಯೊಂದು ಪತ್ತೆಯಾಯಿತು.[೨೬] ಈ ಕೈಕೊಡಲಿಯು ಈ ಸಂಸ್ಕೃತಿಯಲ್ಲಿ ದಿನನಿತ್ಯ ಬಳಸುತ್ತಿದ್ದಂತಹ ಪ್ರಮುಖ ಆಯುಧವಾಗಿದೆ. ಈ ಕೊಡಲಿಯನ್ನು ಡೈಕ್ ಶಿಲೆಯಿಂದ ರೂಪಿಸಿಕೊಂಡಿದ್ದಾನೆ. ಗಾತ್ರದಲ್ಲಿ ಚಿಕ್ಕದಾಗಿರುವ ಇದು ರಚನೆಯಲ್ಲಿ ತ್ರಿಭುಜಾಕಾರವನ್ನು ಹೊಂದಿದ್ದು, ಅದರ ಹಿಡಿಕೆಯ ಭಾಗವು ಸ್ವಲ್ಪ ಭಗ್ನಗೊಂಡಿದೆ. ಇದೇ ರೀತಿಯಾದಂತಹ ಡೈಕ್ ಶಿಲೆಯಿಂದ ರಚಿತಗೊಂಡಂತಹ ಕೈಕೊಡಲಿಗಳು ನಮಗೆ ಬ್ರಹ್ಮಗಿರಿ ನುಂಕೀಮಲೆ, ಬೊಮ್ಮಕ್ಕನಹಳ್ಳಿ, ಕೋನಸಾಗರ, ಹಾಗೂ ಹಾನಗಲ್‌ಗಳಲ್ಲಿ ಕಂಡುಬಂದಿವೆ. ಅಷ್ಟೆ ಅಲ್ಲದೇ ನುಂಕೀಮಲೆ, ಜಟಂಗಿ ರಾಮೇಶ್ವರ, ಬಸಾಪುರ, ಹಿರೇಕೆರೆಹಳ್ಳಿ ಮೊಳಕಾಲ್ಮೂರು ಎಂಬ ನೆಲೆಗಳಲ್ಲಿ ಈ ಸಂಸ್ಕೃತಿಯ ಕಲ್ಲಾಸರೆಯ ರೇಖಾಚಿತ್ರಗಳು ಕಂಡುಬಂದಿವೆ. ಸಂತೇಗುಡ್ಡ ಹಾನಗಲ್, ಬ್ರಹ್ಮಗಿರಿ, ನಾಗಸಮುದ್ರ, ವೆಂಕಟಾಪುರ, ಬಾಂಡ್ರಾವಿ, ಹನುಮನಗುಡ್ಡ, ಕೆಳಗಳಹಟ್ಟಿ, ಹಿರೇಕೆರೆಹಳ್ಳಿ ಎಂಬ ಮೊದಲಾದ ನೆಲೆಗಳಲ್ಲಿ ಈ ಸಂಸ್ಕೃತಿಯ ಬೂದಿ ಅವಶೇಷಗಳು ಲಭ್ಯವಾಗಿವೆ. ಬ್ರಹ್ಮಗಿರಿ ನೆಲೆಯಲ್ಲಿ ಈ ಕಾಲದ ಸಂಸ್ಕೃತಿಯ ಕುರಿತಾದ ವರ್ಣಚಿತ್ರ, ಬಯಲುಬಂಡೆ ಚಿತ್ರಗಳನ್ನು ಶ್ರೀಶೈಲ ಆರಾಧ್ಯರು ತಮ್ಮ "ಸಂಶೋಧನಾಹಾದಿಯಲ್ಲಿ" ಎಂಬ ಕೃತಿಯಲ್ಲಿ ಪ್ರಕಟಿಸಿದ್ದಾರೆ.

ಒಟ್ಟಾರೆಯಾಗಿ ಇಡೀ ತಾಲೂಕಿನಲ್ಲಿ ನೂತನ ಶಿಲಾಯುಗಕ್ಕೆ ಸಂಬಂಧಿಸಿದಂತಹ ಪರಿಕರಗಳು ಇದುವರೆಗೆ ಜಟಂಗಿ ರಾಮೇಶ್ವರ, ಬ್ರಹ್ಮಗಿರಿ, ನುಂಕೀಮಲೆ, ಬಸಾಪುರ,

ಬಾಂಡ್ರಾವಿ, ಕೆಳಗಳ ಹಟ್ಟಿ, ಸಂತೆಗುಡ್ಡ, ಬೊಮ್ಮಕ್ಕನಹಳ್ಳಿ, ವಡೇರಹಳ್ಳಿ, ಹಿರೇಕೆರೆಹಳ್ಳಿ, ಹಾನಗಲ್, ಹಳೇಕೆರೆ, ಹನುಮನಗುಡ್ಡ. ವೆಂಕಟಾಪುರ, ಕೋನಸಾಗರ ಎಂಬ ೧೫ ನೆಲೆಗಳಲ್ಲಿ ಬೆಳಕಿಗೆ ಬಂದಿವೆ.[೨೭] ಈ ಎಲ್ಲಾ ನೆಲೆಗಳು ಬೆಟ್ಟ ಹಾಗೂ ಬೆಟ್ಟದ ತಪ್ಪಲುಗಳಲ್ಲಿ ಕಂಡು ಬರುತ್ತವೆ. ಕೈಕೊಡಲಿಯಂತಹ ಆಯುಧಗಳು ಬೆಟ್ಟಗಳಲ್ಲಿ ಕಂಡು ಬಂದರೆ, ಬೂದಿ ಅವಶೇಷಗಳು ಬೆಟ್ಟದ ತಪ್ಪಲುಗಳಲ್ಲಿ ಹೆಚ್ಚಾಗಿ ಕಂಡು ಬರುತ್ತವೆ. ಬೂದುಬಣ್ಣದ ಮಡಿಕೆಗಳು, ಮಾತ್ರ ಬೆಟ್ಟದಲ್ಲಿ ಹಾಗೂ ಬೆಟ್ಟದ ತಪ್ಪಲುಗಳೆಂಬೆರಡೂ ಭಾಗಗಳಲ್ಲಿಯು ಕಂಡು ಬರುತ್ತವೆಂಬ ಅಭಿಪ್ರಾಯವನ್ನು ಜಯಣ್ಣ ಅವರು ತಮ್ಮ 'ಮೊಳಕಾಲ್ಮೂರು ಪುರಾತತ್ವೀಯ ಪರಿಸರ' ಎಂಬ ಪಿಎಚ್.ಡಿ.ಮಹಾಪ್ರಬಂಧದಲ್ಲಿ ಅಭಿಪ್ರಾಯ ಪಟ್ಟಿರುತ್ತಾರೆ.

## ಬೃಹತ್ ಶಿಲಾಯುಗ

ನವ ಶಿಲಾಯುಗದ ನಂತರ ಕರ್ನಾಟಕದಲ್ಲಿ ಬಹುಮಟ್ಟಿಗೆ ಕಂಡುಬಂದಿರುವುದು ಬೃಹತ್ ಶಿಲಾಯುಗ ಸಂಸ್ಕೃತಿಯಾಗಿದೆ ಬೃಹದಾಕಾರದ ಬಂಡೆಗಲ್ಲುಗಳನ್ನು ಸೀಳಿಸಿ ಅದರ ಸಹಾಯದಿಂದ ಸಮಾಧಿಗಳನ್ನು ನಿರ್ಮಿಸಿಕೊಂಡಿರುವುದು ಈ ಹಂತದ ಪ್ರಮುಖ ವೈಶಿಷ್ಟ್ಯವಾಗಿದೆ. ಈ ಹಂತದಲ್ಲಿ ಮಾನವನಿಗೆ ಮೊದಲ ಬಾರಿಗೆ ಕಬ್ಬಿಣದ ಉಪಯೋಗದ ಪರಿಚಯವಾದದ್ದೇ ಅಂದಿನ ಸಮಾಧಿ ನಿರ್ಮಾಣದ ಕಲ್ಪನೆಗೆ ಪ್ರೇರಣೆ ನೀಡಿತೆನ್ನಬಹುದು. ಈ ಸಂಸ್ಕೃತಿಯ ಪ್ರಮುಖ ಸಂಕೇತಗಳಾದ ಬೃಹತ್ ಶಿಲಾಗೋರಿಗಳು ಅಂದಿನ ಮಾನವನಿಗೆ ಸತ್ತವರ ಅಥವಾ ತನ್ನ ಹಿರಿಯರ ಬಗ್ಗೆ ಇರುವ ಗೌರವ, ನಂಬಿಕೆಗಳು ಹಾಗೂ ಸತ್ತ ವ್ಯಕ್ತಿ ಮರಳಿ ಭೂಮಿಗೆ ಬರುವನೆಂಬ ಆಶಯಗಳನ್ನು ವ್ಯಕ್ತಪಡಿಸುತ್ತವೆ. ಈ ಸಮಾಧಿಗಳಲ್ಲಿ ಸತ್ತ ವ್ಯಕ್ತಿ ಬಳಸಿದಂತಹ ಹಾಗೂ ಬಳಸಲು ಬೇಕಾದಂತಹ ಜೀವನಾವಶ್ಯಕ ವಸ್ತು ಅವಶೇಷಗಳನ್ನಿಟ್ಟಿರುವುದು ಹಲವಾರು ಉತ್ಖನನಗಳಿಂದ ತಿಳಿದು ಬಂದಿದೆ. ಇದರಿಂದ ಅಂದಿನ ಜನರು ಪುರ್ನಜನ್ಮದ ಬಗ್ಗೆ ಇಟ್ಟುಕೊಂಡಿದ್ದಂತಹ ಕಲ್ಪನೆಯನ್ನು ಹಾಗೂ ಅಂದಿನ ಸಮಕಾಲೀನ ಸಮಾಜದಲ್ಲಿನ ಜನರ ಮನೋಭಾವನೆಗಳನ್ನು ತಿಳಿಯಲು ಸುಲಭವಾಗುತ್ತದೆ.

ಈ ಸಂಸ್ಕೃತಿಗೆ ಸಂಬಂಧಿಸಿದಂತ ಕುರುಹುಗಳನ್ನು ಭಾರತದಲ್ಲಿ ೧೮೭೩ರಲ್ಲಿ ಪ್ರಥಮಬಾರಿಗೆ ಕೇರಳದ ಕರಾವಳಿ ಪ್ರದೇಶದಲ್ಲಿ ಬ್ಯಾಬಿಂಗ್‌ಟನ್‌ರವರು ಗುರುತಿಸಿದರು.[೨೮] ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲಿ ಈ ಸಂಸ್ಕೃತಿಯ ನೆಲೆಗಳು (ಒಟ್ಟು-೮೨೪) ಬೆಳಕಿಗೆ ಬಂದಿವೆ.[೨೯] ಚಿತ್ರದುರ್ಗ ಜಿಲ್ಲೆಗೆ ಸಂಬಂಧಿಸಿದಂತೆ ಚಂದ್ರವಳ್ಳಿ ಚಿಪ್ಪಿನಕೆರೆ ಚಿತ್ರದುರ್ಗ, ಚಿಕ್ಕಮಧುರೆ, ತಮಟಕಲ್ಲು, ಬೂದಿಪುರ, ತಾಳ್ಯ, ಗಂಜಿಗಟ್ಟೆ, ಇಂಗಳದಾಳು ಎಂಬ ಮೊದಲಾದ ನೆಲೆಗಳಲ್ಲಿ ಈ ಸಂಸ್ಕೃತಿಗೆ ಸಂಬಂಧಿಸಿದ ಕಲ್ಗೋರಿ ಹಾಗೂ ಇತರೆ ಅವಶೇಷಗಳು ಪತ್ತೆಯಾಗಿವೆ.

ಮೊಳಕಾಲ್ಮೂರು ತಾಲೂಕು ಪರಿಸರದಲ್ಲಿ ಪ್ರಾಚೀನ ಶಿಲಾಯುಗದ ಮಾನವನಿಗೆ ಅವಶ್ಯಕವಾಗಿ ಬೇಕಾಗುವಂತಹ ಶಿಲಾಸ್ತೋಮಗಳು ಹಾಗೂ ಆತನ ಜೀವನವಶ್ಯಕವಾದಂತಹ

ಆಹಾರ, ನೀರು, ವಸತಿ ಸೌಲಭ್ಯಗಳಿದ್ದುದರಿಂದ ಬೃಹತ್ ಶಿಲಾಯುಗ ಸಂಸ್ಕೃತಿಯ ಮಾನವನ ಅಚ್ಚು ಮೆಚ್ಚಿನ ತಾಣವಾಗಿತ್ತು. ಇಡೀ ತಾಲೂಕಿನಲ್ಲಿ ಇದುವರೆಗೆ ನಡೆದ ಸಂಶೋಧನಗಳಿಂದ ಬೃಹತ್ ಶಿಲಾಯುಗದ ನೆಲೆಗಳು ಹೆಚ್ಚಾಗಿ ಶೋಧಗೊಂಡಿವೆ ಅವುಗಳಲ್ಲಿ ವಸತಿ ನೆಲೆಗಳಿಗಿಂತ ಸಮಾಧಿನೆಲೆಗಳೇ ಹೆಚ್ಚಾಗಿ ದೊರೆತಿವೆ. ತಾಲೂಕಿನಲ್ಲಿ ಕೈರಾನ್ ಮಾದರಿಯ ಸಮಾಧಿಗಳು ಹೆಚ್ಚಿನದಾಗಿ ಲಭ್ಯವಾಗುತ್ತಿದ್ದು ಇವುಗಳು ಸಾಮಾನ್ಯವಾಗಿ ಎಲ್ಲಾ ನೆಲೆಗಳಲ್ಲಿಯೂ ಕಂಡು ಬರುತ್ತವೆ. ಇವುಗಳಲ್ಲದೇ ಹಾದಿಕೋಣೆ ಸಮಾಧಿಗಳು, ಕಿಂಡಿಕೋಣೆ ಸಮಾಧಿಗಳು, ಅಂತರ್ಗತ ಶವಪೆಟ್ಟಿಗೆಗಳು ಗುಂಡಿವೃತ್ತಗಳು, ನಿಲುಸುಗಲ್ಲುಗಳೆಂಬ ವಿವಿಧ ಮಾದರಿಯ ಸಮಾಧಿಗಳು ಹಲವಾರು ನೆಲೆಗಳಲ್ಲಿ ಕಂಡುಬರುತ್ತವೆ. ಅಲ್ಲದೇ ಒಂದೇ ಮಾದರಿಯ ನೆಲೆಯಲ್ಲಿ ವಿವಿಧ ಬಗೆಯ ಸಮಾಧಿಗಳು ಮಕ್ಕಳಿಗಾಗಿ ನಿರ್ಮಿಸಿದಂತಹ ಚಿಕ್ಕ ಚಿಕ್ಕ ಕೈರಾನ್, ಅಂತರ್ಗತ ಶಿಲಾಪೆಟ್ಟಿಗೆ, ಗುಂಡಿ ವೃತ್ತಗಳು ಲಭ್ಯವಾಗುವುದು ವಿಶೇಷವಾಗಿದೆ.

ಅಧ್ಯಯನ ಪ್ರದೇಶವಾದ ಮೊಳಕಾಲ್ಮೂರು ಒಂದು ಬೃಹತ್ ಶಿಲಯುಗದ ನೆಲೆಯಾಗಿದೆ ಮೊಳಕಾಲ್ಮೂರಿನಲ್ಲಿ ವಿವಿಧ ಬಗೆಯ ಸಮಾಧಿಗಳ ಜೊತೆಗೆ ಹಾದಿಕೋಣೆ ಸಮಾಧಿಗಳಿವೆ ಇದೇ ರೀತಿಯಾಗಿ ವಿವಿಧ ಬಗೆಯ ಸಮಾಧಿಗಳ ಜೊತೆಗೆ ಹಾದಿಕೋಣೆ ಸಮಾಧಿಗಳು ಗುಂಡ್ಲೂರು, ಭಟ್ರಹಳ್ಳಿ, ಹಳೆಕೆರೆ ಗಳಲ್ಲೂ ದೊರೆತಿವೆ. ಮೊಳಕಾಲ್ಮೂರಿನಲ್ಲಿರುವಂತೆ ಗುಂಡಿವೃತ್ತ ಸಮಾಧಿಗಳು ನಾಗ ಸಮುದ್ರ, ಭೈರಾಪುರ, ಬ್ರಹ್ಮಗಿರಿ ಹಾಗೂ ನುಂಕೀಮಲೆಗಳಲ್ಲಿ ಪತ್ತೆಯಾಗಿವೆ. ಮೊಳಕಾಲ್ಮೂರಲ್ಲಿರುವ ಚಿಕ್ಕ ಚಿಕ್ಕ ಮಕ್ಕಳ ಕೈರಾನ್ ಸಮಾಧಿಗಳಂತೆ ನಾಗಸಮುದ್ರ, ನುಂಕೀಮಲೆ, ಬ್ರಹ್ಮಗಿರಿ, ಭಟ್ರಹಳ್ಳಿಗಳೆಂಬ ನೆಲೆಗಳಲ್ಲೂ ಶೋಧಗೊಂಡಿವೆ. ಮೊಳಕಾಲ್ಮೂರಲ್ಲಿರುವ ಸ್ವಸ್ತಿಕ್ ಮಾದರಿಯ ಸಮಾಧಿಗಳಿಗೆ ಪೂರ್ವದಿಕ್ಕಿನಲ್ಲಿ ಅರ್ಧಚಂದ್ರಾಕೃತಿಯ ಕಿಂಡಿಗಳಿವೆ. ಇವುಗಳ ಮೇಲೆ ಯಾವುದೇ ರೀತಿಯಾದಂತಹ ಚಪ್ಪಡಿಕಲ್ಲುಗಳನ್ನು ಹಾಸಿರುವುದಿಲ್ಲ. ಇದೇ ವ್ಯವಸ್ಥೆಯನ್ನು ಹೊಂದಿರುವ ಸಮಾಧಿಗಳು ಭಟ್ರಹಳ್ಳಿಯಲ್ಲಿ ಶೋಧಗೊಂಡಿವೆ. ಇಲ್ಲಿರುವ ನಿಲುವುಗಲ್ಲು ಸಮಧಿಗಳಂತೆ ಭೈರಾಪುರ, ಭಟ್ರಹಳ್ಳಿ, ಬ್ರಹ್ಮಗಿರಿ, ಎಂಬ ನೆಲೆಗಳಲ್ಲಿಯೂ ದೊರೆತಿವೆ. ಪಟ್ಟಣದ ಪಶ್ಚಿಮದಲ್ಲಿ ಬರುವ ಕೋತಲಗೊಂದಿ ಕೆರೆಯ ಹಾಸು ಪಾಸುನಲ್ಲಿರುವ ಬಂಡಿ ನಾಗರಾಜಪ್ಪನ ಹೊಲದಲ್ಲಿರುವ ಸಮಾಧಿಗಳು ಇಂದು ತಮ್ಮ ಇರುವಿಕೆಯನ್ನು ಕಳೆದುಕೊಂಡಿವೆ. ಏಕೆಂದರೆ ಸಮಾಧಿಗಳಿರುವ ಪ್ರದೇಶವನ್ನು ಕೃಷಿಯೋಗ್ಯ ಭೂಮಿಯನ್ನಾಗಿ ಪರಿವರ್ತಿಸಿದರ ಪರಿಣಾಮವಾಗಿ ಇದಕ್ಕೆ ಈ ಸಮಾಧಿಗಳ ಬಗ್ಗೆ ಸ್ಥಳಿಯರಲ್ಲಿರುವ ಐತಿಹಾಸಿಕ ಪ್ರಜ್ಞೆಯ ಕೊರತೆ ಎದ್ದು ಕಾಣುತ್ತದೆ ಎನ್ನಬಹುದು. ಆದರೂ ನಾಗರಾಜಪ್ಪನ ಹೊಲದಿಂದ ಸ್ವಲ್ಪ ಮುಂದೆ ಹೋದರೆ ಬೆಟ್ಟದ ತಪ್ಪಲಿನ ಪ್ರದೇಶದಲ್ಲಿ ನೂರಾರು ಸಮಾಧಿಗಳಿರುವುದನ್ನು ಕಾಣಬಹುದು.

ಒಟ್ಟಾರೆಯಾಗಿ ಅಧ್ಯಯನ ಪ್ರದೇಶವನ್ನು ಒಳಗೊಂಡಂತೆ ಇಡೀ ತಾಲೂಕಿನಲ್ಲಿ ಈ ಸಂಸ್ಕೃತಿಯ ಕುರುಹುಗಳನ್ನು ಹೊಂದಿರುವ ಅಕ್ಕಮ್ಮನಗುಡ್ಡ, ಉಚ್ಚಂಗಿದುರ್ಗ, ಕೆಳಗಳಹಟ್ಟಿ, ಗುಡ್ಡದಹಳ್ಳಿ, ಗುಂಡ್ಲೂರು, ಚಿಕ್ಕೇರಹಳ್ಳಿ, ಜಟಂಗಿರಾಮೇಶ್ವರ, ತಳವಾರಹಳ್ಳಿ, ದಡಗೂರು, ನಾಗಸಮುದ್ರ, ನುಂಕೀಮಲೆ, ಪೂಜಾರಹಟ್ಟಿ, ಬಸಾಪುರ ಬ್ರಹ್ಮಗಿರಿ, ಭಟ್ರಹಳ್ಳಿ, ಭೈರಾಪುರ ಬಾಂಡ್ರಾವಿ, ಮೇಗಳಹಟ್ಟಿ, ಮೊಳಕಾಲ್ಮೂರು, ಯರ್ರೇನಹಳ್ಳಿ, ರಾಮಸಾಗರ, ವಡೇರಹಳ್ಳಿ, ಸಂತೇಗುಡ್ಡ, ಸಂಜೀವರಾಯನಕೋಟೆ, ಹಾನಗಲ್, ಹಿರೇಕೆರೆಹಳ್ಳಿ ಎಂಬ ಸು.೨೯ ನೆಲೆಗಳು ಜಯಣ್ಣ ಅವರ ಸಂಶೋಧನೆಯ ಫಲವಾಗಿ ದೊರೆತಿವೆ.[೩೦] ಇಲ್ಲಿನ ಎಲ್ಲಾ ನೆಲೆಗಳು ಒಂದಿಲ್ಲೊಂದು ದೃಷ್ಟಿಯಿಂದ ವಿಶಿಷ್ಟವಾಗಿರುವುದನ್ನು ಗಮನಿಸಬಹುದಾಗಿದೆ.

**ಆದಿ ಇತಿಹಾಸ ಕಾಲ:**

ಆದಿ ಇತಿಹಾಸಕಾಲವೆಂದರೇ ಮಾನವನು ಲಿಪಿಯನ್ನು ಬರವಣಿಗೆಯನ್ನು ಲೇಖನಾ ಕಲೆಯನ್ನು ಕಂಡುಕೊಳ್ಳುವುದರ ಮೂಲಕ ಲಿಪಿಯ ಜ್ಞಾನವನ್ನು ಪಡೆದಂತಹ ಕಾಲವಾಗಿದೆ. ಮೊಳಕಾಲ್ಮೂರು ತಾಲೂಕಿನಲ್ಲಿ ಅಶೋಕನಿಗೆ ಸಂಬಂಧಿಸಿದ ಮೂರು ಶಿಲಾಶಾಸನಗಳು ಪತ್ತೆಯಾಗಿರುವುದರಿಂದ ಈ ಪ್ರದೇಶದಲ್ಲಿ ಆತನ ಆಳ್ವಿಕೆಯ ಕಾಲಘಟ್ಟದಿಂದ ಅಥವಾ ಮೌರ್ಯ ಸಾಮ್ರಾಜ್ಯದ ಸ್ಥಾಪನೆಯಾದಾಗಿನಿಂದಲೇ ಈ ಆದಿ ಇತಿಹಾಸ ಕಾಲವು ಆರಂಭವಾಗಿರ ಬೇಕು ಎನಿಸುತ್ತದೆ. ರಸೆಟ್‌ಲೇಪಿತ ಚಿತ್ರಿತ ಮೃತ್ಪಾತ್ರೆಗಳು ಈ ಸಂಸ್ಕೃತಿಯ ಕಾಲದ ಪ್ರಮುಖ ಲಕ್ಷಣಗಳಾಗಿವೆ. ಇಂತಹ ಮೃತ್ಪಾತ್ರೆಗಳು ನಮಗೆ ಬ್ರಹ್ಮಗಿರಿಯ ಉತ್ಖನನದಲ್ಲಿ ದೊರೆತಿವೆ. ಈ ಪ್ರದೇಶದಲ್ಲಿ ದೊರೆತಂತಹ ಈ ಕಾಲದ ಮಡಿಕೆ, ಮೃತ್ಪಾತ್ರೆ ಹಾಗೂ ಇತರೆ ಅವಶೇಷಗಳನ್ನು ಆಂಧ್ರಮೃತ್ಪಾತ್ರೆಗಳೆಂದು, ಅವುಗಳ ಕಾಲಘಟ್ಟದ ಸಂಸ್ಕೃತಿಯನ್ನು ಆಂದ್ರ ಸಂಸ್ಕೃತಿ[೩೧] ಎಂದು ಕರೆಯಲಾಗಿದೆ.

ಆಂಧ್ರ ಮೃತ್ಪಾತ್ರೆಗಳೆಂದು ಕರೆಯುವ ರೆಸೆಟ್ ಲೇಪಿತ ಚಿತ್ರಿತ ಮಡಿಕೆಗಳು ನಮಗೆ ಕರ್ನಾಟಕದ ಹಲವಾರು ನೆಲೆಗಳಲ್ಲಿ ಕಂಡುಬಂದಿವೆ ತಾಲೂಕಿನಲ್ಲಿ ಬಿಳಿವರ್ಣದ ಚಿತ್ರಗಳಲ್ಲದೇ ಈ ಸಂಸ್ಕೃತಿಯ ಕಪ್ಪು ಕೆಂಪು ಬಣ್ಣದ ಮಡಿಕೆಗಳು ಬ್ರಹ್ಮಗಿರಿ, ಶಿರೇಕೋಳ, ನಾಗಸಮುದ್ರ, ಹಾನಗಲ್‌ಗಳಲ್ಲಿ ದೊರೆತಿವೆ. ವೆಂಕಟಾಪುರದ ಬೂದಿದಿಬ್ಬವೆಂಬ ಸ್ಥಳದಲ್ಲಿ ಇದೇ ಸಂಸ್ಕೃತಿಯ ಕಾಲಕ್ಕೆ ಸೇರುವ ಕೆಂಪು ಬಣ್ಣದ ಮಡಿಕೆಗಳ ಜೊತೆಗೆ ಅದೇ ಬಣ್ಣದ ಮಣ್ಣಿನ ಗೊಂಬೆಯೊಂದು ದೊರೆತಿದೆ. ಹಾನಗಲ್, ಬ್ರಹ್ಮಗಿರಿ, ನಾಗಸಮುದ್ರಗಳೆಂಬ ನೆಲೆಗಳಲ್ಲಿ ರೂಲೆ ಮಾದರಿಯ ಮೃತ್ಪಾತ್ರೆಗಳು ಸಹ ಪತ್ತೆಯಾಗಿವೆ. ಈ ಸಂಸ್ಕೃತಿಯ ಕೆಂಪುವರ್ಣದ ಮೃತ್ಪಾತ್ರೆಗಳು ಬ್ರಹ್ಮಗಿರಿ, ನಾಗಸಮುದ್ರ, ಕೆಳಗಳಹಟ್ಟಿ, ಹನುಮನಗುಡ್ಡಗಳಲ್ಲಷ್ಟೆ ಅಲ್ಲದೇ ಹಾನಗಲ್‌ನಲ್ಲಿಯೂ ದೊರೆತಿವೆ. ಒಟ್ಟಾರೆಯಾಗಿ ಇಡೀ ತಾಲೂಕಿನಲ್ಲಿ ಕೆಳಗಳ ಹಟ್ಟಿ, ಜಟಂಗಿ ರಾಮೇಶ್ವರ, ತಳವಾರಹಳ್ಳಿ,

ನಾಗಸಮುದ್ರ, ಬ್ರಹ್ಮಗಿರಿ, ಮೇಗಳಹಟ್ಟಿ, ರಂಗಯ್ಯನದುರ್ಗ, ವೆಂಕಟಾಪುರ, ಸಂತೇಗುಡ್ಡ, ಶಿರೆಕೊಳ, ಹನುಮನಗುಡ್ಡ, ಹರಿವಿನದಿಡ್ಡಿ, ಹಾನಗಲ್ ಹಿರೆಕೆರೆಹಳ್ಳಿ ಸೇರಿದಂತೆ ಸುಮಾರು ೧೬ ನೆಲೆಗಳಲ್ಲಿ ಈ ಸಂಸ್ಕೃತಿಯ ಕುರುಹುಗಳು[೩೨] ಪತ್ತೆಯಾಗಿರುವುದನ್ನು ಜಯಣ್ಣ ಅವರು ತಮ್ಮ ಸಂಶೋಧನಾ ಪ್ರಬಂಧದಲ್ಲಿ ದಾಖಲಿಸಿದ್ದಾರೆ.

ಪ್ರಾಗೈತಿಹಾಸಿಕ ಹಿನ್ನೆಲೆಯಲ್ಲಿ ತನ್ನದೇ ಆದ ಮಹತ್ವಪಡೆದ ಮೊಳಕಾಲ್ಮೂರು ತಾಲೂಕಿನಲ್ಲಿ ಪ್ರಾಚೀನ ಶಿಲಾಯುಗದ ಸಂಸ್ಕೃತಿಗಳಿಗೆ ಸಂಬಂಧಿಸಿದಂತೆ ಇದುವರೆಗೆ ಹಳೆಯ ಶಿಲಾಯುಗವನ್ನು ಹೊರತುಪಡಿಸಿ, ಸೂಕ್ಷ್ಮ ಶಿಲಾಯುಗದ ಕಾಲಘಟ್ಟದಿಂದ ಆದಿ ಇತಿಹಾಸಕಾಲದವರೆಗಿನ ಪ್ರಾಚ್ಯವಶೇಷಗಳ ಕುರುಹುಗಳನ್ನು ಹೊಂದಿರುವ ಹಲವಾರು ಪುರಾತತ್ವೀಯ ನೆಲೆಗಳು ಶೋಧಿತಗೊಂಡಿರುವುದು ಈ ಪ್ರದೇಶದ ಪ್ರಾಗಿತಿಹಾಸ ಅಧ್ಯಯನಕ್ಕೆ ಮುನ್ನುಡಿಯಾಗಿದೆ. ಆದರೆ ಇದುವರೆಗೂ ಇಲ್ಲಿ ಹಳೆಯ ಶಿಲಾಯುಗಕ್ಕೆ ಸೇರಿದ ಶಿಲಾಯುಧಗಳು ದೊರೆತಿರುವುದಿಲ್ಲ. ಈ ಕುರಿತು ಹೆಚ್ಚಿನ ಸಂಶೋಧನೆ ನಡೆಯಬೇಕಾಗಿದೆ.

## ೨.೩ ಇತಿಹಾಸ

ಚಾರಿತ್ರಿಕ ದೃಷ್ಟಿಯಿಂದ ಕರ್ನಾಟಕದ ಪ್ರಮುಖ ತಾಣವಾಗಿರುವ ಮೊಳಕಾಲ್ಮೂರು ತಾಲೂಕು ಚಿತ್ರದುರ್ಗ ಜಿಲ್ಲೆಗೆ ಕಳಸ ಪ್ರಾಯವಾಗಿ ನಿಂತಿದೆ. ಇಲ್ಲಿನ ಚಾರಿತ್ರಿಕ ಹಿನ್ನೆಲೆಯನ್ನು ಅವಲೋಕಿಸಿ ನೋಡಿದರೆ ಈ ಪ್ರದೇಶದಲ್ಲಿ ನಿರ್ಧಿಷ್ಟವಾಗಿ ಇತಿಹಾಸದ ಯಾವ ಒಂದು ರಾಜಮನೆತನವು ಆಡಳಿತ ನಡೆಸಿರುವುದು ಕಂಡು ಬಂದಿರುವುದಿಲ್ಲ. ಆದರೆ ವಿವಿಧ ಕಾಲಘಟ್ಟಗಳಲ್ಲಿ ಕರ್ನಾಟಕದಲ್ಲಾಡಳಿತ ನಡೆಸಿದ ವಿವಿಧ ರಾಜ ಮನೆತನಗಳ ಹಾಗೂ ಹಲವಾರು ಸಾಮಂತ ಅಧಿಕಾರಿಗಳ ಅಧೀನಕ್ಕೆ ಒಳಗಾಗಿತ್ತು ಎಂಬ ವಿಚಾರವು ಆಧಾರಗಳಿಂದ ದೃಡಪಡುತ್ತದೆ. ಕುಂತಳ ದೇಶ ಎಂದು ಕರೆಯಲಾಗುತ್ತಿದ್ದ ಕರ್ನಾಟಕವನ್ನು ಮೊದಲು ನವನಂದರು ಆಳುತ್ತಿದ್ದರೆಂದು[೩೩] ೧೨ನೇ ಶತಮಾನದ ಶಾಸನವೊಂದರಿಂದ ತಿಳಿದುಬರುತ್ತದೆ. ನವನಂದರ ನಂತರ ಭಾರತದಲ್ಲಿ ಪ್ರಬುದ್ದಮಾನಕ್ಕೆ ಬಂದ ಮೌರ್ಯರು ಕರ್ನಾಟಕದ ಕೆಲವೊಂದು ಭಾಗಗಳನ್ನು ತಮ್ಮ ಅಧೀನದಲ್ಲಿಟ್ಟುಕೊಂಡು ಆಡಳಿತ ನಡೆಸಿದರೆಂಬುದು ಶಾಸನಗಳು ಖಚಿತಪಡಿಸುತ್ತವೆ. ಹೀಗೆ ಮೌರ್ಯರ ಕಾಲದಿಂದ ಪಾಳೆಯಗಾರರ ಕಾಲಾವಧಿಯವರೆಗಿನ ಹಲವು ರಾಜಮನೆತನ ಹಾಗೂ ಸಾಮಂತ ಅಧಿಕಾರಿಗಳ ರಾಜ್ಯಾಡಳಿತದ ಅಧೀನಕ್ಕೆ ಮೊಳಕಾಲ್ಮೂರು ಪ್ರದೇಶ ಒಳಗಾಗುವುದರ ಮೂಲಕ ತನ್ನದೇ ಆದ ಇತಿಹಾಸವನ್ನು ಹೊಂದಿದೆ. ಈ ಪ್ರದೇಶದ ಚರಿತ್ರೆಯನ್ನು ಇತಿಹಾಸದ ಮೂಲ ಸಾಮಾಗ್ರಿಗಳಾದ ಶಾಸನಗಳು ಹಾಗೂ ಕಲೆ ಮತ್ತು ವಾಸ್ತುಶಿಲ್ಪದ ಸ್ಮಾರಕಾವಶೇಷಗಳ ಹಿನ್ನೆಲೆಯಲ್ಲಿ ಅವಲೋಕಿಸಿ, ಸಂಕ್ಷಿಪ್ತವಾಗಿ ವಿವರಿಸುವ ಸಣ್ಣ ಪ್ರಮಾಣಿಕ ಪ್ರಯತ್ನವನ್ನು ಮಾಡಲಾಗಿದೆ.

## ಮೌರ್ಯರು

ಉತ್ತರ ಭಾರತದಲ್ಲಿ ಮೊದಲ ಬಾರಿಗೆ ಆಡಳಿತ ನಡೆಸಿದ ಮೌರ್ಯ ಸಾಮ್ರಾಜ್ಯಕ್ಕೆ ಸಂಬಂಧಿಸಿದ ಕುರುಹುಗಳು ದಕ್ಷಿಣ ಭಾರತದಲ್ಲಿನ ಕರ್ನಾಟಕದ ಹತ್ತು ನೆಲೆಗಳಲ್ಲಿ ಸು.೧೪ ಅಶೋಕನ ಶಿಲಾಶಾಸನಗಳು ದೊರೆತಿವೆ.[೩೪] ಮೊಳಕಾಲ್ಮೂರುನಲ್ಲಿ ಪ್ರಧಾನವಾಗಿ ಅಶೋಕನ ಶಿಲಾಶಾಸನಗಳು ಕಂಡು ಬರದಿದ್ದರೂ ತಾಲೂಕಿನ ಬ್ರಹ್ಮಗಿರಿ, ಜಟಂಗಿ ರಾಮೇಶ್ವರ, ಸಿದ್ದಾಪುರ, ಎಂಬ ನೆಲೆಗಳಲ್ಲಿ ಬಿ.ಎಲ್. ರೈಸ್‌ರವರಿಂದ ಪತ್ತೆಯಾಗಿವೆ.[೩೫] ಅಷ್ಟೆ ಅಲ್ಲದೇ ಇವರ ಕಾಲದ ಅನೇಕ ಅವಶೇಷಗಳ ಜೊತೆಗೆ ಇಟ್ಟಿಗೆಗಳಿಂದ ನಿರ್ಮಿಸಿದಂತಹ ಬೌದ್ಧ ಚೈತ್ಯಾಲಯವು(ಪ್ರಸ್ತುತ ಸಂಪೂರ್ಣ ನಾಶಗೊಂಡಿದೆ) ಬ್ರಹ್ಮಗಿರಿ ಬೆಟ್ಟದ ತಪ್ಪಲಿನಲ್ಲಿ ದೊರೆತಿದೆ. ಶೇಷಾದ್ರಿ. ಮತ್ತಿತರ ಪುರಾತತ್ವ ಶಾಸ್ತ್ರಜ್ಞರು ಹಾಗೂ ಇತಿಹಾಸಕಾರರು ಇಲ್ಲಿನ ಬ್ರಹ್ಮಗಿರಿಯ ಶಾಸನದಲ್ಲಿ ಉಲ್ಲೇಖಿತಗೊಂಡಂತಹ 'ಇಸಿಲ ಪಟ್ಟಣ' ಪ್ರಸ್ತುತ ಇಂದಿನ ಬ್ರಹ್ಮಗಿರಿಯೇ ಆಗಿತ್ತೆಂದು ಅಭಿಪ್ರಾಯ ಪಡುತ್ತಾರೆ. ಈ ಆಧಾರಗಳ ಹಿನ್ನೆಲೆಯಲ್ಲಿ ಮೊಳಕಾಲ್ಮೂರು ಪ್ರದೇಶವು ಮೌರ್ಯರ ಅಧೀನಕ್ಕೆ ಒಳಗಾಗಿತ್ತು ಎನ್ನಬಹುದಾಗಿದೆ. ಅಶೋಕನ ಮರಣದ ನಂತರ ಆತನ ವಂಶಸ್ಥರು ಮೌರ್ಯ ಸಾಮ್ರಾಜ್ಯದ ಆಳ್ವಿಕೆಯನ್ನು ನಡೆಸಿದರೂ ಸಹ ಕ್ರಿ.ಪೂ. ಸು.೧೮೭ರ ವೇಳೆಗೆ ಈ ಸಾಮ್ರಾಜ್ಯವು ಅವನತಿಯ ಹಾದಿಯನ್ನು ತಲುಪಿ ಅವರ ಅಧೀನದಲ್ಲಿದ್ದವರು ಸ್ವತಂತ್ರರಾದರು. ಈ ವೇಳೆಗೆ ಕರ್ನಾಟಕದಲ್ಲಿ ರಾಜಕೀಯವಾಗಿ ಶಾತವಾಹನರು ತಲೆ ಎತ್ತಿದರು.[೩೬]

## ಶಾತವಾಹನರು

ಮೌರ್ಯ ಸಾಮ್ರಾಜ್ಯ ಅವನತಿಯ ನಂತರ ದಖನ್ ಮತ್ತು ಕರ್ನಾಟಕದ ರಾಜಕೀಯ ರಂಗವನ್ನು ಪ್ರವೇಶಿಸಿದ ಶಾತವಾಹನರು ಕ್ರಿ.ಪೂ.ಸು.೨೨೦ ರಿಂದ ಕ್ರಿ.ಶ.೨೩೦ ರವರೆಗೆ ಅಂದರೆ ಸುಮಾರು ೪೫೦ ವರ್ಷಗಳ ಕಾಲ ಆಡಳಿತ ನಡೆಸಿದ್ದಾರೆ ಈ ಶಾತವಾಹನ ರಾಜವಂಶವು ಕರ್ನಾಟಕದ ಬಹುಭಾಗನ್ನು ಆಳಿದ ಮೊಟ್ಟಮೊದಲ ರಾಜ ಮನೆತನವಾಗಿದೆ. ಶಾತವಾಹನರ ಕಾಲದ ಶಾಸನಗಳು ಮೊಳಕಾಲ್ಮೂರು ತಾಲೂಕು ಸೇರಿದಂತೆ ಚಿತ್ರದುರ್ಗ ಜಿಲ್ಲೆಯ ಯಾವೊಂದು ಭಾಗದಲ್ಲಿ ಇದುವರೆಗೂ ದೊರೆತಿಲ್ಲ. ಆದರೆ ಜಿಲ್ಲೆಯ ವಿವಿಧ ಬಾಗಗಳಲ್ಲಿ ಕಾಲಕ್ಕೆ ಸಂಬಂಧಿಸಿದಂತಹ ನಾಣ್ಯಗಳು ಸೇರಿದಂತೆ ಶಾಸನೇತರ ಪುರಾತತ್ವೀಯ ಪ್ರಾಚ್ಯವಶೇಷಗಳು ದೊರೆತಿರುವುದರಿಂದ ಜಿಲ್ಲೆಯಲ್ಲಿ ಇವರ ರಾಜಕೀಯ ಇತಿಹಾಸವನ್ನು ಕಟ್ಟಿ ಕೊಡಬೇಕಾಗುತ್ತದೆ. ಜಿಲ್ಲೆಯ ಚಂದ್ರವಳ್ಳಿಯ ಉತ್ಖನನದಲ್ಲಿ ದೊರೆತ ಅವಶೇಷಗಳು ಶಾತವಾಹನರ ಇತಿಹಾಸದ ಮೇಲೆ ಬೆಳಕು ಚೆಲ್ಲುತ್ತವೆ. ಈ ಶತಮಾನದ ಆದಿ ಭಾಗದಲ್ಲಿ ಕೆರೆ, ಕಾಲುವೆಯನ್ನು ತೋಡುವಾಗ ಅನೇಕ ಸೀಸದ ನಾಣ್ಯಗಳು ದೊರೆತವು. ಇವುಗಳನ್ನು

ಪರೀಕ್ಷಿಸಿದ ಇ.ಜೆ. ರಾಪ್ಸನ್ ಎಂಬ ನಾಣ್ಯಶಾಸ್ತ್ರಜ್ಞರು ಸು೧೮೦೦ ವರ್ಷಗಳ ಹಿಂದೆ ಈ ಪ್ರದೇಶವನ್ನಾಳುತ್ತಿದ್ದ ಶಾತವಾಹನರ ಮಾಂಡಲೀಕರಸರ ನಾಣ್ಯಗಳೆಂದು ತಿಳಿಸಿದರು.[೩೭]

ಮೊಳಕಾಲ್ಮೂರು ತಾಲೂಕಿನ ಕೆಲವೊಂದು ಭಾಗಗಳಲ್ಲಿ ಶಾತವಾಹನರ ಕಾಲದ ಅವಶೇಷಗಳು ಕಂಡುಬಂದಿವೆ. ಮಾರ್ಟಿಮರ್ ವೀಲ್ಲರ್ ಅವರು ೧೯೪೭ರಲ್ಲಿ ಬ್ರಹ್ಮಗಿರಿಯಲ್ಲಿ ಕೈಗೊಂಡ ಉತ್ಖನನ ಕಾರ್ಯದಲ್ಲಿ ಇಟ್ಟಿಗೆಯ ಚೂರುಗಳು, ಮಣಿಗಳು, ಕಪ್ಪು-ಕೆಂಪು ಬಣ್ಣದ ಬಿಳಿಬಣ್ಣದ ರೇಖಾಚಿತ್ರಗಳುಳ್ಳ ಮಣ್ಣಿನ ಮಡಿಕೆಗಳು, ಕಲ್ಲು, ಸುಟ್ಟಮಣ್ಣು ಹಾಗೂ ಲೋಹದ ಬಳೆಗಳೆಂಬ ಮೊದಲಾದ ಪ್ರಾಚ್ಯವಶೇಷಗಳನ್ನು ಪತ್ತೆ ಹಚ್ಚಿದರು. ವೀಲ್ಲರ್‌ರವರು ಇದರನ್ನು ಆಂಧ್ರ ಸಂಸ್ಕೃತಿ ಎಂದು ಕರೆದರು.[೩೮] ಚಂದ್ರವಳ್ಳಿಯ ಉತ್ಖನನದಲ್ಲಿ ದೊರೆತಂತೆ ಬ್ರಹ್ಮಗಿರಿಯಲ್ಲಿ ಯಾವುದೇ ರೀತಿಯ ಶಾತವಾಹನರ ಕಾಲದ ನಾಣ್ಯಗಳು ದೊರೆತಿಲ್ಲದಿದ್ದರೂ ಸಹ ಈ ಪ್ರದೇಶ ಅಂದಿನ ಕಾಲದ ಪ್ರಮುಖ ನೆಲೆಗಳಲ್ಲಿ ಒಂದಾಗಿತ್ತು ಎನ್ನಬಹುದು. ಶಾತವಾಹನರ ಆಡಳಿತವು ಕ್ರಿ.ಶ.೩ನೇ ಶತಮಾನದ ವೇಳೆಗೆ ಕೊನೆಗೊಂಡಿತು. ಆನಂತರ ಅವರ ಸ್ಥಾನವನ್ನು ಕದಂಬರು ಆಕ್ರಮಿಸಿಕೊಂಡರು.

### ಕದಂಬರು

ಕರ್ನಾಟಕವನ್ನಾಳಿದ ಮೊದಲ ಕನ್ನಡದ ರಾಜಮನೆತನವಾಗಿರುವ ಕದಂಬರು ಶಾತವಾಹನರ ಅವನತಿಯ ನಂತರ ಕ್ರಿ.ಶ.ಸುಮಾರು ೪ರಿಂದ ೬ನೇಶತಮಾನದವರೆಗೆ, ತಲಕಾಡಿನ ಗಂಗರ ಸಮಕಾಲೀನರಾಗಿ ರಾಜ್ಯಾಡಳಿತ ನಡೆಸಿದರು. ಮೊಳಕಾಲ್ಮೂರು ತಾಲೂಕಿನಲ್ಲಿ ಕದಂಬರ ಆಳ್ವಿಕೆಗೆ ಸಂಬಂಧಿಸಿದಂತೆ ಹಲವಾರು ಕುರುಹುಗಳು ದೊರೆತಿವೆ. ಕ್ರಿ.ಶ.ಸು.೧೦-೧೧ ನೇ ಶತಮಾನದಲ್ಲಿ ಈ ತಾಲೂಕಿನಲ್ಲಿ ಕದಂಬರ ಶಾಖಾಮನೆತನ ಒಂದು ಆಡಳಿತ ನಡೆಸಿರುವುದರ ಕುರಿತಾದ ಅವಶೇಷಗಳು ದೊರೆಯುತ್ತವೆ. ಮೊಳಕಾಲ್ಮೂರುವಿನ ನುಂಕೀಮಲೆಯ ಮಲ್ಲಿಕಾರ್ಜುನ ದೇವಾಲಯದ ಹಿಂದಿನ ಹುಟ್ಟುಗುಂಡುವಿನಲ್ಲಿರುವ ಪಶ್ಚಿಮದ ಕಡೆಗಿನ ಕ್ರಿ.ಶ. ಸು. ೯೮೮ ರ ಶಾಸನದ ಪ್ರಕಾರ ಚಾಲುಕ್ಯರ ಜಯಸಿಂಹನ ಅಧೀನನಾಗಿ ಮೊಳಕಾಲ್ಮೂರು ಪ್ರಾಂತ್ಯವನ್ನು ಆಜವರ್ಮನೆಂಬ ಕದಂಬದೊರೆಯು ಆಳುತ್ತಿದ್ದನು. ಕದಂಬ ಮತ್ತೊಬ್ಬ ಅರಸನಾದ ಬಂಚರಸ ದೇವನು ಕ್ರಿಶ. ಸು.೧೦೮೦ರಲ್ಲಿ ಇದೇ ಪ್ರಾಂತ್ಯದ ನುಂಕೀಮಲೆಯನ್ನು ಆಳುತ್ತಿದ್ದನು.[೩೯]

ಒಟ್ಟಾರೆಯಾಗಿ ಮೇಲಿನ ಆಧಾರಗಳಿಂದ ಮೊಳಕಾಲ್ಮೂರು ಹಾಗೂ ಈ ತಾಲೂಕಿನ ಹಲವು ಪ್ರದೇಶಗಳು ಕದಂಬರ ಆರಂಭಿಕ ಆಳ್ವಿಕೆಗೆ ಒಳಪಟ್ಟಿದ್ದವೆಂದು ತಿಳಿಯಬಹುದಾಗಿದೆ. ಕ್ರಿ.ಶ. ೬ನೇ ಶತಮಾನದವರೆಗೆ ಸ್ವತಂತ್ರ ಆಡಳಿತ ನಡೆಸಿದ ಇವರು ಆ ನಂತರ ಬಾದಾಮಿ ಚಾಲುಕ್ಯರ ಸಾಮಂತರಾದರು. ಮುಂದೆ ಸುಮಾರು ಕ್ರಿ.ಶ.೧೨ನೇ ಶತಮಾನದವರೆಗೆ ಕರ್ನಾಟಕದ ವಿವಿಧ ಭಾಗಗಳಲ್ಲಿ ಇವರ ಶಾಖಾಮನೆತನಗಳು ಆಡಳಿತ ನಡೆಸಿದವು. ಅವುಗಳಲ್ಲಿ ಹಾನಗಲ್ ಮತ್ತು ಗೋವಾ ಕದಂಬರ ಮನೆತನಗಳು ಪ್ರಮುಖವಾದವುಗಳಾಗಿವೆ. ಈಗಾಗಲೇ ಗಮನಿಸಿದಂತೆ

ಕ್ರಿ.ಶ.೧೦-೧೧ನೇ ಶತಮಾನಗಳಲ್ಲಿ ಇವರ ಸಣ್ಣ ಶಾಖಾಮನೆತನವೊಂದು ಮೊಳಕಾಲ್ಮೂರು ಪ್ರದೇಶ ಮತ್ತು ಅದರ ಆಸುಪಾಸಿನ ಭಾಗಗಳಲ್ಲಿ ನುಂಕೀಮಲೆಯನ್ನು ಪ್ರಧಾನವಾಗಿಟ್ಟುಕೊಂಡು ಆಳ್ವಿಕೆ ನಡೆಸಿದ್ದಾರೆ.[೪೦] ಕದಂಬರ ನಂತರ ಕರ್ನಾಟಕದಲ್ಲಿ ಬಾದಾಮಿ ಚಾಲುಕ್ಯರ ಸಾಮ್ರಾಜ್ಯ ಉದಯಗೊಂಡಿತು

## ಬಾದಾಮಿ ಚಾಲುಕ್ಯರು

ಕದಂಬರ ನಂತರ ಕ್ರಿ.ಶ.ಸು೬ನೇ ಶತಮಾನದಿಂದ ಕ್ರಿ.ಶ ಸು.೮ನೇ ಶತಮಾನದವರೆಗೆ ಬಾದಾಮಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಡಳಿತ ನಡೆಸಿದ ಬಾದಾಮಿ ಚಾಲುಕ್ಯರು ಕರ್ನಾಟಕದ ರಾಜಕೀಯ ಮತ್ತು ಸಾಂಸ್ಕೃತಿಕ ಇತಿಹಾಸದಲ್ಲಿ ಅತಿ ಮಹತ್ವದ ಸ್ಥಾನವನ್ನು ಪಡೆದಿದ್ದಾರೆ. ಮೊದಲಬಾರಿಗೆ ಅಖಂಡ ಕರ್ನಾಟಕದ ಚಕ್ರವರ್ತಿಗಳಾಗಿ ಕ್ರಿ.ಶ. ೫೪೩-೭೫೩ರವರೆಗೆ ಅಂದರೆ ಸು.೨೦೦ ವರ್ಷಗಳ ಕಾಲ ಆಡಳಿತ ನಡೆಸಿದ ಬಾದಾಮಿ ಚಾಲುಕ್ಯರು ಅವರ ಸಮಕಾಲೀನರಾದ ಪಲ್ಲವರ ದ್ವೇಷಿಗಳಾಗಿದ್ದರು. ಆದ್ದರಿಂದ ಈ ಎರಡೂ ರಾಜ್ಯಗಳ ಗಡಿಭಾಗಗಳಲ್ಲಿದ್ದ ಚಿತ್ರದುರ್ಗ ಜಿಲ್ಲೆಯ ಪ್ರದೇಶಗಳಲ್ಲಿ ಇವರಿಬ್ಬರ ನಡುವೆ ನಿರಂತರ ಯುದ್ಧಗಳ ನಡೆದು ಅಶಾಂತಿಯ ವಾತಾವರಣ ಉಂಟಾಗುತ್ತಿತ್ತು.[೪೧] ಮೊಳಕಾಲ್ಮೂರು ತಾಲೂಕಿನಲ್ಲಿ ಇವರಿಗೆ ಸಂಬಂಧಿಸಿದ ಶಾಸನಗಳು ಇದುವರೆಗೂ ಲಭ್ಯವಾಗಿಲ್ಲ. ಆದರೂ ಈ ತಾಲೂಕಿನ ಸುತ್ತಮುತ್ತಲಿನ ಪ್ರದೇಶದಲ್ಲಿ ಈ ರಾಜಮನೆತನದ ಆಳ್ವಿಕೆಗೆ ಸಂಬಂಧಿಸಿದ ಕುರುಹುಗಳು ದೊರೆತಿರುವುದರಿಂದ ಈ ತಾಲೂಕು ಸಹ ಅವರ ಅಧೀನಕ್ಕೆ ಒಳಪಟ್ಟಿತ್ತು ಎನ್ನಬಹುದಾಗಿದೆ.

## ರಾಷ್ಟ್ರಕೂಟರು

ದಂತಿದುರ್ಗನು ಬಾದಾಮಿ ಚಾಲುಕ್ಯರ ಕೊನೆಯ ದೊರೆಯಾದ ಎರಡನೇ ಕೀರ್ತಿ ವರ್ಮನನ್ನು ಸೋಲಿಸುವುದರ ಮೂಲಕ ಬಾದಾಮಿ ಚಾಳುಕ್ಯರ ಅವನತಿಗೆ ಕಾರಣನಾಗಿ ಮಾನ್ಯಖೇಟವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ರಾಷ್ಟ್ರಕೂಟ ರಾಜಮನೆತನವ ಸ್ಥಾಪಿಸಿದನು. ಕ್ರಿ.ಶ.ಸು.೮ನೇ ಶತಮಾನದ ಮಧ್ಯಭಾಗದಿಂದ ೧೦ನೇ ಶತಮಾನದ ಮಧ್ಯಭಾಗದವರೆಗೆ (ಕ್ರಿ.ಶ.೭೫೭-೯೭೩) ಆಡಳಿತ ನಡೆಸಿದರು. ರಾಷ್ಟ್ರಕೂಟರು ಸು.೨೨೫ವರ್ಷಗಳ ಕಾಲ ಕರ್ನಾಟಕದಲ್ಲಿ ಸುದಿರ್ಘವಾದ ಆಡಳಿತವನ್ನು ನಡೆಸಿ ಇಲ್ಲಿನ ಕಲೆ, ವಾಸ್ತುಶಿಲ್ಪ, ಸಾಹಿತ್ಯ, ಮೊದಲಾದವುಗಳ ಬೆಳವಣಿಗೆಗೆ ತಮ್ಮದೇ ಆದ ಕೊಡುಗೆಯನ್ನು ನೀಡುವುದರ ಮೂಲಕ ಕರ್ನಾಟಕದ ಇತಿಹಾಸದಲ್ಲಿ ಪ್ರಮುಖ ಪಾತ್ರವಹಿಸಿದ್ದಾರೆ.

ಮೊಳಕಾಲ್ಮೂರು ತಾಲೂಕಿನಲ್ಲಿ ರಾಷ್ಟ್ರಕೂಟರ ಆಡಳಿತಕ್ಕೆ ಸಂಬಂದಿಸಿದ ಕುರುಹುಗಳು ಕಂಡುಬಂದಿವೆ ಈ ತಾಲೂಕಿನ ಜಟಂಗಿ ರಾಮೇಶ್ವರ ಬೆಟ್ಟದಲ್ಲಿ ದೊರೆತ ಕ್ರಿ.ಶ.ಸು.೯೬೧ರ

ಶಿಲಾಶಾಸವು[೪೨] ರಾಷ್ಟ್ರಕೂಟರ ೩ನೇ ಕೃಷ್ಣನ ಆಳ್ವಿಕೆಗೆ ಸಂಬಂದಿಸಿದ್ದಾಗಿದೆ. ಅಲ್ಲದೇ ಈ ಬೆಟ್ಟದ ಮೇಲಿರುವ ರಾಮೇಶ್ವರ ದೇವಾಲಯವು ರಾಷ್ಟ್ರಕೂಟರ ಕಾಲದಲ್ಲಿ ನಿರ್ಮಾಣಗೊಂಡಿದೆ.[೪೩] ಒಟ್ಟಾರೆಯಾಗಿ ಮೇಲಿನ ಈ ಎಲ್ಲಾ ಆಧಾರಗಳಿಂದ ಮೊಳಕಾಲ್ಮೂರು ಪ್ರದೇಶ ರಾಷ್ಟ್ರಕೂಟರ ಆಳ್ವಿಕೆಯ ಅಧೀನಕ್ಕೆ ಒಳಪಟ್ಟಿತ್ತೆಂದು ಹೇಳಬಹುದಾಗಿದೆ.

## ಕಲ್ಯಾಣ ಚಾಲುಕ್ಯರು

ರಾಷ್ಟ್ರಕೂಟರ ದೊರೆಯಾದ ೨ನೇಕರ್ಕನನ್ನು ಕ್ರಿ.ಶ೯೭೩ರಲ್ಲಿ ಸೋಲಿಸುವುದರ ಮೂಲಕ ಕಲ್ಯಾಣಿ ಚಾಲುಕ್ಯರ ಆಳ್ವಿಕೆಗೆ ೨ನೇ ತೈಲಪನು ಭದ್ರ ಬುನಾದಿಯನ್ನು ಹಾಕಿದನು.[೪೪] ಕಲ್ಯಾಣಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಡಳಿತ ನಡೆಸಿದ ಇವರು ಕರ್ನಾಟಕ ಚರಿತ್ರೆಯಲ್ಲಿನ ಸಾಂಸ್ಕೃತಿಕ ಕ್ಷೇತ್ರಕ್ಕೆ ಉಜ್ವಲವಾದ ಕೊಡುಗೆಗಳನ್ನು ನೀಡಿದ್ದಾರೆ. ಮೊಳಕಾಲ್ಮೂರು ತಾಲೂಕಿನಲ್ಲಿ ಈ ಮನೆತನಕ್ಕೆ ಸಂಬಂಧಿಸಿದ ಶಾಸನಗಳು ದೊರೆತಿರುವುದಿಲ್ಲ ಆದರೆ ಅವರು ವಾಸ್ತುಶಿಲ್ಪ ಕಲಾಶೈಲಿಯನ್ನು ಹೋಲುವಂತಹ ದೇವಾಲಯಗಳು ನುಂಕೀಮಲೆ (ಮಲ್ಲಿಕಾರ್ಜುನ ದೇವಾಲಯ) ಹಿರೆಕೆರೆಹಳ್ಳಿ(ಕನ್ನೆರಮ್ಮ ದೇವಾಲಯ)ಗಳಲ್ಲಿ ಕಂಡುಬಂದಿರುವುದರಿಂದ ಭಾಗಶಃ ಈ ದೇವಾಲಯಗಳು ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾಗಿರಬಹುದೆಂದು ಹೇಳಬಹುದಾಗಿದೆ.[೪೫] ಈ ಮೇಲಿನ ಆಧಾರಗಳಿಂದ ಈ ಪ್ರದೇಶವು ಕಲ್ಯಾಣಿ ಚಾಲುಕ್ಯರ ಆಳ್ವಿಕೆಗೆ ಒಳಪಟ್ಟಿದ್ದಿತ್ತೆಂದು ಹೇಳಬಹುದಾಗಿದೆ.

ಈ ಮನೆತನದ ೩ನೇ ತೈಲಪನ ಆಳ್ವಿಕೆಯ ವೇಳೆಗೆ ಕಲ್ಯಾಣಿ ಚಾಲುಕ್ಯರು ಬಿಜ್ಜಳನ ದಂಗೆಯನ್ನು ಎದುರಿಸಬೇಕಾಗಿದ್ದರಿಂದ ಕ್ರಿ.ಶ೧೧೫೩ರಲ್ಲಿ ಹೊಯ್ಸಳರು, ಕಾಕತೀಯರು, ಬಿಜ್ಜಳ ಮತ್ತು ಶಿಲಾಹಾರರೆಂಬ ಮೊದಲಾದವರು ಸ್ವತಂತ್ರ ಘೋಷಿಸಿಕೊಂಡರು. ಕ್ರಿ.ಶ. ೧೧೬೨ ರಲ್ಲಿ ಬಿಜ್ಜಳನು ಕಲ್ಯಾಣಿ ಚಾಲುಕ್ಯರ ೩ನೇ ತೈಲಪನನ್ನು ಸೋಲಿಸುವುದರ ಮೂಲಕ ಕಲ್ಯಾಣಿ ಕಲಚೂರಿಗಳ ವಂಶಕ್ಕೆ ನಾಂದಿ ಹಾಡಿದನು. ಮುಂದೆ ಈ ಕಲಚೂರಿಗಳ ರಾಜ್ಯ ಹೊಯ್ಸಳರಲ್ಲಿ ಲೀನವಾಯಿತು. ಆದರೆ. ಅವರನ್ನು ಗಮನಿಸುವ ಪೂರ್ವದಲ್ಲಿ ಈ ಪ್ರದೇಶದಲ್ಲಿ ಆಳಿದ ನೊಳಂಬರು ಮತ್ತು ಸೇವುಣರೆಂಬ ಮಾಂಡಲೀಕರ ಕುರಿತು ಅವಲೋಕಿಸುವುದು ಸೂಕ್ತವೆನಿಸುತ್ತದೆ.

## ನೊಳಂಬರು–ಸೇವುಣರು

ನೊಳಂಬ ರಾಜಮನೆತನದ ದೊರೆಗಳನ್ನು ನೊಳಂಬ ಪಲ್ಲವರೆಂದು ಕರೆಯಲಾಗುತ್ತದೆ.[೪೬] ಆರಂಭದಲ್ಲಿ ಚಿತ್ರದುರ್ಗ ತುಮಕೂರು ಜಿಲ್ಲೆಗಳಿಗೆ ಮಾತ್ರ ಸೀಮಿತಗೊಂಡಂತಹ ನೊಳಂಬರ ಆಳ್ವಿಕೆ ತದನಂತರದ ಕಾಲದಲ್ಲಿ ತಮಿಳುನಾಡು, ಆಂಧ್ರಪ್ರದೇಶ ಅಲ್ಲದೇ ಕರ್ನಾಟಕದ ಹಲವಾರು ಭಾಗಗಳಿಗೆ ವಿಸ್ತಾರಗೊಂಡಿತು. ಈ ನೊಳಂಬರ ಆಳ್ವಿಕೆಗೊಳಪಟ್ಟ ಪ್ರದೇಶವನ್ನು

"ನೊಳಂಬವಾಡಿ-೩೨೦೦೦" ಎಂದು ಕರೆಯಲಾಗುತ್ತದೆ.[೪೭] ತಾಲೂಕಿನ ಅಶೋಕ ಸಿದ್ದಾಪುರದ ರಾಮಚಂದ್ರೇಶ್ವರ ದೇವಾಲಯದಲ್ಲಿರುವ ಕ್ರಿ.ಶ.೧೦೨೨ರ ಶಾಸನದಂತೆ ನೊಳಂಬ ಪೆರ್ಮಾಡಿ ಎಂಬ ರಾಜನು ಕಲ್ಯಾಣ ಚಾಲುಕ್ಯರ ದೊರೆಯಾದ ಜಗದೇಕಮಲ್ಲ-ಜಯಸಿಂಹದೇವನ ಸಾಮಾಂತನಾಗಿ ಈ ಪ್ರದೇಶವನ್ನು ಆಳಿದನು. ಅಲ್ಲದೇ ಜಟಂಗಿರಾಮೇಶ್ವರ ಬೆಟ್ಟದಲ್ಲಿರುವ ಕ್ರಿ.ಶ.೧೦೩೨ರ ಹಾಗೂ ೧೦೪೧ರ ಶಾಸನಗಳು ಸಹ ನೊಳಂಬರ ಆಳ್ವಿಕೆಯ ಬಗ್ಗೆ ಮಾಹಿತಿ ನೀಡುತ್ತವೆ.[೪೮] ಸೇವಣರಿಗೆ ಸಂಬಂಧಿಸಿದಂತೆ ಹೇಳುವುದಾದರೇ ಸೇವಣಚಂದ್ರನಿಂದ ಆರಂಭ ಗೊಂಡಿರುವಂತಹ ರಾಜವಂಶಕ್ಕೆ ಸೇವುಣರೆಂದು, ಹಾಗೂ ದೇವಗಿರಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರಿಂದ ದೇವಗಿರಿಯ ಸೇವುಣರೆಂದು ಅಥವಾ ಯಾದವರೆಂದು ಕರೆಯಲಾಗುತ್ತದೆ. ಹೊಯ್ಸಳರ ಶಾಸನಗಳು ಹಾಗೂ ಇವರ ಸಮಕಾಲೀನ ರಾಜರುಗಳೂ ಸಹ ಇವರನ್ನು ಸೇವುಣರೆಂದು ಕರೆದಿದ್ದಾರೆ.[೪೯] ಒಟ್ಟಾರೆಯಾಗಿ ಈ ಮೇಲಿನ ಆಧಾರಗಳಿಂದ ನೊಳಂಬರಿಗೆ ಸಂಬಂಧಿಸಿದಂತೆ ನೊಳಂಬವಾಡಿ-೩೨೦೦೦ ಪ್ರದೇಶಕ್ಕೆ ಮೊಳಕಾಲ್ಮೂರು ಒಳಗಾಗಿದ್ದರ ಬಗ್ಗೆ ಆಕರಗಳು ದೊರೆತಿರುವುದಿಲ್ಲ.

**ಹೊಯ್ಸಳರು: ಕುಮ್ಮಟದ ಅರಸರು**

ಕಲ್ಯಾಣಿ ಚಾಲುಕ್ಯರ ನಂತರ ಕ್ರಿ.ಶ.ಸು. ೧೦೦೦ ದಿಂದ ಕ್ರಿ.ಶ. ಸು.೧೩೪೨ರವರೆಗೆ ಕರ್ನಾಟಕ ಸೇರಿದಂತೆ ಇಡೀ ದಕ್ಷಿಣ ಭಾರತದಲ್ಲಿಯೇ ಆಡಳಿತ ನಡೆಸಿದವರು ಹೊಯ್ಸಳರು. ಚಾಲುಕ್ಯರ ಸಾಮಾಂತರಾಗಿದ್ದಾಗಲೇ ನೊಳಂಬವಾಡಿಯಾಗಿದ್ದ ಈಗಿನ ಚಿತ್ರದುರ್ಗ, ಹಾಗೂ ಅದರ ಸುತ್ತ ಮುತ್ತಲಿನ ಪ್ರದೇಶಗಳು ಹೊಯ್ಸಳರ ಗಮನವನ್ನು ಸೆಳೆದಿದ್ದವು. ಈ ತಾಲೂಕಿನ ಅಶೋಕ ಸಿದ್ದಾಪುರದ ಜಾಲಿ ಹೊಲದಲ್ಲಿರುವ ಕ್ರಿ.ಶ. ೧೨೧೫ ರ ವೀರಗಲ್ಲೊಂದು ಇವರ ಕಾಲದ ಸಾಮಾಜಿಕ ಪದ್ದತಿಯನ್ನು ತಿಳಿಸುವುದರ ಜೊತೆಗೆ ಹೊಯ್ಸಳ ದೊರೆಯಾದ ಇಮ್ಮಡಿ ಬಲ್ಲಾಳನು ಇಲ್ಲಿ ಹನೆಯಕೋಟೆ(ಬ್ರಹ್ಮಗಿರಿಕೋಟೆ)ಯನ್ನು ಗೆದ್ದು ಅಲ್ಲಿ 'ವಿಜಯಗಿರಿ' ಎಂಬ ಪಟ್ಟಣವನ್ನು ನಿರ್ಮಿಸಿದರ ಬಗ್ಗೆ ಹಾಗೂ ಹುಲವಾನಸಾವನ್ತ ಸಿವೋದ ನಾಯಕನ ತಾಯಿ ಹೊನ್ನಕ್ಕ ನಾಗತಿಯು ಮರಣ ಹೊಂದಿದಾಗ, ಹೊನ್ನಿ ಎಂಬ ಸೇವಕಿಯು ಆಕೆಯ ಒಳಿತಿಗಾಗಿ ಆತ್ಮಾರ್ಪಣೆ ಮಾಡಿಕೊಂಡ ಘಟನೆಯನ್ನು ವಿವರಿಸುತ್ತದೆ.[೫೦] ಹೀಗೆ ಈ ಮೇಲ್ಕಂಡ ಶಾಸನದ ಆಧಾರದ ಮೇಲೆ ಇಮ್ಮಡಿ ಬಲ್ಲಾಳನು ಮೊಳಕಾಲ್ಮೂರುವರೆಗಿನ ಪ್ರದೇಶವನ್ನು ವಶಪಡಿಸಿಕೊಂಡಿದ್ದನೆಂದು ಸ್ಪಷ್ಟವಾಗುತ್ತದೆ.

ಮೊಳಕಾಲ್ಮೂರು ಪ್ರದೇಶ ಕುಮ್ಮಟದ ಅರಸರ ಆಳ್ವಿಕೆಗೂ ಒಳಪಟ್ಟಿತ್ತು. ಇದು ಕುಮ್ಮಟದ ಅರಸರಾದ ಮುಮ್ಮಡಿ ಸಿಂಗೇಯ ನಾಯಕ, ಕಂಪಿಲರಾಯ, ಮತ್ತು ಕುಮಾರ ರಾಮರ ಮೂಲನೆಲೆಯಾಗಿತ್ತು.[೫೧] ಇಲ್ಲಿನ ಜಟಂಗಿ ರಾಮೇಶ್ವರವು ಇವರ ಮನೆದೇವರಾಗಿತ್ತು. ಕುಮಾರ ರಾಮನ ಕುದುರೆ ಹೆಜ್ಜೆಗಳು, ಕಂಪಿಲರಾಯನ ಹೊಂಡ, ಕುಮಾರರಾಮನ ಗರಡಿ

ಮನೆ ಮುಂತಾವದವುಗಳು ಇಲ್ಲಿವೆ. ಕುಮ್ಮಟದುರ್ಗದ ಮುಮ್ಮಡಿ ಸಿಂಗೇಯನಾಯಕನಿಗೆ ಆಂಧ್ರದ ಕರ್ನೂಲು, ಕಡಪ, ನೆಲ್ಲೂರು ಸೇರಿದಂತೆ ಕರ್ನಾಟಕದ ಬಳ್ಳಾರಿ, ಚಿತ್ರದುರ್ಗ ದಾವಣಗೆರೆ ಜಿಲ್ಲೆಗಳು ಸೇರಿದ್ದವು. ಅಲ್ಲದೇ ಹರಿಹರ, ದಾವಣಗೆರೆ, ಜಗಳೂರು, ಮೊಳಕಾಲ್ಮೂರು, ರಾಯದುರ್ಗ, ಸಂಡೂರು ಮೊದಲಾದವುಗಳು ಇವರ ಕಾಲದ ಪ್ರಮುಖ ಪಟ್ಟಣಗಳಾಗಿದ್ದವು. ಇದರಿಂದ ಮೊಳಕಾಲ್ಮೂರು ಪ್ರದೇಶ ಕುಮ್ಮಟದ ಅರಸರ ಅಧೀನಕ್ಕೆ ಒಳಪಟ್ಟಿತ್ತೆಂದು ತಿಳಿಯಬಹುದಾಗಿದೆ.

## ವಿಜಯನಗರ

ಹೊಯ್ಸಳ ನಂತರ ಹಿಂದೂಧರ್ಮದ ರಕ್ಷಣೆಗಾಗಿ ಉಗಮಗೊಂಡ ವಿಜಯನಗರ ಸಾಮ್ರಾಜ್ಯದ ಅಧೀನಕ್ಕೆ ಮೊಳಕಾಲ್ಮೂರು ಪರಿಸರದ ಬಹುಭಾಗ ಒಳಪಟ್ಟಿತ್ತೆಂದು ಈ ಪ್ರದೇಶದಲ್ಲಿ ದೊರೆತ ಅವರ ಶಾಸನಗಳಿಂದ ಅರಿಯಬಹುದು. ಪ್ರೌಢದೇವರಾಯನು ಬೇಟೆಗೆಂದು ಇಲ್ಲಿಗೆ ಬಂದು ಮಾಚೇನಹಳ್ಳಿಯನ್ನು ದತ್ತಿಬಿಟ್ಟನೆಂಬುದು (ಗಜಬೇಟೆಗಾರ) ತಿಳಿದು ಬರುತ್ತದೆ. ವೀರ ನರಸಿಂಹನಿಂದ ಕೃಷ್ಣ ದೇವರಾಯನನ್ನು ಕೊಲ್ಲಲು ಆದೇಶಿತನಾಗಿದ್ದ ಮಂತ್ರಿ ತಿಮ್ಮರಸು ಕೃಷ್ಣದೇವರಾಯನನ್ನು ತಂದು ನೆಲಮಾಳಿಗೆಯಲ್ಲಿಟ್ಟಿದ್ದು ಈ ಪ್ರದೇಶದಲ್ಲಿಯೇ.[೫೨] ವಿಜಯನಗರದ ಅರಸರು ತಮ್ಮ ಆಡಳಿತದ ಅನುಕೂಲಕ್ಕಾಗಿ ಸಾಮ್ರಾಜ್ಯವನ್ನು ಗ್ರಾಮ, ಸೀಮೆ, ವೆಂಟಿ ಮತ್ತು ಚಾವಡಿಗಳೆಂದು ವಿಭಾಗಿಸಿಕೊಂಡಿದ್ದರು.[೫೩] ಆಗಿನ ಕಾಲದಲ್ಲಿ ಕೊಟ್ಟೂರು ಚಾವಡಿ, (ದಾವಣಗೆರೆ, ಹರಿಹರ) ಯಕ್ಕಟ್ಟಿ ಚಾವಡಿ (ಹೊಳಲ್ಕೆರೆ) ರಾಯದುರ್ಗ ಚಾವಡಿ[೫೪](ಆಂದ್ರಪ್ರದೇಶದ ಗಡಿ, ಹಿರಿಯೂರು, ಚಳ್ಳಕೆರೆ, ಮೊಳಕಾಲ್ಮೂರು)ಗಳು ಅಂದಿನ ಪ್ರಮುಖ ಚಾವಡಿಗಳಾಗಿದ್ದವು. ಮೊಳಕಾಲ್ಮೂರು ಅಂದಿನ ರಾಯದುರ್ಗಚಾವಡಿ ಅಧೀನದಲ್ಲಿತ್ತು. ಬುಕ್ಕರಾಯನ ಕಾಲದಲ್ಲಿದ್ದ ನಾಯಂಕರ ಪದ್ಧತಿಯು ರಾಯದುರ್ಗಸೀಮೆಯಲ್ಲಿ ಪ್ರಚಲಿತದಲ್ಲಿತ್ತು. ಈ ಸೀಮೆಗೆ ಸೇರಿದ್ದ ತಾಲೂಕಿನ ಇಂದಿನ ಕರಡಿಹಳ್ಳಿ(ಅಂದಿನ ಹರಿಹರರಾಯಪುರ) ಯಲ್ಲಿನ ಹನುಮಂತ ದೇವರ ಗುಡಿಯ ಮುಂದಿರುವ ಶಿಲಾಶಾಸನದಿಂದ ಕ್ರಿ.ಶ. ೧೫೭೮ ರಲ್ಲಿ ಈ ಗ್ರಾಮವನ್ನು ವೀರಪ್ರತಾಪ ಸದಾಶಿವ ರಾಯನ ಕಾಲದಲ್ಲಿ ದತ್ತಿ ನೀಡಿದ ವಿಚಾರ ತಿಳಿಯುತ್ತದೆ.[೫೫] ಅಲ್ಲದೆ ಈತನು ರಾಯದುರ್ಗ ಸೀಮೆಯನ್ನು ಅಲ್ಲಿನ ಪಾಳೆಯಗಾರ ವಂಶಸ್ಥರಿಗೆ ಉಂಬಳಿಯಾಗಿ ನೀಡಿದರ ಬಗ್ಗೆ ಮಾಹಿತಿ ದೊರೆಯುತ್ತದೆ. ಈ ಮೇಲಿನ ಹಲವಾರು ಆಧಾರಗಳ ಹಿನ್ನೆಲೆಯಲ್ಲಿ ಮೊಳಕಾಲ್ಮೂರು ಪ್ರದೇಶ ವಿಜಯನಗರದ ಅಧೀನಕ್ಕೆ ಒಳಪಟ್ಟಿತ್ತೆಂದು ತಿಳಿಯಬಹುದು.

## ಪಾಳೆಯಗಾರರು

ವಿಜಯ ನಗರ ಸಾಮ್ರಾಜ್ಯದ ಅವನತಿಯ ನಂತರ ಕರ್ನಾಟಕದಲ್ಲಿ ಅಮರನಾಯಕರೆಂದು ಕರೆಯಲಾಗುತ್ತಿದ್ದ ಹಾಗೂ ಅವರ ಸಾಮಂತರಾಗಿದ್ದ ಪಾಳೆಯಗಾರರು ಪ್ರಬಲರಾದರು.

ಕ್ರಿ.ಶ.೧೫೬೫ರಲ್ಲಿ ನಡೆದ ತಾಳಿಕೋಟೆ ಕದನದಲ್ಲಿ ವಿಜಯನಗರ ಸಾಮ್ರಾಜ್ಯದ ಪರವಾಗಿ ಹೋರಾಡಿದ ೭೨ ಪಾಳೆಯಪಟ್ಟುಗಳಲ್ಲಿ ಮೊಳಕಾಲ್ಮೂರು ಪಾಳೆಯಪಟ್ಟು ಒಂದಾಗಿತ್ತು. ನಂತರ ರಾಯದುರ್ಗ, ನಾಯಕನಹಟ್ಟಿ, ಚಿತ್ರದುರ್ಗ, ಎಂಬ ಸ್ಥಳೀಯ ಪಾಳೆಯಗಾರರ ಅಧೀನಕ್ಕೆ ಒಳಗಾಯಿತು. ಶಾಸನಗಳ ಪ್ರಕಾರವಾಗಿ ಮೊಳಕಾಲ್ಮೂರು ಪ್ರದೇಶ ರಾಯದುರ್ಗ, ಹರತಿ, ಮತ್ತು ಬೇಲೂರು ಪಾಳೆಯಗಾರರು ವಶದಲ್ಲಿತ್ತು.[೫೬] ಹರತಿ ಪಾಳೆಯಗಾರನಾದ ತಿಪ್ಪಳನಾಯಕನ ಕಾಲದಲ್ಲಿ ಆತನ ರಾಜ್ಯ ಪಾವಗಡದಿಂದ ಚಿತ್ರದುರ್ಗದವರೆಗೆ, ಹಾಗೂ ಮೊಳಕಾಲ್ಮೂರುನಿಂದ ಶಿರಾದ ವರೆಗೆ ವಿಸ್ತರಿಸಿತ್ತು. ವಿಜಯನಗರದ ವೀರ ಪ್ರತಾಪ ಸದಾಶೀವನ ಕಾಲದಲ್ಲಿ ಮೊಳಕಾಲ್ಮೂರು ರಾಯದುರ್ಗದ ಸೀಮೆಯಲ್ಲಿತ್ತು. ನಂತರ ಈ ರಾಯದುರ್ಗ ಸೀಮೆ ಉಂಬಳಿಯಾಗಿ ರಾಯದುರ್ಗದ ಪಾಳೆಯಗಾರರ ವಶವಾಯಿತು. ರಾಯದುರ್ಗದ ಅಧಿಕಾರಿಯಾಗಿ ವಿಜಯನಗರ ಅರಸರಿಂದ ನೇಮಿಸಲ್ಪಟ್ಟ ಬೆಪ್ಪ ಬೊಮ್ಮನಾಯಕ/ಯರ್ರಿ ಬೊಮ್ಮನಾಯಕನ ಆಧಿನಕ್ಕೊಳಪಟ್ಟಿತ್ತು. ನಂತರ ಹಟ್ಟಿ ಪಾಳೆಯಗಾರರೆಂದು ಹೆಸರಾದ ನಾಯಕನ ಹಟ್ಟಿಯ ಪಾಳೆಯಗಾರನಾದ, ಬೂದಿಮಲ್ಲಪ್ಪನಾಯಕ/ಕಸ್ತೂರಿ ಮಲ್ಲಪ್ಪನಾಯಕನು (ಕಸ್ತೂರಿ ಮಲ್ಲಪ್ಪ ನಾಯಕ ಎಂದು ಹೆಸರು ಬರಲು ಕಾರಣ ಇತನ ತಾಯಿಯಾದ ಲಕ್ಷ್ಮವ್ವ ನಾಗತಿಯು ಚಿತ್ರದುರ್ಗದ ಪಾಳೆಯಗಾರರ ಮನೆತನದ ಹೆಣ್ಣು ಮಗಳಾಗಿದ್ದರಿಂದ ಇತನು ಚಿತ್ರದುರ್ಗದ ಪಾಳೆಯಗಾರರಂತೆ ತನ್ನನ್ನು ತಾನು 'ಕಸ್ತೂರಿ' ಎನ್ನುವ ಅಭಿದಾನ/ಬಿರುದಿನಿಂದ ಕರೆದುಕೊಳ್ಳುತ್ತಿದ್ದರಿಂದ) ರಾಯದುರ್ಗದ ಯರ್ರಿಬೊಮ್ಮಳ ನಾಯಕನಿಗೆ ತನ್ನಲ್ಲಿದ್ದ ೨೦೦೦ ಕೆಂಪು ಹಸು, ೧೦೦೦ ಬಿಳಿ ಹಸುಗಳನ್ನು ಕೊಟ್ಟು ಮೊಳಕಾಲ್ಮೂರು ಬೆಟ್ಟವನ್ನು ಪಡೆದುಕೊಂಡನು. ಮತ್ತೊಂದು ಮೂಲದ ಪ್ರಕಾರ ರಾಯದುರ್ಗದ ಯರ್ರಿಬೊಮ್ಮಳ ನಾಯಕನು ತನ್ನ ಮಗಳಾದ ಬೊಮ್ಮವ್ವ ನಾಗತಿಯಳನ್ನು ಬೂದಿ ಮಲ್ಲಪ್ಪನಾಯಕನಿಗೆ ಕೊಟ್ಟಿದ್ದು, ಈ ಸಂಬಂಧದ ಕುರುಹಾಗಿ ಯರ್ರಿಬೊಮ್ಮಳ ನಾಯಕನಹಟ್ಟಿಯವರಿಂದ ೨೦೦ ಕುರಿ ೭೦೦ ಹಸುಗಳನ್ನು ಪಡೆದು ಮೊಳಕಾಲ್ಮೂರು ಸೀಮೆಯನ್ನು ಬಿಟ್ಟುಕೊಡುತ್ತಾನೆ.[೫೭] ಹೀಗೆ ರಾಯದುರ್ಗದ ಪಾಳೆಯಗಾರರಿಂದ ಮೊಳಕಾಲ್ಮೂರು ಬೆಟ್ಟ ಪ್ರದೇಶವನ್ನು ಪಡೆದ ಹಟ್ಟಿಯ ಬೂದಿಮಲ್ಲಪ್ಪ ನಾಯಕನು ತನ್ನ ರಾಸುಗಳಿಗೆ ನೀರು, ಐಗೈರಿಗೆ ಅನುಕೂಲವಾಗುವುದನ್ನು ಮನಗಂಡು ಇಲ್ಲಿನ ಬೆಟ್ಟದ ಮೇಲೆ ಕೋಟೆ ಕೊತ್ತಲಗಳನ್ನು ಕಟ್ಟಿಕೊಂಡು ನೆಲೆಸಿದನು. ಅಷ್ಟೆ ಅಲ್ಲದೇ ತನ್ನ ತಾಯಿಯಾದ ಲಕ್ಷ್ಮವ್ವ ನಾಗತಿಯ ಹೆಸರಿನಲ್ಲಿ ಕೋಟೆಯೊಳಗೆ ಕ್ರಿ.ಶ. ಸು.೧೬೭೦ರಲ್ಲಿ ವಿಶಾಲವಾದ ಕೆರೆಯೊಂದನ್ನು ನಿರ್ಮಿಸಿ, ಮೊಳಕಾಲ್ಮೂರು ಬೆಟ್ಟದ ಬಸವನ ಬಾಗಿಲಬಳಿ ಶಾಸನವೊಂದನ್ನು ಕೆತ್ತಿಸಿದನು.[೫೮] ನಾಯಕನಹಟ್ಟಿಯ ತಿಪ್ಪೇಸ್ವಾಮಿ ನಾಯಕನಹಟ್ಟಿಯಲ್ಲಿ ಹೋಗಿ ನೆಲೆಸುವ ಪೂರ್ವದಲ್ಲಿ ರಾಯದುರ್ಗ, ಮೊಳಕಾಲ್ಮೂರು, ಮತ್ತು ಕೋನಸಾಗರದ ಭಾಗದಲ್ಲಿದ್ದನು. ಈತನು ತಾಲೂಕಿನ ಕೋನಸಾಗರದಲ್ಲಿ ತಂಗಿದ್ದರಿಂದ ಆ ಸ್ಥಳ "ಬಿಳಿನೀರು ಚಿಲುಮೆ"

ಎಂಬ ಪುಣ್ಯಕ್ಷೇತ್ರವಾಗಿ ಬೆಳೆದು ಬಂದಿದೆ. ನಾಯಕನ ಹಟ್ಟಿಯ ಪಾಳೆಯಗಾರರ ನಂತರ ಮೊಳಕಾಲ್ಮೂರು ಪ್ರದೇಶ ಚಿತ್ರದುರ್ಗದ ಪಾಳೆಯಗಾರರ ವಶವಾಯಿತು. ಅಂದರೆ ಚಿತ್ರದುರ್ಗದ ಪಾಳೆಯಗಾರನಾದ ಬಿಚ್ಚುಗತ್ತಿ ಭರಮಣ್ಣನಾಯಕನು ರಾಯದುರ್ಗದ ವೆಂಕಟಪತಿ ನಾಯಕನ ಹುಟ್ಟಡಗಿಸುವ ನೆಪ ಮಾಡಿಕೊಂಡು, ಮೊಳಕಾಲ್ಮೂರು ಗಡಿ ಸೀಮೆಯ ವರೆಗೆ ತಮ್ಮ ಅಧಿಪತ್ಯವನ್ನು ನೆಲೆಗೊಳಿಸುವ ಉದ್ದೇಶದಿಂದ ಕ್ರಿ.ಶ. ೧೬೭೯ರಲ್ಲಿ ನಾಯಕನಹಟ್ಟಿ ಪಾಳೆಯಗಾರರಿಗೆ ಸೇರಿದ್ದ ಈ ಪ್ರದೇಶವನ್ನು ಅಕ್ರಮಿಸಿಕೊಂಡನು.[೫೯] ಹೀಗೆ ಮೊಳಕಾಲ್ಮೂರು ಚಿತ್ರದುರ್ಗದ ಕೊನೆಯ ಅರಸನಾದ ಹಿರೇ ಮದಕರಿನಾಯಕನ ಕಾಲದವರೆಗೆ ಚಿತ್ರದುರ್ಗದ ಪಾಳೆಯಗಾರರ ಆಳ್ವಿಕೆಗೆ ಒಳಪಟ್ಟಿತು. ನಂತರ ಹೈದರ್ ಮತ್ತು ಟಿಪ್ಪುವಿನ ವಶವಾಯಿತು.

## ಹೈದರಾಲಿ ಮತ್ತು ಟಿಪ್ಪುಸುಲ್ತಾನ್

ಚಿತ್ರದುರ್ಗದ ಪಾಳೆಯಗಾರರ ಅವನತಿಯ ನಂತರ ಮೊಳಕಾಲ್ಮೂರು ಪ್ರದೇಶವು ಮೈಸೂರಿನ ಪ್ರಬಲ ಸರ್ವಾಧಿಕಾರಿಗಳಾದ ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ವಶವಾಯಿತು. ಟಿಪ್ಪು ಸುಲ್ತಾನನು ಶ್ರೀರಂಗಪಟ್ಟಣದ ಕೋಟೆಯಲ್ಲಿ ಬಂದಿಸಿದ್ದ ೧೨ಜನ ಯುರೋಪಿಯನ್ನರಿಂದ ಕೂಡಿದ್ದ ಚೇಲಾಪಡೆಯಲ್ಲಿನ ೪ ಜನರು ತಪ್ಪಿಸಿಕೊಂಡಿದ್ದರ ಪರಿಣಾಮವಾಗಿ ಉಳಿದಂತಹ ೮ಜನ ಯುರೋಪಿಯನ್ನರನ್ನು ಕ್ರೂರ ಶಿಕ್ಷೆಗೆ ಒಳಪಡಿಸಿ ಅವರನ್ನು ಅಲ್ಲಿಂದ ಮೊಳಕಾಲ್ಮೂರು ಕೋಟೆಯೊಳಗೆ ತಂದು ಬಂಧಿಸಿಡಲಾಯಿತು.[೬೦] ಈ ಕೋಟೆಯೊಳಗೆ ಸು.೬ತಿಂಗಳ ಕಾಲ ಇದ್ದ ಯುರೋಪಿಯನ್ ಖೈದಿಗಳಿಗೆ ದಿನಕ್ಕೊಂದು ಸೇರು ರಾಗಿಯನ್ನು ಕೊಡುತ್ತಿದ್ದರಂತೆ. ನಂತರ ಅವರನ್ನು ಇಲ್ಲಿಂದ ಪುನಃ ಶ್ರೀರಂಗಪಟ್ಟಣದ ಕೋಟೆಗೆ ರವಾನಿಸಲಾಯಿತೆಂದು ಜೇಮ್ಸ್ ಬ್ರಿಸ್ಟೊವ್ ತನ್ನ ಆತ್ಮಚರಿತ್ರೆಯಲ್ಲಿ ಹೇಳಿಕೊಂಡಿದ್ದಾನೆ.

## ಮೈಸೂರಿನ ಒಡೆಯರು-ಬ್ರಿಟೀಷರು

ಕ್ರಿ.ಶ.೧೭೯೯ ರಲ್ಲಿ ಟಿಪ್ಪು ಸುಲ್ತಾನ್ ಮರಣ ಹೊಂದಿದ ನಂತರ ವಿಶಾಲವಾದ ಇಡೀ ಮೈಸೂರು ರಾಜ್ಯ ನಾಲ್ಕುಭಾಗಗಳಾಗಿ ಹರಿದು ಹಂಚಿ ಹೋಯಿತು ಆಗ ಮೈಸೂರು ರಾಜ್ಯದ ಭಾಗದಲ್ಲಿಯೇ ಮೊಳಕಾಲ್ಮೂರು ಉಳಿದ ಒಡೆಯರ ಆಳ್ವಿಕೆಗೊಳಪಟ್ಟಿತು. ಮುಮ್ಮಡಿಕೃಷ್ಣರಾಜ ಒಡೆಯರು ತಮ್ಮ ಆಡಳಿತ ಕಾಲಾವಧಿಯಲ್ಲಿ ಮೊಳಕಾಲ್ಮೂರು ಪಟ್ಟಣದಲ್ಲಿದ್ದ ವೆಂಕಪ್ಪ ಎಂಬ ಬಡ ಸಾರ್ಥ ಬ್ರಹ್ಮಣನಿಗೆ ಪಟ್ಟಣದ ಸಮೀಪದಲ್ಲಿರುವ 'ಮರ್ಲಹಳ್ಳಿ'[೬೧] ಎಂಬ ಗ್ರಾಮವನ್ನು ಆತನ ಜೀವನ ನಿರ್ವಹಣೆಗೆ ಜೋಡಿಯನ್ನಾಗಿ ನೀಡಿ ಇದಕ್ಕೆ ಸಂಬಂಧಿಸಿದಂತೆ ಜಿಲ್ಲಾಧಿಕಾರಿಗಳ ಮೂಲಕ ಸನ್ನದನ್ನು ಹೊರಡಿಸಿದರು. ಅಷ್ಟೆ ಅಲ್ಲದೆ ಇವರ ಕಾಲದಲ್ಲಿ ಸ್ಥಾಪಿಸಿದ್ದ ಪೌಜುದಾರಿ ಘಟಕಗಳಲ್ಲಿ ಮೊಳಕಾಲ್ಮೂರು ಸಹ ಒಂದಾಗಿತ್ತು.[೬೨] ೧೮೩೦-೩೧ರಲ್ಲಾದ ನಗರದಂಗೆಯ ಪರಿಣಾಮವಾಗಿ ಮೈಸೂರು ರಾಜ್ಯದೊಂದಿಗೆ ಮೊಳಕಾಲ್ಮೂರು ಪ್ರದೇಶವೂ ಸಹ ಬ್ರಿಟೀಷರ

ಅಧೀನಕ್ಕೊಳಪಟ್ಟಿತು. ಇದಕ್ಕೆ ಪೂರಕವಾಗಿ ಮೊಳಕಾಲ್ಮೂರಿನಲ್ಲಿ ಆಳ್ವಿಕೆ ನಡೆಸಿದ ಪಾಳೆಯಗಾರರ ಬಗ್ಗೆ ದಾಖಲೆಗೊಂಡಿರುವ ಬ್ರಟೀಷ್ ವರದಿಗಳು ಸಾಕ್ಷಿಯಾಗಿವೆ. ದಿವಾನ್ ಪೂರ್ಣಯ್ಯನವರ ಕಾಲದಿಂದ ಮಾರ್ಕ ಕಬ್ಬನ್ ಕಮೀಷನರ್ ಆಗುವವರೆಗೆ (೧೭೯೯ ರಿಂದ ೧೮೩೪ ಜನವರಿ ತಿಂಗಳವರೆಗೆ) ಮೈಸೂರು ಸರ್ಕಾರದಿಂದ ಗೌರವ ವೇತನ ಪಡೆಯುತ್ತಿದ್ದ ಚಿತ್ರದುರ್ಗ, ಗುಡೇಕೋಟೆ, ರಾಯದುರ್ಗ, ಬೆಳಗುತ್ತಿ, ತರೀಕೆರೆ, ಆನೇಕಲ್ಲು, ಆನೆಗೊಂದಿ, ಐಗೂರು, ಚಿಕ್ಕಬಳ್ಳಪುರ, ಮೊಳಕಾಲ್ಮೂರು ಎಂಬ ಮುಂತಾದ ೧೫ ಪಾಳೆಯಗಾರರ ಮನೆತನಗಳಲ್ಲಿ ಮೊಳಕಾಲ್ಮೂರು ಒಂದಾಗಿತ್ತು. ಅನಂತರ ೧೮೬೨ರಲ್ಲಿ ಮೈಸೂರಿನ ಕಮೀಷನರ್‌ನಾಗಿ ಅಧಿಕಾರ ಸ್ವೀಕರಿಸಿದ ಎಲ್.ಬಿ.ಬೌರಿಂಗ್‌ರವರು ಈ ಮೊದಲು ಪಾಳೆಯಗಾರರು ಪಡೆಯುತ್ತಿದ್ದ ಗೌರವ ವೇತನವನ್ನು ೧೮೬೫ರಲ್ಲಿ ಶೇ.೨೫% ರಷ್ಟು ಹೆಚ್ಚಿಸಿದನು. ಇದರ ಲಾಭ ಪಡೆದ ಚಿತ್ರದುರ್ಗ, ಮಂಜರಾಬಾದ್, ದೇವನಹಳ್ಳಿ, ಮೊಳಕಾಲ್ಮೂರು, ತರೀಕೇರೆ, ಆನೆಕಲ್ಲು, ಗುಡಿಕೋಟಿ, ರಾಯದುರ್ಗ,ಬೆಳಗುತ್ತಿ, ಚಿಕ್ಕಬಳ್ಳಾಪುರ ಎಂಬ ಕೇವಲ ೧೬ ಪಾಳೆಯಗಾರರ ಮನೆತನದ ಒಟ್ಟು ೫೭ ಮಂದಿಯಲ್ಲಿ ಮೊಳಕಾಲ್ಮೂರುವಿನ ಪಾಳೆಯಗಾರರು ಒಬ್ಬರಾಗಿದ್ದಾರೆ.[೬೩] ಮೈಸೂರು ಸಂಸ್ಥಾನದಲ್ಲಿ ೧೮೭೬ರಲ್ಲಿ ಪಾಳೆಯಗಾರರ ಮನೆತನಗಳ ಬಗ್ಗೆ ಸಿದ್ದಪಡಿಸಿದ ವರದಿಯಲ್ಲಿ ಮೊಳಕಾಲ್ಮೂರು ಒಂದಾಗಿತ್ತು. ಮೊಳಕಾಲ್ಮೂರು ಪಾಳೆಯಗಾರರ ರಾಜಮನೆತನಕ್ಕೆ ಸೇರಿದ್ದ ಕಾಟಪ್ಪನಾಯಕ ಮತ್ತು ಭರಮಪ್ಪನಾಯಕರಿಗೆ ಅವರ ಮಲತಾಯಿ ರಂಗಮ್ಮ ನಾಗತಿಯ ಮರಣ ಹೊಂದಿದ ನಂತರ ಸರ್ಕಾರ ಪಿಂಚಣಿಯನ್ನು ಕೊಡುತ್ತದೆ. ಮೊಳಕಾಲ್ಮೂರು ಪಾಳೆಯಗಾರರ ಕುಟುಂಬದ ಕೇಶವನಾಯಕ ಮತ್ತು ಭರಮಪ್ಪನಾಯಕರಿಗೆ ಕ್ರಿ.ಶ. ೧೯೧೦ರಲ್ಲಿ ವಿಭಾಗೀಯ ಪಿಂಚಣಿಯನ್ನಾಗಿ ೮೪.೬೦ರೂಗಳನ್ನು ನೀಡುತ್ತಾರೆ. ೧೯೧೪ರಲ್ಲಿ ಮೈಸೂರು ಸಂಸ್ಥಾನದ ಒಡೆಯರಾದ ನಾಲ್ವಡಿ ಕೃಷ್ಣರಾಜ ಒಡೆಯರು ಮೊಳಕಾಲ್ಮೂರಿಗೆ ಬಂದು ಈಗಾಗಲೇ ಇಲ್ಲಿದ್ದಂತಹ ಕೆರೆಯ ಸಮೀಪದಲ್ಲಿ ನಲ್ಲಿಯೊಂದನ್ನು ಹಾಕಿಸುವುದರ ಮೂಲಕ ಮೊಳಕಾಲ್ಮೂರು ಪಟ್ಟಣದ ಜನತೆಗೆ ಕುಡಿಯಲು ಯೋಗ್ಯವಾದ ನೀರಿನ ಸರಬರಾಜನ್ನು ಒದಗಿಸಿದರು. ಕೆರೆಯ ಸಮೀಪದಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರು ನಲ್ಲಿಯನ್ನೆ ಹಾಕಿಸಿದರಿಂದ ಆ ಕೆರೆಯು ಅಂದಿನಿಂದ ಜನರ ಬಾಯಲ್ಲಿ ನಲ್ಲಿಕೆರೆ[೬೪] ಎಂದು ಹೆಸರಾಯಿತು ಮೊಳಕಾಲ್ಮೂರು ಪಾಳೆಯಗಾರರ ಮನೆತನಕ್ಕೆ ಹತ್ತಿರವಾದವರಾದ ರಾಯದುರ್ಗದ ಪಾಳೆಯಗಾರರಿಗೆ ೧೯೧೫-೧೬ರಲ್ಲಿ ಮಾಶಾಸನ/ಪಿಂಚಣಿಯನ್ನು ನೀಡುವುದರ ಜೊತೆಗೆ ೧೯೨೦ರಲ್ಲಿ ರಾಯದುರ್ಗದ ಪಾಳೆಯಗಾರರ ಮನೆತನದ ಶ್ರೀಮತಿ ವೆಂಕಟಕೃಷ್ಣಮ್ಮನವರು ಮರಣ ಹೊಂದಿದಾಗಿ ಅವರ ಹತ್ತಿರದ ಸಂಬಂಧಿಯಾದ ಪಿ.ಎನ್.ದಿವಾಕರ ನಾಯಕರಿಗೆ ೧೯-೧೫.೯ರಂತೆ ಮಾಸಾಶನವನ್ನು ಕೊಡುವಂತೆ ಆದೇಶಿಸಿದರು. ಅಷ್ಟೆ ಅಲ್ಲದೇ ಮೊಳಕಾಲ್ಮೂರು ಪಾಳೆಯಗಾರರ ಕುಟುಂಬದ ಭರಮಪ್ಪನಾಯಕರು ನಿಧನರಾದಾಗ ಅವರ ಶವಸಂಸ್ಕಾರಕ್ಕಾಗಿ ೩೪೪ ರೂಗಳನ್ನು ೧೯೩೦

ರಲ್ಲಿ ಕೊಡುತ್ತಾರೆ. ಇಂದಿಗೂ ಮೊಳಕಾಲ್ಮೂರು ತಾಲೂಕಿನ ಬೊಮ್ಮಲಿಂಗನಹಳ್ಳಿ ಯರ್ಜೆನಹಳ್ಳಿ, ಮೊಳಕಾಲ್ಮೂರು ಎಂಬ ಮೊದಲಾದ ಸ್ಥಳಗಳಲ್ಲಿ ಈ ಮನೆತನಕ್ಕೆ ಸೇರಿದ ವಾರಸುದಾರರು ನೆಲೆಸಿದ್ದಾರೆ.[೬೫] ಇವರುಗಳ ಬಳಿಯಲ್ಲಿ ಪಾಳೆಯಗಾರಿಕೆಯ ಬಗ್ಗೆ ಹಲವಾರು ಸಣ್ಣಪುಟ್ಟ ಕಾಗದ ಪತ್ರಗಳಿರುವುದನ್ನು ನಾವು ಇಂದಿಗೂ ಕಾಣಬಹುದಾಗಿದೆ.

## ಸ್ವಾತಂತ್ರ್ಯ ಸಂಗ್ರಾಮ

ಭಾರತದ ರಾಷ್ಟ್ರೀಯ ಕಾಂಗ್ರೇಸ್‌ನ ಸ್ಥಾಪನೆಯ ಮರುವರ್ಷವೇ ಅಂದರೆ ೧೮೮೬ರಲ್ಲಿ ರಚಿತಗೊಂಡ ಚಿತ್ರದುರ್ಗ ಜಿಲ್ಲೆಯ ಅಸ್ತಿತ್ವದೊಳಗೆ ಸೇರಿದ ಮೊಳಕಾಲ್ಮೂರು ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಮಹತ್ವದ ಪಾತ್ರವಹಿಸಿದೆ. ಮೊಳಕಾಲ್ಮೂರು ತಾಲೂಕಿನಲ್ಲಿ ಅನ್ನದಾನಿ ಆರ್. ವೀರಭದ್ರಪ್ಪ ಗುರ್ರಂ ನರಸಿಂಹಯ್ಯ, ಎನ್.ಸಿ. ಐಯ್ಯಣ್ಣ ಕೆರೆಕೊಂಡಾಪುರದ ಎಸ್.ಹೆಚ್. ಬಸವಣ್ಣ, ಡಾ.ಜಿ.ಎಸ್.ಚಂದ್ರಶೇಖರ್. ಡಾ.ರಾಮಕೃಷ್ಣಯ್ಯ, ಜಿ.ಈಶ್ವರಪ್ಪ, ಕೆಂಚಲಿಂಗಪ್ಪ, ಹೆಚ್.ಶರಣಪ್ಪ.ಕೆ. ಬಹದ್ದೂರ್ ಖಾನ್, ಹೆಚ್ ಗಂಗಣ್ಣ, ವಿ.ಎನ್.ಜಯರ್ಣಾಣ,ಕೆ.ಸತ್ಯಪ್ಪ, ಪಾಲಮ್ಮ, ಶ್ರೀಮತಿ ಬೋರಮ್ಮ, ಹನುಮಕ್ಕ, ಬಿ.ಟಿ.ತಿಪ್ಪೇರುದ್ರಪ್ಪ, ಎಂಬ ಮೊದಲಾದವರು ಸ್ವತಂತ್ರ್ಯಕ್ಕಾಗಿ ಇಡೀ ತಮ್ಮ ಜೀವನವನ್ನೇ ತ್ಯಾಗ ಮಾಡಿದ ತಾಲೂಕಿನ ಮಹಾನಿಯರಾಗಿದ್ದಾರೆ. ಇಲ್ಲಿನ ಸ್ವಾತಂತ್ರ್ಯ ಚಳುವಳಿಯ ನೇತೃತ್ವ ವಹಿಸಿಕೊಂಡು, ಮುಂಚೂಣಿಯಲ್ಲಿದ್ದ ನಾಯಕರೆಂದರೆ ಮೊಳಕಾಲ್ಮೂರಿನ ಅನ್ನದಾನಿ ಆರ್.ವೀರಭದ್ರಪ್ಪ, ಇವರು ನೆಹರು, ಪಾಟೇಲ್, ಗಾಂಧೀಜಿಯವರ ಚಿಂತನೆಗಳಿಂದ ಪ್ರಭಾವಿತರಾಗಿ ಪ್ರೌಢಶಾಲೆಯಲ್ಲಿ ವ್ಯಾಸಂಗ ಮಾಡುತ್ತಿರುವಾಗಲೇ ಸ್ವತಂತ್ರ್ಯ ಚಳುವಳಿಗೆ ಧುಮುಕಿದರು. ಅಪ್ಪಟ ಗಾಂಧಿ ತತ್ವ ಆದರ್ಶಗಳಿಗೆ ಪ್ರೇರಿತರಾಗಿದ್ದ ಇವರು ಗಾಂಧೀಜಿಯವರು ೧೯೪೨ರಲ್ಲಿ ನೀಡಿದ "ಬ್ರಿಟೀಷರೇ ಭಾರತ ಬಿಟ್ಟು ತೊಲಗಿ" ಎಂಬ ಕರೆಯಂತೆ ೧೯೪೨ ಆಗಸ್ಟ್ ೨೬ರಂದು ಚಿತ್ರದುರ್ಗದ ನೀಲಕಂಟೇಶ್ವರ ದೇವಾಲಯದಲ್ಲಿ ನಡೆದ ಬಹಿರಂಗ ಸಭೆಯಲ್ಲಿ ಭಾಗವಹಿಸುವುದರ ಜೊತೆಗೆ ದುರ್ಗದ ಜನತೆಯನ್ನು ಉದ್ದೇಶಿಸಿ ಭಾಷಣ ಮಾಡಿದರು. ಒಂದು ಕಡೆ ಈತನ ಕ್ರಾಂತಿಕಾರಕ ಭಾಷಣದಿಂದ ದುರ್ಗದ ಜನತೆ ಪ್ರೇರಿತರಾದರೆ ಮತ್ತೊಂದು ಕಡೆ ಪೋಲೀಸರ ಕೆಂಗೆಣ್ಣಿಗೆ ಗುರಿಯಾದನು. ಇದರಿಂದ ಹೈಸ್ಕೂಲ್ ಶಿಕ್ಷಣಕ್ಕೆ ತಿಲಾಂಜಲಿಯನ್ನಿಟ್ಟು ಚಿತ್ರದುರ್ಗದಿಂದ ತನ್ನ ಸ್ವಂತ ಊರಾದ ಮೊಳಕಾಲ್ಮೂರುವಿಗೆ ಬಂದು ಬ್ರಿಟೀಷ್ ವಿರೋಧಿ ಚಳುವಳಿಯನ್ನು ಆರಂಭಿಸಿ ಹಲವಾರು ಶಿಬಿರಗಳನ್ನು ನಿರ್ಮಿಸಿದರು. ೧೯೪೬ರಲ್ಲಿ ಮೊಳಕಾಲ್ಮೂರುನಲ್ಲಿ ಯಾವುದೇ ರೀತಿಯಲ್ಲಿ ಹಿಂಸೆಯಲ್ಲಿ ತೊಡಗದೇ ಬ್ರಿಟಿಷರ ವಿರುದ್ಧ ಅಹಿಂಸಾತ್ಮಕ ಹೊರಾಟ ನಡೆಸುವುದಾಗೆಂದು ತಹಶೀಲ್ದಾರರಲ್ಲಿ ಮಾನವಿ ಮಾಡಿಕೊಂಡು ಪ್ರತಿನಿತ್ಯ ಸಭೆ ಸಮಾರಂಭಗಳನ್ನು ನಡೆಸುವುದರ ಮೂಲಕ ತಾಲೂಕಿನ ಜನತೆಯಲ್ಲಿ ಹೋರಾಟದ ಸ್ಫೂರ್ತಿಯನ್ನು ತುಂಬಿದರು. ಅಲ್ಲದೇ ಆಹಾರ ಚಳವಳಿ, ಅರಣ್ಯ ಸತ್ಯಾಗ್ರಹ, ಕರನಿರಾಕರಣೆ, ಪಾನನಿಷೇಧ ಎಂಬ ಹೋರಾಟಗಳನ್ನು

ಸ್ವಾತಂತ್ರ್ಯದ ಫರವಾಗಿ, ಬ್ರಿಟಿಷ ಆಡಳಿತ ನೀತಿಯ ವಿರುದ್ಧ ಶಾಂತಿಯುತವಾಗಿ ನಡೆಸಿದರು. ೧೯೪೬ರಲ್ಲಿ ತಾಲೂಕು ಪುರಸಭೆಯ ಸದಸ್ಯರಾಗುವುದರ ಮೂಲಕ ಜನಸೇವೆಯಲ್ಲಿಯೂ ತಮ್ಮನ್ನು ತೊಡಗಿಸಿಕೊಂಡರು. ಮೈಸೂರು ರಾಜ್ಯದಲ್ಲಿ ಜವಾಬ್ದಾರಿ ಸರ್ಕಾರ ರಚನೆಯಾಗುವುದರ ಕುರಿತಾಗಿ ಹಾಗೂ ಸೆರೆ ಮನೆಯಲ್ಲಿರುವ ಸ್ವಾತಂತ್ರ್ಯ ಯೋಧರನ್ನು ಬಿಡುಗಡೆಗೊಳಸಬೇಕೆಂದು ಪುರಸಭೆಯ ಸದಸ್ಯರೊಡಗೂಡಿ ಮೈಸೂರಿನ ಜಯಚಾಮರಾಜ ಒಡೆಯರ್‌ಗೆ ಪತ್ರ ಒಂದನ್ನು ಕಳಿಸಿದರು.[೬೬] ಹೀಗೆ ಮೊಳಕಾಲ್ಮೂರು ಅತ್ಯಂತ ಹಿಂದುಳಿದ ಹಾಗೂ ಬರಡು ಪ್ರದೇಶವಾಗಿದ್ದರೂ ಸ್ವಾತಂತ್ರ್ಯ ಚಳುವಳಿಯಲ್ಲಿ ಅತ್ಯಮುಲ್ಯವಾದ ಪಾತ್ರವನ್ನು ವಹಿಸಿರುವುದು ಕಂಡುಬರುತ್ತದೆ.

ಸ್ವಾತಂತ್ರ್ಯ ದೊರೆತ ನಂತರ ಮೊಳಕಾಲ್ಮೂರು ಪ್ರದೇಶದಲ್ಲಿ ಚುನಾವಣೆಗಳು ನಡೆಯುತ್ತವೆ. ಇಲ್ಲಿ ನಡೆದ ಚುನಾವಣೆಯಲ್ಲಿಯೂ ಅನ್ನದಾನಿ ರಾಚೋಟಪ್ಪ ವೀರಭದ್ರಪ್ಪನವರು ಪರಿಶುದ್ದ ಮತ್ತು ಕ್ರಿಯಾಶೀಲ ರಾಜಕಾರಣಿಯಾಗಿ ಮೊಳಕಾಲ್ಮೂರಿನ ಪುರಸಭೆಯ ಚುನಾವಣೆಗೆ ಸು.೪ ಬಾರಿ ಆಯ್ಕೆಯಾಗಿ ಪುರಸಭೆಯ ಸದಸ್ಯರಾಗಿ, ಅಧ್ಯಕ್ಷರಾಗಿ (೧೯೫೬-೧೯೫೮) ಮೊಳಕಾಲ್ಮೂರುವಿನಲ್ಲಿ ಹಲವಾರು ಅಭಿವೃದ್ದಿಯ ಕಾರ್ಯಗಳನ್ನು ಕೈಗೊಂಡು ಮೊಳಕಾಲ್ಮೂರಿಗೆ ತಮ್ಮದೇ ಆದ ಕೊಡುಗೆ ನೀಡಿರುವುದು ಅವಿಸ್ಮರಣೀಯವಾದುದಾಗಿದೆ.

**ನಗರ ಅಥವಾ ಪಟ್ಟಣ ರಚನೆ**

ಕಲ್ಲು ಬಂಡೆಗಳ ಮೇಲೆ ನಿರ್ಮಾಣಗೊಂಡಿರುವ ಮೊಳಕಾಲ್ಮೂರು ಹಿಂದೆ ಒಂದು ಚಿಕ್ಕ ಗ್ರಾಮವಾಗಿತ್ತು ಇಲ್ಲಿನ ಗುಡ್ಡದ ಪಶ್ಚಿಮದ ತಪ್ಪಲಿನಲ್ಲಿ 'ನಗರ' ಎಂಬ ಹಳೆಯ ಜನವಸತಿಯ ತಾಣವಿದ್ದುದನ್ನು ನಾವು ಈಗಲೂ ಇಲ್ಲಿ ಕಾಣಬಹುದಾಗಿದೆ. ಇಲ್ಲಿನ ಎತ್ತರದ ದಿಬ್ಬದ ಮೇಲೆ ಶಿಲಾಯುಗದ ಮಾನವ ಬಳಸಿದ ಶಿಲಾಯುಧಗಳು ದೊರೆತಿವೆ. ಅಲ್ಲಿಂದ ಬೆಟ್ಟದ ಮೇಲಕ್ಕೆಹೋಗಲು ಸುವ್ಯವಸ್ಥಿತವಾದ ಮೆಟ್ಟಿಲುಗಳಿದ್ದು ನಗರದ ಜನ ಮೇಲೆ ಇರುವ ಮೇಲುದುರ್ಗಕ್ಕೆ ಹೋಗಿಬರುವ ಪರಿಪಾಠ ವಿಟ್ಟುಕೊಂಡಿದ್ದರೆಂದು ಹೇಳಬಹುದು. ಆರಂಭದಲ್ಲಿ ಮೊಳಕಾಲ್ಮೂರು ಒಂದು ಚಿಕ್ಕಗ್ರಾಮವಾಗಿತ್ತು.[೬೭] ತದನಂತರದ ದಿನಗಳಲ್ಲಿ ಮೊಳಕಾಲ್ಮೂರು ಪಟ್ಟಣವಾಗಿ ಬೆಳೆದು ೧೯೫೧ರಲ್ಲಿ ಪುರಸಭೆಯಾಯಿತು. ಆದರೆ ೧೯೬೧ ರಲ್ಲಿ ೪೮೫೩ರಷ್ಟು ಜನಸಂಖ್ಯೆಯನ್ನು ಹೊಂದುವುದರ ಮೂಲಕ ಪುರಸಭೆಯಾಗಿದ್ದ ಮೊಳಕಾಲ್ಮೂರು ಪಟ್ಟಣ ಪಂಚಾಯಿತಿಯಾಗಿ ಪರಿವರ್ತಿತಗೊಂಡಿತು.[೬೮] ಪ್ರಸ್ತುತದಲ್ಲಿ ಚಿತ್ರದುರ್ಗ ಜಿಲ್ಲೆಯ ತಾಲೂಕು ಕೇಂದ್ರವಾಗಿರುವ ಈ ಪಟ್ಟಣವು ೧೫ ವಾರ್ಡಗಳಿಂದ ಕೂಡಿದಂತಹ ಪಟ್ಟಣ ಪಂಚಾಯ್ತಿಯಾಗಿದೆ. ಸ್ವಾತಂತ್ರ ನಂತರ ಚುನಾವಣೆಗಳು ಆರಂಭಗೊಂಡಾಗ ಹೊ.ಚಿ.ಬೋರಯ್ಯ, ಎ.ಭೀಮಪ್ಪನಾಯಕ, ಎಸ್.ನಿಜಲಿಂಗಪ್ಪ, ಪಾಟೀಲ್ ಪಾಪನಾಯಕ್, ಪೂರ್ಣಮುತ್ತಪ್ಪ, ಎನ್.ವೈ.ಗೋಪಾಲ ಕೃಷ್ಣ ಎಂಬ ಮೊದಲಾದ ಗಣ್ಯರು ಈ ತಾಲೂಕಿನ ಶಾಸಕರುಗಳಾಗಿ ಜನಸೇವೆ ಮಾಡಿರುವುದು

ಗಮನಾರ್ಹವಾದುದಾಗಿದೆ. ಪ್ರಸ್ತುತದಲ್ಲಿ ಈ ತಾಲೂಕಿನ ಶಾಸಕರಾಗಿ ನೇರ್ಲಗುಂಟೆ ತಿಪ್ಪೇಸ್ವಾಮಿಯವರು ಸೇವೆಸಲ್ಲಿಸುತ್ತಿದ್ದಾರೆ.

### ೨.೩ ಸ್ಥಳನಾಮ

ಒಂದು ನಾಡಿನ ಸಮಗ್ರ ಇತಿಹಾಸವನ್ನು ರಚಿಸುವಲ್ಲಿ ಸ್ಥಳೀಯ ಚರಿತ್ರೆಯು ಮೂಲ ಸಾಮಾಗ್ರಿಯನ್ನು ಒದಗಿಸುತ್ತದೆ. ಪ್ರಾಣಿ ಪಕ್ಷಿಗಳಂತೆ ಬದುಕುತ್ತಿದ್ದ ಮಾನವನು ಒಂದು ಕಡೆ ನೆಲೆನಿಂತು ಬಾಳಲು ಪ್ರಾರಂಭಿಸಿದಾಗ, ಅವರ ವಸತಿಗೊಂದು ಗುರುತಿಗಾಗಿ ಹೆಸರಿಡುವ ಪರಿಪಾಠ ಆರಂಭವಾಯಿತು. ಅದರಂತೆಯೇ ವ್ಯಕ್ತಿ ವ್ಯಕ್ತಿಗಳನ್ನು ಗುರುತಿಸಲು ಸುಲಭವಾಗುವಂತೆ ಮನುಷ್ಯರಿಗೂ ಹೆಸರಿಡುವುದು ಆರಂಭವಾಯಿತು. ನಾಗರಿಕತೆಯ ಬೆಳವಣಿಗೆಯ ಜೊತೆಗೆ ಮನುಷ್ಯನ ಅಲೆಮಾರಿತನವೂ ಮುಗಿದು ಹಳ್ಳಿ, ಪುರ, ಪಟ್ಟಣ, ಹಟ್ಟಿ, ಪಾಳ್ಯ, ಗುಡಿ, ನಗರ ಮತ್ತು ನಾಡುಗಳ ನಿರ್ಮಾಣವಾದದ್ದು ಮನುಕುಲದ ಚರಿತ್ರೆಯಲ್ಲಿ ಒಂದು ಅದ್ಭುತ. ಸ್ಥಳನಾಮಗಳ ಹುಟ್ಟು ನಿನ್ನೆ ಮೊನ್ನೆಯದಲ್ಲ. ಅವು ಮಾನವನಷ್ಟೆ ಹಳೆಯವು ಹಾಗೂ ಪುರಾತನ ಜೀವನ ಸೃಷ್ಟಿಯ ಪಳೆಯುಳಿಕೆಗಳು.[೨೦] ಆದರೆ ಸ್ಥಳನಾಮಗಳ ಅಧ್ಯಯನವು ಇತ್ತೀಚಿನ ದಿನಗಳಲ್ಲಿ ಪ್ರಪಂಚದಾದ್ಯಂತ ಹೆಚ್ಚು ಜನರ ಕುತೂಹಲವನ್ನು ಕೆರಳಿಸಿ, ತನ್ನ ಕಡೆಗೆ ಆಕರ್ಷಿಸುವುದರ ಜೊತೆಗೆ ಮಾನವನ ಬದುಕಿನಲ್ಲಿ ಒಂದು ಅನಿವಾರ್ಯ ಪ್ರಕ್ರಿಯೆಯಾಗಿ ಬೆಳೆದು ಬಂದಿದೆ ಒಂದು ನಾಡಿನ ಚರಿತ್ರೆಯ ಅಧ್ಯಯನದ ಮೂಲ ಆಕರಗಳಲ್ಲಿ ಶಾಸನ, ಕಾವ್ಯ, ಪುರಾಣ, ಎಂಬ ಮೊದಲಾದ ಆಕರಗಳಂತೆ ಸ್ಥಳನಾಮಗಳು ಸಹ ವಿಶಿಷ್ಟ ಐತಿಹಾಸಿಕ ಆಕರಗಳಾಗಿ ಕಂಡುಬರುತ್ತವೆ. ಯಾವುದೇ ಒಂದು ಭೌಗೋಳಿಕ ಪ್ರದೇಶದ ಐತಿಹಾಸಿಕ ಅಂಶಗಳನ್ನು ತಿಳಿಯುವಾಗ ಶಾಸನಗಳಂತೆ, ಸ್ಥಳನಾಮಗಳು ಸಹ ತನ್ನ ಮಟ್ಟಿನ ಆಧಾರಗಳನ್ನು ನೀಡುತ್ತವೆ. ಚರಿತ್ರೆಯ ಚೌಕಟ್ಟಿನಲ್ಲಿ ಇದುವರೆಗೂ ಚರಿತ್ರೆಕಾರರ ಗಮನವನ್ನು ಸೆಳೆಯದ ಈ ಗ್ರಾಮನಾಮಗಳು, ಸ್ಥಳನಾಮಗಳ ಅಧ್ಯಯನದಿಂದ ಸ್ಥಳೀಯ ಚರಿತ್ರೆ ಮತ್ತು ಪುರಾತತ್ವೀಯ ಪರಿಸರವನ್ನು ಅರಿಯಬಹುದಾಗಿದೆ. ಈ ನಿಟ್ಟಿನಲ್ಲಿ ಅಧ್ಯಯನ ಪ್ರದೇಶವಾದ ಮೊಳಕಾಲ್ಮೂರುವಿನ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಪರಂಪರೆಯನ್ನು ಅರಿಯುವಲ್ಲಿ ಆ ನೆಲೆಯ ಸ್ಥಳನಾಮದ ಉತ್ಪತ್ತಿಯ ಕುರಿತಾಗಿ ತಿಳಿದುಕೊಳ್ಳುವುದು ಹೆಚ್ಚು ಸೂಕ್ತವೆನಿಸುತ್ತದೆ.

ಚರಿತ್ರೆಯ ಮೂಲ ದಾಖಲೆಗಳಾಗಿರುವ ಶಾಸನಗಳಲ್ಲಿ ಮೊಳಕಾಲ್ಮೂರುವಿನ ಸ್ಥಳನಾಮಕ್ಕೆ ಸಂಬಂಧಿಸಿದಂತೆ ಯಾವುದೇ ರೀತಿಯ ನಿಖರವಾದ ದಾಖಲೆಗಳು ಉಲ್ಲೇಖಗೊಂಡಿಲ್ಲ. ಆದರೆ ಇಲ್ಲಿನ ಸ್ಥಳಿಯರಲ್ಲಿ ಇದರ ಸ್ಥಳನಾಮಕ್ಕೆ ಸಂಬಂಧಿಸಿದಂತೆ ಹಲವಾರು ದಂತಕಥೆಗಳು, ಐತಿಹ್ಯಗಳು ಬೆಳೆದು ಇಂದಿಗೂ ಉಳಿದುಕೊಂಡು ಬಂದಿವೆ(ಅಧ್ಯಾಯದ ನಾಲ್ಕರಲ್ಲಿ ನೋಡಿ). ಈ ತಾಲೂಕಿನಲ್ಲಿ ದೊರೆತಂತಹ ಅಶೋಕನ ಶಿಲಾಶಾಸನಗಳು ಹಲವಾರು ಇತಿಹಾಸಕಾರರ

ಸಂಶೋಧಕರ ಗಮನವನ್ನು ತನ್ನೆಡೆಗೆ ಸೆಳೆದುದರ ಪರಿಣಾಮವಾಗಿ ಧೀರ್ಘವಾದಂತಹ ಅಧ್ಯಯನಗಳು ಸಾಗಿಬಂದು ಇಲ್ಲಿನ ಸ್ಥಳನಾಮದ ಕುರಿತಾಗಿ ತಮ್ಮದೇ ಆದಂತಹ ಅಭಿಪ್ರಾಯ ಗಳನ್ನು ವ್ಯಕ್ತಪಡಿಸಿರುತ್ತಾರೆ.

ಮೊಳಕಾಲ್ಮೂರು ಎಂಬ ಹೆಸರು ಮಾನವನ ದೇಹದ ಅಂಗಾಂಗಗಳಿಂದ ಬಂದಂತಹ ದ್ದಾಗಿದೆ ಎಂಬ ಅಭಿಪ್ರಾಯವಿದೆ.[೨೧] ಭಾಗಶಃ ಇದು ಇಲ್ಲಿನ ಐತಿಹ್ಯದ ಹಿನ್ನೆಲೆಯಲ್ಲಿ ಕಂಡುಕೊಂಡಿರಬಹುದೆನಿಸುತ್ತದೆ. ಹಾಗೆಯೇ 'ಮೊಳಕಾಲ್ಮುರುತ/ಕ' ಎಂಬ ಜಲ ಸಸ್ಯದಿಂದಲೂ ಬಂದಿರಬಹುದು.[೨೨] ಮೊಳಕಾಲ್ಮೂರುವಿನಿಂದ ಪೂರ್ವಕ್ಕಿರುವ ರಾಯದುರ್ಗದವರೆಗೆ ಗ್ರಾನೈಟ್ ಶಿಲೆಯ ಬೆಟ್ಟಗುಡ್ಡಗಳು ಹೆಚ್ಚಾಗಿರುವುದನ್ನು ಮನಗಂಡು ಈ ಗ್ರಾನೈಟ್ ಶಿಲೆಯ ಅಂದರೆ ಒಳಕಲ್ಲು ಅಥವಾ ಒಣಕಲ್ಲುಗಳಿಂದ ಕೂಡಿರುವ ಊರು ಒಳಕಲ್ಲುಊರು>ಒಣಕಲ್ಲು ಊರು ಎಂದಾಗಿ ಆ ನಂತರದಲ್ಲಿ ಮೊಳಕಾಲ್ಮೂರು ಎಂದು ಆಗಿರಬಹುದೆಂದು ಸಂಶೋಧಕ ಮೈಲಾರಪ್ಪನವರು ಅಭಿಪ್ರಾಯ ಪಟ್ಟಿದ್ದಾರೆ.[೨೩] ಸಂಶೋಧಕರಾದ ವಿರೂಪಾಕ್ಷಿ ಪೂಜಾರ ಹಳ್ಳಿಯವರು ಮೌರ್ಯ ವಂಶದ ಅಶೋಕನ ಮೊಮ್ಮಕ್ಕಳಾದ ಮುರ ಮತ್ತು ಕುಲ್ಹಾಣರಿಬ್ಬರಿಂದ ಈ ಗ್ರಾಮಕ್ಕೆ ಮುರುಕುಲ್ಹಾಣನೂರು> ಮುರುಕುಲನೂರು> ಮುಲಕಾಲ್ಮೂರು> ಮೊಳಕಾಲ್ಮೂರು ಎಂದಾಗಿರಬೇಕೆಂಬ ಇಲ್ಲಿನ ಸ್ಥಳನಾಮದ ಕುರಿತಾಗಿ ಒಂದು ಚಾರಿತ್ರಿಕವಾದ ವಿವರಣೆಯನ್ನು ನೀಡಿದ್ದಾರೆ.[೨೪] ಮೊಳಕಾಲ್ಮೂರು ರಾಯದುರ್ಗಕ್ಕೆ ಸೇರಿದ್ದು, ಮಲಿಕಪ್ಪನಾಯಕನು ರಾಯದುರ್ಗ ದಲ್ಲಿ ರಾಜ್ಯವಾಳುತ್ತಿದ್ದಾಗ ಮಲಕಪ್ಪನಾಯಕನ ಊರು ಮಲಕಪ್ಪನೂರು, ಮಲಕಾಲ್ಮರು ಎಂದಾಗಿರಬಹುದೆಂದು ಆರ್.ಎಸ್.ಹುಲಿಕುಂಟಮೂರ್ತಿಯವರು ಅಭಿಪ್ರಾಯಪಟ್ಟಿದ್ದಾರೆ.[೨೫] ಕ್ಷೇತ್ರಕಾರ್ಯದಲ್ಲಿ ಗಮನಿಸಿದಂತೆ ಇಲ್ಲಿನ ಬೆಟ್ಟದಲ್ಲಿ ಕಣಶಿಲೆ ಗ್ರಾನೈಟ್, ಬೆಣಚುಕಲ್ಲುಗಳಲ್ಲದೇ ಮರಳುಕಲ್ಲುಗಳು ಸಹ ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುವುದನ್ನು ಮನಗಂಡು, ಹೆಚ್ಚಾಗಿ ಮರಳುಕಲ್ಲುಗಳಿಂದ ಕೂಡಿರುವ ಊರು ಮರಳುಕಲ್ಲು ಊರು> ಮರಳುಕಲ್ಲೂರು > ಮರಳ್‌ಕಲ್ಲೂರು > ಮೊರಳ್‌ಕಲೂರು >ಮೊಳ್‌ಕಲೂರು> ಮೊಳಕಾಲ್ಮೂರು ಎಂದಾಗಿರಬಹುದು.

ಒಟ್ಟಾರೆಯಾಗಿ ಮೊಳಕಾಲ್ಮೂರುವಿನ ಸ್ಥಳನಾಮದ ಕುರಿತಾಗಿ ಈ ಮೇಲಿನ ವಿದ್ವಾಂಸರು, ಸಂಶೋಧನಾಕಾರರ ಅಭಿಪ್ರಾಯಗಳನ್ನು ಗಮನಿಸಿ ಹೇಳುವುದಾದರೇ ಮೊಳಕಾಲ್ಮೂರು ಎಂಬ ಹೆಸರು ನಿಸರ್ಗವಾಚಕವಾಗಿ ಇಲ್ಲಿರುವ ಕೂಗೋಬೆಟ್ಟ ಅಥವಾ ಮೊಳಗುವಕಲ್ಲಿಗಿರುವ ಐತಿಹ್ಯದಿಂದ ಬಂದಿರಬಹುದೆಂಬುದು ಹೆಚ್ಚು ಸೂಕ್ತವೆನಿಸುತ್ತದೆ.

**ಅಡಿಟಿಪ್ಪಣಿಗಳು**

೧. www.onefivenine.com(ಅಂತರ್ಜಾಲ)

೨. ಪಟ್ಟಣ ಪಂಚಾಯಿತಿಯ ಕೃಪೆ

೩. ಅದೇ

೪. www.onefivenine.com(ಅಂತರ್ಜಾಲ)

೫. ಗಿರಿಜಾ ಟಿ., **ಚಿತ್ರದುರ್ಗ ಜಿಲ್ಲಾ ದರ್ಶಿನಿ**, ಪು.೨೫೮

೬. ಭೀಮರೆಡ್ಡಿ ಕೆ.ಎನ್. **ಮೊಳಕಾಲ್ಮೂರು ತಾಲೂಕು ದರ್ಶನ**, ಪು.೬

೭. ಅದೇ, ಪು.೪

೮. ಪಟ್ಟಣ ಪಂಚಾಯಿತಿಯ ಕೃಪೆ

೯. ಭೀಮರೆಡ್ಡಿ ಕೆ.ಎಸ್., **ಪೂರ್ವೋಕ್ತ**, ಪು.೭

೧೦. ಸೋಮಶೇಖರ್ ಎಸ್.ವೈ., **ಪೂರ್ವೋಕ್ತ**, ಪು.೧

೧೧. ಅದೇ, ಪು.೧-೭

೧೨. ಭೀಮರೆಡ್ಡಿ ಕೆ.ಎಸ್., **ಪೂರ್ವೋಕ್ತ**, ಪು.೬-೭

೧೩. ಅದೇ, ಪು.೮

೧೪. ಅದೇ, ಪು.೭

೧೫. ಚಂದ್ರಶೇಖರಯ್ಯ ಬಿ.ಎಂ, **ಕರ್ನಾಟಕದ ಸಾಂಸ್ಕೃತಿಕ ಇತಿಹಾಸ ಪರಮಪರೆ**, ಪು.೬೭

೧೬. ರಾಜಶೇಖರಪ್ಪ ಬಿ.(ಸಂ), **ದುರ್ಗಸಿರಿ, ಸ್ಮರಣ ಸಂಚಿಕೆ**, ಪು.೧೧೧

೧೭. ಸುಂದರ ಅ.(ಸಂ) **ಕರ್ನಾಟಕ ಚರಿತ್ರೆ ಸಂ.೧**, ಪು.೯೫

೧೮. ಶಿವತಾರಕ್ ಕೆ.ಬಿ., **ಕರ್ನಾಟಕದ ಪುರಾತತ್ವ ನೆಲೆಗಳು**, ಪು.೨೬೫

೧೯. ಅದೇ, ಪು.೨೬೬

೨೦. ಜಯಣ್ಣ ಯು., **ಮೊಳಕಾಲ್ಮೂರು ತಾಲೂಕಿನ ಪುರಾತತ್ವೀಯ ಪರಿಸರ**(ಅಪ್ರಕಟಿತ ಪಿಎಚ್.ಡಿ. ಮಹಾಪ್ರಭಂಧ), ಪು.೭೪-೭೫

೨೧. ಸೋಮಶೇಖರ ಎಸ್.ವೈ.(ಸಂ), **ಪೂರ್ವೋಕ್ತ**, ಪು.೩-೪

೨೨. ಜಯಣ್ಣ ಉಲ್ಲಾನಹಳ್ಳಿ, **ಮೊಳಕಾಲ್ಮೂರು ತಾಲೂಕು ಹಾನಗಲ್ಲಿನ ಪುರಾತತ್ವ ಸಮೀಕ್ಷೆ**(ಲೇಖನ), ಪು.೨೧

೨೩. ಸೋಮಶೇಖರ ಎಸ್.ವೈ.(ಸಂ), **ಪೂರ್ವೋಕ್ತ**, ಪು.೩-೪

೨೪. ಶ್ರೀನಿವಾಸ ಎಲ್., **ಹಂಪಿ ಪರಿಸರದ ಆದಿ ಮಾನವನ ನೆಲೆಗಳು**, ಪು.೨೪

೨೫. ಜಯಣ್ಣ. **ಪೂರ್ವೋಕ್ತ,** ಪು.೮೯

೨೬. ಊರಿನಿಂದ ಉತ್ತರಕ್ಕಿರುವ ಬೆಟ್ಟ ಪ್ರದೇಶದಲ್ಲಿ ಕ್ಷೇತ್ರಕಾರ್ಯ ಕೈಗೊಂಡಾಗ ಕೋತಲಗೊಂದಿ ಕಣಿವೆ ಪ್ರದೇಶದ ಹತ್ತಿರದ ಬೆಟ್ಟದ ತಪ್ಪಲಿನಲ್ಲಿ ನವ ಶಿಲಾಯುಗ ಕಾಲಕ್ಕೆ ಸೇರಿದಂತಹ ಡೈಕ್ ಶಿಲೆಯಿಂದ ರಚಿತಗೊಂಡ ಕೈಕೊಡಲಿಯೊಂದು ಶೋಧಗೊಂಡಿದರಿಂದ ಮೊಳಕಾಲ್ಮೂರು ನವಶಿಲಾಯುಗ ಕಾಲದ ನೆಲೆಯಾಗಿತ್ತೆಂಬ ವಿಚಾರ ತಿಳಿದುಬಂದಿದೆ.

೨೭. ಜಯಣ್ಣ. **ಪೂರ್ವೋಕ್ತ,** ಪು.೯೦-೯೨

೨೮. ಗುರುರಾಜರಾವ್ ಬಿ.ಕೆ., ದಿ ಮೆಗಾಲಿಥಿಕ್ ಕಲ್ಚರ್ ಇನ್ ಸೌತ್ ಇಂಡಿಯಾ, ಪು.೪೪

೨೯. ಜಯಣ್ಣ. **ಪೂರ್ವೋಕ್ತ,** ಪು.೯೦-೯೨

೩೦. ಅದೇ, ಪು.೧೧೦-೧೧೩

೩೧. ಮಾರ್ಟಿಮರ್ ವೀಲ್ಹರ್(ಬ್ರಹ್ಮಗಿರಿ ಆಂಡ್ ಚಂದ್ರವಳ್ಳಿ ಮೆಗಾಲಿಥಿಕ್ ಆಂಡ್ ಅದರ ಕಲ್ಚರ್ ಇನ್ ಮೈಸೂರು ಸ್ಟೇಟ್, **ಎನ್ಸಿಯಂಟ್ ಇಂಡಿಯಾ,** ಸಂ.೪, ಪು.೧೮೦-೩೧೦

೩೨. ಜಯಣ್ಣ. **ಪೂರ್ವೋಕ್ತ,** ಪು.೧೩೭-೧೩೮

೩೩. ಸುಂದರ ಅ.(ಸಂ), **ಪೂರ್ವೋಕ್ತ,** ಪು.೨೮೬

೩೪. ಲಕ್ಷ್ಮಣ್ ತೆಲಗಾವಿ(ಸಂ), **ಚಂದ್ರವಳ್ಳಿ,** ಪು.೧-೩

೩೫. ಸುಂದರ ಅ.(ಸಂ), **ಪೂರ್ವೋಕ್ತ,** ಪು.೩೫೪

೩೬. ಜಯಣ್ಣ. **ಪೂರ್ವೋಕ್ತ,** ಪು.೩೩

೩೭. ಲಕ್ಷ್ಮಣ್ ತೆಲಗಾವಿ(ಸಂ), **ಪೂರ್ವೋಕ್ತ,** ಪು.೬-೭

೩೮. ಶ್ರೀನಿವಾಸ ಪಾಡಿಗಾರ, **ಪುರಾತತ್ವಶಾಸ್ತ್ರ ಪರಿಚಯ,** ಪು.೯೭

೩೯. ಎಫಿಗ್ರಾಫಿ ಕರ್ನಾಟಿಕ, ಸಂ.೧೧, ಶಾ.ಸಂ.೪೦

೪೦. ಜಯಣ್ಣ. **ಪೂರ್ವೋಕ್ತ,** ಪು.೪೦

೪೧. ಲಕ್ಷ್ಮಣ್ ತೆಲಗಾವಿ(ಸಂ), **ಪೂರ್ವೋಕ್ತ,** ಪು.೧೭-೧೮

೪೨. ಎಫಿಗ್ರಾಫಿ ಕರ್ನಾಟಿಕ, **ಪೂರ್ವೋಕ್ತ,** ಶಾ.ಸಂ.೨೭

೪೩. ಸೋಮಶೇಖರ್ ಎಸ್.ವೈ., **ಜಟಂಗಿರಾಮೇಶ್ವರ ಸಾಂಸ್ಕೃತಿಕ ದರ್ಶನ,** ಪು.

೪೪. ತಿಪ್ಪೇರುದ್ರಸ್ವಾಮಿ ಎಚ್., **ಕರ್ನಾಟಕ ಸಂಸ್ಕೃತಿ ಸಮೀಕ್ಷೆ,** ಪು.೧೦೩

೪೫. ಜಯಣ್ಣ. **ಪೂರ್ವೋಕ್ತ,** ಪು.೪೬

೪೬. ಅದೇ, ಪು.೪೭

೪೭. ಎಫಿಗ್ರಾಫಿ ಕರ್ನಾಟಿಕ, **ಪೂರ್ವೋಕ್ತ,** ಶಾ.ಸಂ.೧೦,೧೬

೪೮. ಜಯಣ್ಣ. **ಪೂರ್ವೋಕ್ತ,** ಪು.೪೯-೫೦

೫೦. ಶ್ರೀನಿವಾಸ ಎಂ.ವಿ.(ಸಂ), **ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು,** ಪು.೩೪೪-೩೪೬

೫೧. ಸೋಮಶೇಖರ್ ಎಸ್.ವೈ.(ಸಂ), **ಬ್ರಹ್ಮಗಿರಿ,** ಪು.೨೧

೫೨. ಅದೇ, ಪು.೨೧

೫೩. ಬಸವರಾಜಪ್ಪ ಹೆಚ್.ಇ., **ಚಿತ್ರದುರ್ಗ ಜಿಲ್ಲೆಯ ಭೂ ಹಿಡುವಳಿಗಳು: ಒಂದು ಚಾರಿತ್ರಿಕ ಅಧ್ಯಯನ(ಅಪ್ರಕಟಿತ ಪಿಎಚ್.ಡಿ.ಪ್ರಬಂಧ),** ಪು.೯

೫೪. ಅದೇ, ಪು.೯

೫೫. ಗಿರಿಜಾ ಟಿ., **ಪೂರ್ವೋಕ್ತ,** ಪು.೨೫೩

೫೬. ಜಯಣ್ಣ. **ಪೂರ್ವೋಕ್ತ,** ಪು.೫೫

೫೭. ಸೋಮಶೇಖರ್ ಎಸ್.ವೈ., **ಪೂರ್ವೋಕ್ತ,** ಪು.೨೨

೫೮. ಎಫಿಗ್ರಫಿ ಕರ್ನಾಟಿಕ, ಪೂರ್ವೋಕ್ತ, ಶಾ.ಸಂ.೩೭, ೩೮

೫೯. ಸೋಮಶೇಖರ್ ಎಸ್.ವೈ., **ಪೂರ್ವೋಕ್ತ,** ಪು.೨೨

೬೦. ನಾಗೇಗೌಡ ಎಚ್.ಎಲ್., **ಪ್ರವಾಸಿಕಂಡ ಇಂಡಿಯಾ,** ಸಂ.೮, ಪು.

೬೧. ಶಾಮರಾಯ ತ.ಸು., **ಮೂರುತಲೆಮಾರು,** ಪು.೫೪

೬೨. ಸೋಮಶೇಖರ್ ಎಸ್.ವೈ., **ಪೂರ್ವೋಕ್ತ,** ಪು.೨೨

೬೩. ತೆಲಗಾವಿ ಲಕ್ಷ್ಮಣ್, **ಎಪ್ಪತ್ತೇಳು ಪಾಳೆಯಗಾರರು** ಪು.೩೬-೩೮

೬೪. ಗಿರಿಜಾ.ಟಿ **ಪೂರ್ವೋಕ್ತ,** ಪು.೨೪೪-೨೪೫

೬೫. ಸೋಮಶೇಖರ್ ಎಸ್.ವೈ., **ಪೂರ್ವೋಕ್ತ,** ಪು.೨೨-೨೩

೬೬. ಅದೇ, ಪು.೧೪೦-೧೪೬

೬೭. **ಕರ್ನಾಟಕ ಗ್ರಾಮಸೂಚಿ.** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಪು.೮೮

೬೮. ಸೋಮಶೇಖರ ಎಸ್.ವೈ.(ಸಂ), **ಪೂರ್ವೋಕ್ತ,** ಪು.೧

೬೯. ಪೆಂಡಕೂರು ಗುರುಮೂರ್ತಿ **ಬಳ್ಳಾರಿ ಜಿಲ್ಲೆಯ ಸ್ಥಳನಾಮಗಳು,** ಪು.೧

೭೦. ಹೊಂಗನೂರು ನಂಜಯ್ಯ, **ಸ್ಥಳನಾಮಗಳು,** ಪು.೯

೭೧. ಜೋಶಿ ಶಂ.ಬಾ., **ಎಡೆಗಳು ಹೇಳುವ ಕಂನಾಡ ಕಥೆ,** ಪು.೧೬

೭೨. ಸೂರ್ಯನಾಥ ಯು.ಕಾಮತ್, ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಸಂ.೩, ಪು.೫೮೧

೭೩. ಮೈಲಾರಪ್ಪ ಬಿ., **ಪೂರ್ವೋಕ್ತ,** ಪು.೮

೭೪. ಸೋಮಶೇಖರ ಎಸ್.ವೈ.(ಸಂ), **ಪೂರ್ವೋಕ್ತ,** ಪು.೧೯

೭೫. ಹುಲಿಕುಂಟೆಮೂರ್ತಿ, **ಚರಿತ್ರೆ ವೆಲುಗುಲೋ ರಾಯದುರ್ಗಂ(ತೆಲುಗು ಕೃತಿ),** ಪು.೬೫

## ಅಧ್ಯಾಯ ಮೂರು

# ಕಲೆ ಮತ್ತು ವಾಸ್ತುಶಿಲ್ಪ

### ೩.೧. ವಾಸ್ತುಶಿಲ್ಪ

ವಾಸ್ತುಶಿಲ್ಪಕಲೆಯು ಅರವತ್ತನಾಲ್ಕು ಕಲೆಗಳಲ್ಲಿ ಒಂದಾಗಿರುವ ಶಿಲ್ಪಕಲೆಯ ಒಂದು ಭಾಗವಾಗಿದೆ.[೧] ವಾಸ್ತು ಎಂದರೇ ವಾಸಸ್ಥಾನ ಅಥವಾ ಮನೆ ಎಂದಾಗುತ್ತದೆ.[೨] ಅಂದರೆ ವಸ್ತುಗಳಿಂದ ನಿರ್ಮಿತವಾದುದೆಂಬ ಅರ್ಥವನ್ನು ತೋರುವ ವಾಸ್ತು ದೇವತೆಗಳಿಗೆ ಇಲ್ಲವೇ, ಮಹಾತ್ಮರ ಸಂಕೇತ ಇಲ್ಲವೇ ಮೂರ್ತಿಗಳಿಗೋಸ್ಕರ ಮಾಡಿದಂತಹ ಹಾಗೂ ಮನುಷ್ಯರು ವಾಸಿಸುವಂತಹ ವಸತಿ ಅಥವಾ ಸ್ಥಳವೆನಿಸುತ್ತದೆ. ಇದು ನಿವೇಶನ ಮತ್ತು ನಿಕೇತನಗಳೆರಡನ್ನೂ ಸೂಚಿಸುತ್ತದೆ.[೩] 'ಮಯಮತ' ಗ್ರಂಥವು ವಾಸ್ತು ಎಂಬ ಶಬ್ದವನ್ನು ಎರಡು ಹಂತಗಳಲ್ಲಿ ವಿವರಿಸಿದೆ.[೪] ಮರ್ತ್ಯರು ಮತ್ತು ಅಮಾರ್ತ್ಯರು ವಾಸಿಸುವ ಸ್ಥಳಕ್ಕೆ ವಾಸ್ತು ಎಂದು ಹೆಸರು. ವಸ್ತುವನ್ನು ಆಶ್ರಯಿಸಿದ್ದುದು ವಾಸ್ತು ಎಂದು ಗುರುತಿಸಲ್ಪಡುತ್ತದೆ. ಗರುಡ ಪುರಾಣದ ಒಂದು ಶ್ಲೋಕವು ಗ್ರಾಮಗಳು, ನಗರಗಳು, ಕೋಟೆಗಳು, ಪಟ್ಟಣಗಳೂ ಸಹ ವಾಸ್ತುಗಳೆಂದು ಹೇಳುತ್ತವೆ.[೫] ವಾಸ್ತುವಿನಿಂದ ರಚನೆಗೊಂಡ, ವಾಸ್ತು ಯೋಗ್ಯವಾದ ವಸ್ತುವಿನ ಮೇಲೆ ರಚಿಸಲಾದ ಎಲ್ಲಾ ರಚನೆಗಳನ್ನು ವಾಸ್ತುರಚನೆ ಎನ್ನಬಹುದು. ಕೇವಲ ಕಟ್ಟಡದ ನಿರ್ಮಾಣಗಳಿಗೆ ಮಾತ್ರವಲ್ಲದೇ, ಪಟ್ಟಣ ನಿರ್ಮಾಣದ ಯೋಜನೆ, ರಸ್ತೆಗಳು, ಕೆರೆಗಳು, ಉದ್ಯಾನವನಗಳು, ಕೋಟೆ, ದೇವಾಲಯಗಳಲ್ಲದೇ ಕೊನೆಗೆ ಪೀಠೋಪಕರಣಗಳ ನಿರ್ಮಾಣವು ಸೇರಿದಂತೆ ಮೊದಲಾದ ಅಂಶಗಳು ಈ ವಾಸ್ತುರಚನೆಯ ವ್ಯಾಪ್ತಿಯಲ್ಲಿ ಸೇರುತ್ತಿತ್ತೆಂದು 'ಮಾನಸಾರ' ಎಂಬ ಗ್ರಂಥವು ಹೇಳುತ್ತದೆ. ಆದರೆ ಮುಂದೆ ಈ ಪದದ ವ್ಯಾಪ್ತಿ ಪರಿಮಿತಗೊಂಡು 'ವಾಸ್ತುಶಿಲ್ಪ' ಎಂಬ ಅರ್ಥದೊಂದಿಗೆ ಬೆಳೆದು ಬಂದಿತು. ವಾಸ್ತು ಎಂದರೆ ಕಟ್ಟಡಗಳ ನಿರ್ಮಾಣವೆಂದು ಶಿಲ್ಪ ಎಂದರೇ ಮೂರ್ತಿಗಳ ನಿರ್ಮಾಣ ಎಂಬರ್ಥ ಪಡೆದುಕೊಂಡಿತು.[೬] ಆಲಯಗಳನ್ನು ಕಟ್ಟಲು ಬಳಸಿದ ಇಟ್ಟಿಗೆ, ಮರ, ಕಲ್ಲುಗಳನ್ನು ವಿಶ್ವಕರ್ಮನ ವಾಸ್ತುಶಾಸ್ತ್ರದಲ್ಲಿ ವಾಸ್ತುಗಳೆಂದು ಕರೆದಿದೆ.[೭] ಸೌಧ, ಪ್ರಸಾದ, ಮುಂತಾದವುಗಳು ವಸ್ತುವನ್ನು ಆಶ್ರಯಿಸಿದ್ದರಿಂದ ವಾಸ್ತು ಎಂದೆನಿಸುತ್ತದೆ. ದೇವಾಲಯ ದೇವತಾಮೂರ್ತಿಗಳು, ಅರಮನೆಗಳು, ಬಾವಿ, ಪುಷ್ಕರಣಿಗಳು, ಸರ್ವಜನೋಪಯೋಗಿ

ಗೃಹಗಳು ಮೊದಲಾದವುಗಳ ರಚನೆಯನ್ನು ಶುಕ್ರ ನೀತಿಗ್ರಂಥವು ವಾಸ್ತುಶಿಲ್ಪಶಾಸ್ತ್ರದ ಅಡಿಯಲ್ಲಿ ಗುರುತಿಸುತ್ತದೆ.[೮] ವಾಸ್ತು ಶಿಲ್ಪವೆಂದರೇನೆಂಬುದನ್ನು ಅನೇಕರು ಸೂತ್ರ ರೂಪದಲ್ಲಿ ಹಿಡಿದಿಡಲು ಪ್ರಯತ್ನಿಸಿದ್ದಾರೆ. The art of organising space" ಎಂದು ಅದನ್ನು ಹೇಳಿರುವ ಸೂತ್ರ ಬಂದಿದೆ.[೯] ಚಿತ್ರ, ಶಿಲ್ಪ, ಕಾವ್ಯ, ನಾಟಕ, ಮೊದಲಾದ ಕಲೆಗಳು ಜೀವನದ ವಿವಿಧ ಅನುಭವಗಳಿಗೆ ರೂಪದಾರಣೆ ಮಾಡಲು ಪ್ರಯತ್ನಿಸಿದರೆ. ವಾಸ್ತುಶಿಲ್ಪ ನಿಕರವಾದ ಆಕಾಶವನ್ನೆ ವ್ಯವಸ್ಥೆಗೊಳಿಸಿ ಅದಕ್ಕೊಂದು ರೂಪಕೊಡುವ ಕಲೆ. ಗೋಡೆಗಳನ್ನು ಹಾಕಿ ಮೇಲೆ ಛಾವಣಿಗಳನ್ನು ನಿರ್ಮಿಸಿ ಅನಂತವಾದ ಆಕಾಶವನ್ನು ಸಾಂತಗೊಳಿಸಿ ಅದನ್ನು ಉಪಯೊಗಕ್ಕಾಗಿ ಹಿಡಿದಿಡುತ್ತದೆ; ಮತ್ತು ಆ ಮೂಲಕ ಸಂಪೂರ್ಣವಾಗಿ ಹೊಸ ರೂಪಗಳನ್ನು ಸೃಷ್ಠಿಸುತ್ತದೆ. ವಾಸ್ತುಶಿಲ್ಲಿ ತನ್ನ ಕಲಾರೂಪಗಳ ನಿರ್ಮಾಣಕ್ಕೆ ತಾನೇ ಕಾರಣನಾದ ಸಾಮ್ರಾಟ.[೧೦]

ಭಾರತೀಯ ವಾಸ್ತುಕಲೆಯು ಇತರ ಕಲೆಗಳಂತೆಯೇ ಆಯಾ ಕಾಲದ ಹಾಗೂ ಜನಾಂಗದ ಆಂತರಿಕ ಆಕಾಂಕ್ಷೆ, ಅನುಭವಗಳಿಗೆ ಕನ್ನಡಿಯನ್ನು ಹಿಡಿಯ ಬಲ್ಲುದೆಂಬ ಅಭಿಪ್ರಾಯ Architecture is the matrix of civilization[11] ಎಂಬ ಹೇಳಿಕೆಯಲ್ಲಿ ಸೂಚಿತವಾಗಿದೆ. ವಾಸ್ತುಶಿಲ್ಪವು ನಾಗರೀಕತೆಯನ್ನು ರೂಪಿಸುವ ಮಾತೃಕೆ. ಇದು ನಾಗರೀಕತೆಯ ಶಿಶುವನ್ನು ತನ್ನ ಗರ್ಭದಲ್ಲಿಟ್ಟು ಕೊಂಡು ಬೆಳೆಸುತ್ತದೆ. ವಾಸ್ತುಶಿಲ್ಪದ ಬೆಳವಣಿಗೆಯಲ್ಲಿ ಮಾನವ ಜನಾಂಗದ ವಿಕಾಸವನ್ನು ಗುರುತಿಸುವ ವಿವಿಧ ಹಂತಗಳನ್ನು ಕಂಡುಕೊಳ್ಳಬಹುದಾಗಿದೆ. ಅಲೆಮಾರಿಯಾಗಿ ಬದುಕುತ್ತಿದ್ದ ಮಾನವ ವಾಸಕ್ಕೆಂದು ಮನೆಯನ್ನು ನಿರ್ಮಿಸಿಕೊಂಡ ಪ್ರಯತ್ನವು ವಾಸ್ತುಶಿಲ್ಪದ ಮೊದಲ ಹೆಜ್ಜೆಯಾಯಿತು.[೧೨] ಚರಿತ್ರೆಯ ನಿರ್ಮಾಣ ಕಾರ್ಯದಲ್ಲಿ ವಾಸ್ತುವನ್ನು ಮೂಲಾಧಾರವಾಗಿ ಚರಿತ್ರಕಾರರು ಬಳಸಿಕೊಳ್ಳಬೇಕಾದರೆ, ಆ ಕಾಲಮಾನದ ಪ್ರದೇಶದ ಎಲ್ಲಾ ರೀತಿಯ ವಾಸ್ತುಶಿಲ್ಪ ಲಭ್ಯವಾಗಬೇಕು.[೧೩] ಅಧ್ಯಯನದ ಸಲುವಾಗಿ ವಾಸ್ತುಶಿಲ್ಪವನ್ನು ಧಾರ್ಮಿಕ ಮತ್ತು ಲೌಕಿಕ ಎಂದು ವಿಭಾಗಿಸಬಹುದು. ಧಾರ್ಮಿಕ ವಾಸ್ತುಶಿಲ್ಪದಲ್ಲಿ ಆರಾಧನಾ ಸ್ಥಳಗಳು ಸೇರ್ಪಡೆಯಾದರೆ, ಲೌಕಿಕ ವಾಸ್ತುಶಿಲ್ಪದಲ್ಲಿ ಕೆರೆ, ಅರಮನೆ, ನಗರ, ಆಣೆಕಟ್ಟುಗಳೆಂಬ ಮುಂತಾದವುಗಳು ಸೇರ್ಪಡೆಯಾಗುತ್ತವೆ. ವಾಸ್ತುಶಿಲ್ಪದ ಮೂಲಕ ಒಂದು ಪ್ರದೇಶದ ಇತಿಹಾಸವನ್ನು ಪುನರ್ರಚಿಸಲು ನಮಗೆ ಧಾರ್ಮಿಕ ಮತ್ತು ಲೌಕಿಕ ಎಂಬ ಎರಡೂ ಬಗೆಯ ವಾಸ್ತುಶಿಲ್ಪವನ್ನು ಗುರುತಿಸಬಹುದಾದಂತಹ ಸ್ಮಾರಕಾವಶೇಷಗಳ ಪಳೆಯುಳಿಕೆಗಳು ಅತ್ಯವಶ್ಯಕವಾಗಿ ಬೇಕಾಗುತ್ತದೆ.

ದೇವಾಲಯಗಳು, ಮಸೀದಿಗಳು, ಕೋಟೆಕೊತ್ತಲಗಳೆಂಬ ಮೊದಲಾದ ಸ್ಮಾರಕಗಳು ವಾಸ್ತುಶಿಲ್ಪಕಲೆಯ ಐತಿಹಾಸಿಕ ಅಧ್ಯಯನಕ್ಕೆ ದೊರಕುವ ವಿಶಿಷ್ಟ ಬಗೆಯ ಸಾಮಾಗ್ರಿಗಳಾಗಿವೆ. ಏಕೆಂದರೆ ಚರಿತ್ರೆಯಲ್ಲಿ ಮಾನವ ಹಾಗೂ ರಾಜಮಹಾರಾಜರು ಇವುಗಳನ್ನು ತಮ್ಮ ವಾಸದ ಮನೆಗಳಿಗಿಂತ ದೀರ್ಘಕಾಲ ಉಳಿಯುವಂತಹ ರೀತಿಯಲ್ಲಿ ಕಟ್ಟಿ ಉಳಿಸಿಕೊಂಡು ಬಂದಿದ್ದಾರೆ. ಇದರ ಹಿನ್ನೆಲೆಯಲ್ಲಿ ಧಾರ್ಮಿಕ ತಳಹದಿಯ ಮೇಲೆ ವಾಸ್ತುಶಿಲ್ಪ ಇಂದಿಗೂ ಪ್ರಧಾನವಾಗಿ

ಉಳಿದು ಬೆಳೆದು ಬಂದಿದೆ ಎನ್ನಬಹುದು. ಅಷ್ಟೆ ಅಲ್ಲದೆ ಭೌಗೋಳಿಕ ಸನ್ನಿವೇಶಗಳು, ಐತಿಹಾಸಿಕ ಘಟನೆಗಳು, ಸಾಮಾಜಿಕ ಮತ್ತು ರಾಜಕೀಯ ಪರಿವರ್ತನೆಗಳೆಂಬ ಮೊದಲಾದ ಕೆಲವು ಅಂಶಗಳ ಪ್ರಭಾವದಿಂದ ಬದಲಾವಣೆಗೊಂಡ ಅಭಿರುಚಿಗೆ ತಕ್ಕಂತೆ ವಾಸ್ತುಶಿಲ್ಪ ಬೆಳೆದು ಬಂದಿತು ಎನ್ನಬಹುದಾಗಿದೆ. ಆದುದರಿಂದ ವಾಸ್ತುಶಿಲ್ಪದ ಚರಿತ್ರೆ ಎಂದರೇ ಒಂದು ಸಮಾಜದ/ಒಂದು ಜನಾಂಗದ ಅಭಿರುಚಿಯ ಚರಿತ್ರೆಯೇ ಆಗಿದೆ. ಈ ವಿಷಯದಲ್ಲಿ ಭಾರತದ ವಾಸ್ತುಶಿಲ್ಪವೂ ಸಹ ಕಾಲಕಾಲಕ್ಕೆ ಇಲ್ಲಿ ಸಂಭವಿಸಿದ ರಾಜಕೀಯ, ಧಾರ್ಮಿಕ ಹಾಗೂ ಸಾಮಾಜಿಕ ಬದಲಾವಣೆಗಳಿಗೆ ಅನುಗುಣವಾಗಿ ಬೆಳೆದು ಬಂದಿರುವುದನ್ನು ಕಾಣಬಹುದು. ಮೂಲಭೂತವಾದ ಆಶಯ ಮತ್ತು ಆದರ್ಶಗಳು ಒಂದೇ ಆಗಿದ್ದರೂ ವಾಸ್ತುಶಿಲ್ಪ ಅಭಿವ್ಯಕ್ತಗೊಂಡಿರುವ ರೂಪ ಮತ್ತು ಸ್ವರೂಪಗಳು ಕಾಲಕಾಲಕ್ಕೆ ಬದಲಾಗುತ್ತಾ ಬಂದಿವೆ.[೧೪] ಭರತ ಖಂಡದ ವಾಸ್ತುಶಿಲ್ಪ ಮತ್ತು ಶಿಲ್ಪಗಳು ಸಾವಿರಾರು ವರ್ಷದ ವೈವಿಧ್ಯಮಯವಾದ, ಸಾಹಸಪೂರ್ಣವಾದ ಚರಿತ್ರೆ ಮತ್ತು ಸಾಂಸ್ಕೃತಿಕ ಪರಂಪರೆಯನ್ನು ಹೊಂದಿವೆ.

ಹಿಂದಿನ ಅಧ್ಯಾಯದಲ್ಲಿ ಚರ್ಚಿಸಿದಂತೆ ಮೊಳಕಾಲ್ಮೂರು ಪಟ್ಟಣದಲ್ಲಿ ನಿರ್ದಿಷ್ಟವಾಗಿ ಯಾವುದೇ ರಾಜಮನೆತನ ಆಡಳಿತ ನಡೆಸದಿದ್ದರೂ, ಇದು ಹಲವಾರು ರಾಜಮನೆತನಗಳ ಹಾಗೂ ಅರಸರು ಮತ್ತು ಸಾಮಂತರ ಅಧೀನಕ್ಕೆ ಒಳಗಾಗಿತ್ತೆಂದು ತಿಳಿದು ಬಂದಿದೆ. ಈ ಅರಸು ಮನೆತನದವರು ಕೇವಲ ಇಲ್ಲಿ ಆಳ್ವಿಕೆಯನ್ನು ನಡೆಸದೇ ತಮ್ಮ ಮನೆತನಗಳ ಸಾಂಸ್ಕೃತಿಕ ಹಿರಿಮೆಯನ್ನು ವಾಸ್ತುಶಿಲ್ಪ ಕಲೆಗಳಲ್ಲಿ ನಿರ್ಮಿಸಿ ಬಿಟ್ಟು ಹೋಗಿದ್ದಾರೆ. ಆದ್ದರಿಂದ ಪ್ರಸ್ತುತ 'ಕಲೆ ಮತ್ತು ವಾಸ್ತುಶಿಲ್ಪ' ಎಂಬ ಅಧ್ಯಾಯದಲ್ಲಿ ಮೊಳಕಾಲ್ಮೂರು ಪಟ್ಟಣದಲ್ಲಿರುವ ದೇವಾಲಯಗಳ ವಾಸ್ತುಶಿಲ್ಪ, ರಕ್ಷಣಾ ವಾಸ್ತುಶಿಲ್ಪ, ಮೂರ್ತಿಶಿಲ್ಪ ಹಾಗೂ ಶಾಸನಶಿಲ್ಪಗಳ ಕುರಿತಾಗಿ ಚರ್ಚಿಸಲಾಗಿದೆ.

**೩.೧.೧. ದೇವಾಲಯ ವಾಸ್ತುಶಿಲ್ಪ**

ಮಾನವನು ಮೂಲತಃ ನಿಸರ್ಗದ ಜೀವಿಯಾದುದರಿಂದ ಆತನ ಜೀವನದಲ್ಲಿ ಪ್ರಕೃತಿಯು ಅತಿ ಮಹತ್ವದ ಪಾತ್ರವನ್ನು ನಿರ್ವಹಿಸುತ್ತದೆ. ಅಲೆಮಾರಿಯಾಗಿ ಬದುಕುತ್ತಿದ್ದ ಮಾನವ ತನ್ನ ವಾಸಕ್ಕೆಂದು ಮನೆಯನ್ನು ನಿರ್ಮಿಸಿಕೊಂಡ ನಂತರ, ನಿಸರ್ಗದತ್ತವಾದ ಗಿಡ, ಮರ, ನದಿ, ಹಳ್ಳ, ಕೊಳ್ಳ ಎಂಬ ಮೊದಲಾದವುಗಳ ಸೃಷ್ಠಿಯ ಹಿನ್ನೆಲೆಯಲ್ಲಿ ಯಾವುದೋ ಒಂದು ಅನಂತ ಶಕ್ತಿಯು ಅಡಗಿದೆ ಎಂದು ಭಾವಿಸಿ ಅವುಗಳನ್ನು ಪೂಜಿಸಲು ಪ್ರಯತ್ನಿಸಿದನು. ಹಾಗೆಯೇ ಆ ಅನಂತ ಶಕ್ತಿಗೊಂದು ರೂಪಕೊಟ್ಟು ಅದರ ರಕ್ಷಣೆಗಾಗಿ ಒಂದು ಆಲಯವನ್ನು ನಿರ್ಮಿಸಿದನು. ಇದು ಮುಂದೆ ದೇವಾಲಯವಾಗಿ ಪರಿಣಮಿಸಿತು. ಹೀಗೆ ಅವನು ತನ್ನ ರಕ್ಷಣೆಗಾಗಿ ನಿರ್ಮಿಸಿಕೊಂಡದ್ದು ಗೃಹವಾಸ್ತು ಶಿಲ್ಪವಾದರೇ, ತಾನು ನಂಬಿರುವ ದೇವರ ರಕ್ಷಣೆಗಾಗಿ ನಿರ್ಮಿಸಿಕೊಂಡಿದ್ದು ದೇವಾಲಯ ವಾಸ್ತುಶಿಲ್ಪವಾಯಿತು. ಈ ಸಂದರ್ಭದಲ್ಲಿ ಗೃಹವಾಸ್ತುಶಿಲ್ಪವೇ ದೇವಾಲಯ ವಾಸ್ತುಶಿಲ್ಪದ ಮೇಲೆ

ಪ್ರಭಾವ ಬೀರಿದೆ ಎಂದು ಹೇಳಬಹುದು. ಮಾನವನು ತನ್ನ ಗೃಹದೊಳಗೆ ಮಾಡುವ ಪೂಜೆಯು "ಆತ್ಮಾರ್ಥ"ವಾದರೆ, ದೇವಾಲಯದಲ್ಲಿ ಮಾಡುವ ಪೂಜೆಯು "ಪರಾರ್ಥ"ವಾಗುತ್ತದೆ.[೧೫] ದೇವಾಲಯಗಳಿಗೆ ಆಂಗ್ಲ ಭಾಷೆಯಲ್ಲಿ Tempal ಎಂದು ಕರೆಯಲಾಗುತ್ತದೆ. Tempal ಎಂದರೇ "ದೇವರು ನೆಲೆಸಿರುವ ಸ್ಥಳ" ಎಂದಾಗುತ್ತದೆ. ಅಂದರೆ ದೇವಾಲಯಗಳು ಪ್ರತಿಮೆಗೊಂದು ನೆಲೆಯಾಗಿಯೂ ಮತ್ತು ಸಾರ್ವಜನಿಕರಿಗೆ ಪೂಜೆ-ಪುನಸ್ಕಾರಗಳ ಆಲಯಗಳಾಗಿಯೂ ಪರಿಣಮಿಸಿವೆ.

ಭಾರತದ ಉದ್ದಗಲಕ್ಕೂ ಕಂಡು ಬರುವ ಸಾವಿರಾರು ಬೌದ್ಧಸ್ತೂಪ, ಚೈತ್ಯ, ವಿಹಾರ, ಜೈನ, ಬಸದಿ, ಜಿನಾಲಯ ಚರ್ಚುಗಳು ಹಾಗೂ ದೇವಾಲಯಗಳೆಂಬ ಮಹತ್ವದ ಐತಿಹಾಸಿಕ ಧಾರ್ಮಿಕ ಸ್ಮಾರಕಗಳೇ ಹೆಚ್ಚಾಗಿ ನಿರ್ಮಾಣಗೊಂಡಿವೆ.[೧೬] ಭಾರತೀಯ ಸಂಸ್ಕೃತಿಯನ್ನು ಅರಿಯುವಲ್ಲಿ ಇತಿಹಾಸದ ಮೂಲ ಸಾಮಾಗ್ರಿಗಳಾಗಿ ದೊರೆಯುವ ಸ್ಮಾರಕಗಳಲ್ಲಿ ದೇವಾಲಯಗಳು ಅತೀ ಪ್ರಮುಖವಾದವುಗಳಾಗಿವೆ. ಭಾರತ ದೇಶದಲ್ಲಿರುವಷ್ಟು ದೇವಾಲಯಗಳು ಜಗತ್ತಿನ ಬೇರೆ ಯಾವ ದೇಶದಲ್ಲಿಯೂ ಕಂಡುಬರುವುದಿಲ್ಲ. ಇಲ್ಲಿನ ಪ್ರತಿಯೊಂದು ಗ್ರಾಮ, ಹಳ್ಳಿಗಳಲ್ಲಿಯೂ ದೇವಾಲಯಗಳು-ಗುಡಿಗಳು ಇದ್ದೇ ಇರುತ್ತವೆ. ಹಾಗಾಗಿ ಭಾರತದಲ್ಲಿ ಗುಡಿಗಳಿಲ್ಲದ ಗ್ರಾಮಗಳಿಲ್ಲ, ದೇವಾಲಯುಗಳಿಲ್ಲದ ನಗರಗಳಿಲ್ಲ ಎನ್ನಬಹುದು.[೧೭] ಧಾರ್ಮಿಕ ಉದ್ದೇಶದಿಂದಲೇ ದೇವಾಲಯಗಳನ್ನು ನಿರ್ಮಿಸಿದರೂ, ಈ ದೇವಾಲಯಗಳ ನಿರ್ಮಾಣದಿಂದ ತಮಗೂ ಹಾಗೂ ತಮ್ಮವಂಶಜರಿಗೂ ಮೋಕ್ಷ ಪ್ರಾಪ್ತವಾಗುತ್ತದೆಂಬ ತಿಳುವಳಿಕೆ ಪ್ರಾಚೀನ ಕಾಲದಿಂದಲೂ ಭಾರತೀಯರಿಗಿತ್ತು. ಈ ಹಿನ್ನೆಲೆಯಲ್ಲಿ ಅನೇಕ ರಾಜರು, ರಾಣಿಯರು, ಸಾಮಂತರು, ಆಡಳಿತಾಧಿಕಾರಿಗಳು, ಹಾಗೂ ಜನಸಾಮಾನ್ಯರು ದೇವಾಲಯಗಳನ್ನು ನಿರ್ಮಿಸುವುದರ ಜೊತೆಗೆ ಅವುಗಳ ನಿರ್ವಹಣೆಗೆ ದಾನದತ್ತಿನ್ನು ನೀಡಿರುವುದನ್ನು ಶಾಸನಗಳಿಂದ ತಿಳಿಯಬಹುದಾಗಿದೆ.[೧೮] ಇಡೀ ಭಾರತವನ್ನು ದೃಷ್ಠಿಯಲ್ಲಿಟ್ಟುಕೊಂಡು ನೋಡಿದಾಗ ಗುಪ್ತರ ಕಾಲದಲ್ಲಿ ಅಂದರೆ ಸು.೪ನೇ ಶತಮಾನದಿಂದ ೬ನೇ ಶತಮಾನದವರೆಗೆ ದೇವಾಲಯಗಳ ನಿರ್ಮಾಣದ ಕಲೆ ಗಮನಾರ್ಹವಾದ ರೀತಿಯಲ್ಲಿ ವಿಕಾಸವನ್ನು ಪಡೆಯಿತು.[೧೯] ಈ ಆಧಾರದ ಮೇಲೆ ಗುಪ್ತರ ಕಾಲದ ದೇವಾಲಯಗಳ ಅವಶೇಷಗಳಿಂದ ಭಾರತೀಯ ದೇವಾಲಯ ವಾಸ್ತುಶಿಲ್ಪದ ಅಧ್ಯಯನ ಆರಂಭವಾಯಿತೆಂದು ಹೇಳಬಹುದು. 'ತಿಗುವಾ' ಮತ್ತು 'ಸಾಂಚಿ'ಯಲ್ಲಿನ ದೇವಾಲಯಗಳ ನಂತರ ಗುಪ್ತರ ಕಾಲದ ಭೂಮಾರದಲ್ಲಿರುವ ಶಿವಾಲಯ, ನಾಚ್ನಕುಟಾರದಲ್ಲಿರುವ ಪಾರ್ವತಿ ದೇವಾಲಯ, ದೇವಘರ್‌ನಲ್ಲಿರುವ ವಿಷ್ಣು ದೇವಾಲಯ ಎಂಬ ಮೊದಲಾದ ದೇವಾಲಯಗಳಲ್ಲಿ ಗರ್ಭಗೃಹವು ಮಧ್ಯದ ಪ್ರವೇಶವನ್ನು ಆಕ್ರಮಿಸಿದೆ. ಈ ರಚನೆಗಳನ್ನು ವಿದ್ವಾಂಸರು ೫ನೇ ಶತಮಾನದ್ದೆಂದು ನಿರ್ಣಯಿಸಿದ್ದಾರೆ. ಇದೇ ಹಾದಿಯಲ್ಲಿ ಕರ್ನಾಟಕದಲ್ಲಿರುವ ದೇವಾಲಯಗಳನ್ನು ಪರಿಶೀಲೀಸಬಹುದಾಗಿದೆ.[೨೦]

ವಾಸ್ತುಶಿಲ್ಪದಲ್ಲಿ ಕರ್ನಾಟಕದಲ್ಲಿರುವಷ್ಟು ವೈವಿಧ್ಯತೆ ಬಹುಶಃ ಭರತ ಖಂಡದ ಬೇರೆ ಯಾವಭಾಗದಲ್ಲಿಯೂ ಇಲ್ಲವೆನ್ನಬಹುದು. ದೇವಾಲಯಗಳ ನಿರ್ಮಾಣದಲ್ಲಿ ಕರ್ನಾಟಕ ತೋರಿದ

ಉದಾತ್ತವಾದ ಅಭಿರುಚಿ ಮತ್ತು ಅದನ್ನು ಬೆಳೆಸಿಕೊಂಡು ಬಂದ ಬಗೆ ವಿಶಿಷ್ಟವಾದುದಾಗಿದೆ. ಭರತ ಖಂಡದ ಎಲ್ಲಾ ಭಾಗಗಳಲ್ಲಿ ಕಂಡು ಬರುವ ದೇವಾಲಯಗಳ ರಚನೆಯಲ್ಲಿನ ಉತ್ತಮ ಅಂಶಗಳನ್ನು ಕರ್ನಾಟಕ ತನ್ನಲ್ಲಿ ಅಳವಡಿಸಿಕೊಳ್ಳಲು ಪ್ರಯತ್ನ ಪಟ್ಟಿದೆ.[೨೧] ಪ್ರಾಚೀನ ಕಾಲದಿಂದಲೂ ವಿವಿಧ ರಾಜಮನೆತನಗಳಿಂದ ಪೋಷಿಸಲ್ಪಟ್ಟ ಕರ್ನಾಟಕದಲ್ಲಿ ವಿವಿಧ ಶೈಲಿಗಳ, ವಿವಿಧ ಪ್ರಕಾರಗಳ, ವಿವಿಧ ಪಂಥಗಳ ಹಾಗೂ ವಿವಿಧ ಪ್ರದೇಶಗಳ ಪ್ರಭಾವವುಳ್ಳ ಸ್ಥಳೀಯ ವೈಶಿಷ್ಟ್ಯತೆಗಳಿಂದ ಕೂಡಿದ ಅಸಂಖ್ಯಾತ ದೇವಾಲಯಗಳು ನಾಡಿನ ಉದ್ದಕ್ಕೂ ಕಂಡು ಬರುತ್ತವೆ. ಈ ಕಾರಣದಿಂದ, ಈ ರಾಜ್ಯವು ಹಲವಾರು ಭಾರತೀಯ ಹಾಗೂ ವಿದೇಶಿಯ ವಿದ್ವಾಂಸರುಗಳ ಗಮನವನ್ನು ತನ್ನೆಡೆಗೆ ಸೆಳೆಯುತ್ತಾ, ಅವರಲ್ಲಿ ಆಸಕ್ತಿಯನ್ನು ಕೆರಳಿಸುತ್ತಾ ಬಂದಿದೆ ಅಷ್ಟೆ ಅಲ್ಲದೇ ಭಾರತೀಯ ಕಲಾ ಪರಂಪರೆಯಲ್ಲಿ ಕಂಡುಬರುವ ನಾಗರ, ದ್ರಾವಿಡ ಮತ್ತು ವೇಸರ ಎಂಬ ಮೂರು ಕಲಾಶೈಲಿಗಳ ಲಕ್ಷಣಗಳನ್ನೊಂದಿ ನಿರ್ಮಾಣಗೊಂಡಿರುವ ದೇವಾಲಯಗಳು ಒಂದೆಡೆ ಕಂಡುಬರುವುದು ಕರ್ನಾಟಕದಲ್ಲಿಯೇ ಎಂಬುದು ಗಮನಾರ್ಹವಾದುದಾಗಿದೆ.[೨೨] ಕರ್ನಾಟಕದಲ್ಲಿ ಕ್ರಿ.ಶ.ದ ಆರಂಭದಲ್ಲಿ ನಿರ್ಮಾಣಗೊಂಡ ದೇವಾಲಯಗಳು ಉಳಿದಿಲ್ಲವಾದರೂ ಕ್ರಿ.ಶ.೧೫೦ರ ಕದಂಬರ ಪ್ರಾಕೃತ ಶಾಸನವು ದೇವಾಲಯಗಳು ರಚನೆಗೊಂಡಿರುವುದನ್ನು ದೃಢೀಕರಿಸುತ್ತವೆ. ಕರ್ನಾಟಕದ ಅತ್ಯಂತ ಪ್ರಾಚೀನ ದೇವಾಲಯವೆನಿಸಿರುವ ಕ್ರಿ.ಶ.೪೫೦ರ ತಾಳಗುಂದದ ದೇವಾಲಯವು ತನ್ನ ಮೂಲ ಸ್ವರೂಪವನ್ನು ಕಳೆದುಕೊಂಡಿರುವುದರಿಂದ ದೇವಾಲಯವಿತ್ತೆಂದು ದಾಖಲೆಯಾಗಿ ಉಳಿಯುತ್ತದೆ.[೨೩] ಇದು ದೇವಾಲಯದ ಸ್ವರೂಪದ ಬಗ್ಗೆ ಮಾಹಿತಿ ನೀಡುವುದಿಲ್ಲ. ಆದ್ದರಿಂದ ದೇವಾಲಯಗಳ ಉಗಮ ಮತ್ತು ವಿಕಾಸವನ್ನು ಗುರುತಿಸುವ ಸಲುವಾಗಿ ಬಾದಾಮಿ, ಐಹೊಳೆ, ಪಟ್ಟದಕಲ್ಲು ಹಾಗೂ ಮಹಾಕೂಟಗಳಲ್ಲಿರುವ ದೇವಾಲಯಗಳ ರಚನೆಯನ್ನು ಪರಿಶೀಲೀಸಬೇಕು. ಕನಿಷ್ಠ ಅವಶ್ಯಕತೆಯೊಡನೆ ನಿಂತಿರುವ ಹಲವಾರು ದೇವಾಲಯಗಳ ರಚನೆಗಳನ್ನು ಐಹೊಳೆಯ ಪರಿಸರದಲ್ಲಿ, ಮಹಾಕೂಟೇಶ್ವರ ದೇವಾಲಯದ ಆವರಣದಲ್ಲಿ, ಬಾದಾಮಿಯ ಭೂತನಾಥ ಗುಡಿಯ ಸಮೂಹಗಳಲ್ಲಿ ಕಾಣಬಹುದಾಗಿದೆ.[೨೪] ಐಹೊಳೆಯಲ್ಲಿರುವ ದೇವಾಲಯಗಳ ಸಮೂಹವನ್ನು ಈಗಾಗಲೇ ವಿದ್ವಾಂಸರು "ದೇವಾಲಯಗಳ ತೊಟ್ಟಿಲು" ಎಂದು ಹೆಸರಿಸಿದ್ದಾರೆ. ಇಲ್ಲಿರುವ ಪ್ರಾಚೀನ ದೇವಾಲಯಗಳ ಕುರಿತಾಗಿ ವಿದ್ವಾಂಸರುಗಳಲ್ಲಿ ಒಮ್ಮತವಾದ ಅಭಿಪ್ರಾಯವಿಲ್ಲ. ವಿದ್ವಾಂಸರಾದ ಪರ್ಸಿಬ್ರೌನ್‌ರವರು ವಾಸ್ತು ಮೂಲವನ್ನು ಆಧರಿಸಿ ಬಾದಾಮಿಯಲ್ಲಿನ ಲಾಡ್‌ಖಾನ್ ದೇವಾಲಯವನ್ನು ಅತೀ ಪ್ರಾಚೀನ ರಚನೆಯೆಂದು ಗುರುತಿಸಿದರೆ, ಕೆ.ವಿ.ಸೌಂದರ್ ರಾಜನ್‌ರವರು ಐಹೊಳೆಯ ಜ್ಯೋತಿರ್ಲಿಂಗ ಗುಡಿಯ ನಾಲ್ಕು ಸ್ತಂಭಗಳ ರಚನೆಯನ್ನು ದೇವಾಲಯದ ಮೂಲ ಎಂದು ವಿವರಿಸಿದರು.[೨೫] ಉತ್ತರ ಭಾರತದಲ್ಲಿ ಗುಪ್ತರ ಪೋಷಣೆಯಲ್ಲಿ ದೇವಾಲಯಗಳ ನಿರ್ಮಾಣಕಾರ್ಯ ನಡೆಯುತ್ತಿರುವ ಕಾಲದಲ್ಲಿಯೇ ದಕ್ಷಿಣಭಾರತದಲ್ಲಿ ಒಂದು ಹೊಸ ಪರಂಪರೆ ಆರಂಭವಾಯಿತು. ಬಾದಾಮಿ ಚಾಲುಕ್ಯರ ನೇತೃತ್ವದಲ್ಲಿ ಕರ್ನಾಟಕ ಮುನ್ನೆಡೆಯ ಕೇಂದ್ರವಾಯಿತು.[೨೬]

ಹೀಗೆ ದೇವಾಲಯಗಳ ನಿರ್ಮಾಣ ಒಂದು ರಾಜಮನೆತನದಿಂದ ಮತ್ತೊಂದು ರಾಜಮನೆತನಕ್ಕೆ ಬೆಳೆದು ಬಂದಿತು.

**ದೇವಾಲಯಗಳು**

ಭಾರತೀಯ ಸಂಸ್ಕೃತಿಯನ್ನು ಅರಿಯುವಲ್ಲಿ ದೇವಾಲಯಗಳ ಪಾತ್ರ ಅತ್ಯಂತ ಪ್ರಮುಖವಾದುದಾಗಿದೆ. ದೇವಾಲಯಗಳನ್ನು ಧಾರ್ಮಿಕ ಉದ್ದೇಶದಿಂದಲೇ ನಿರ್ಮಿಸಿದರೂ ಸಹ, ದೇವಾಲಯಗಳ ನಿರ್ಮಾಣದಿಂದ ತಮಗೂ ಹಾಗೂ ತಮ್ಮ ವಂಶದವರಿಗೂ ಮೋಕ್ಷ ಪ್ರಾಪ್ತಿಯಾಗುತ್ತದೆಂಬ ನಂಬಿಕೆ ಪ್ರಾಚೀನ ಕಾಲದಿಂದಲೂ ಭಾರತೀಯರಿಗಿತ್ತು. ಈ ಹಿನ್ನೆಲೆಯಲ್ಲಿ ನಾಡಿನಾದ್ಯಂತ ಅನೇಕ ರಾಜ-ರಾಣಿಯರು, ಸಾಮಂತ-ಆಡಳಿತಾಧಿಕಾರಿಗಳು ಹಾಗೂ ಶ್ರೀಸಾಮಾನ್ಯರು ದೇವಾಲಯಗಳನ್ನು ನಿರ್ಮಿಸಿರುವುದು ಕಂಡುಬರುತ್ತದೆ. ಈ ನಿಟ್ಟಿನಲ್ಲಿ ಮೊಳಕಾಲ್ಮೂರು ಪಟ್ಟಣದಲ್ಲಿ ಹೇಳಿಕೊಳ್ಳುವಷ್ಟರ ಮಟ್ಟಿಗೆ ಉನ್ನತ ಮಟ್ಟದ ಕಲೆ-ವಾಸ್ತು ಶಿಲ್ಪವನ್ನೊಂದಿರುವ ದೇವಾಲಯಗಳು ಕಂಡುಬರದಿದ್ದರೂ ಚಿಕ್ಕಚಿಕ್ಕ ಗುಡಿಗಳಿಗೇನು ಕಡಿಮೆಯಿಲ್ಲ. ಇಲ್ಲಿನ ಬೀದಿಗಳಲ್ಲಿಯೂ ವಿವಿಧ ಧಾರ್ಮಿಕ ಪರಂಪರೆಯ ಗುಡಿಗಳು ನಿರ್ಮಾಣಗೊಂಡಿರುವುದು ಕಂಡುಬಂದಿವೆ. ಅಧ್ಯಯನದ ಹಿತ ದೃಷ್ಟಿಯಿಂದ ಇಲ್ಲಿನ ದೇವಾಲಯಗಳನ್ನು ಶೈವ, ವೈಷ್ಣವ ಮತ್ತು ಶಾಕ್ತೇಯ ದೇವಾಲಯಗಳೆಂಬ ವಿಧಗಳಾಗಿ ಅಧ್ಯಯನಿಸಲಾಗಿದೆ.

**ಶೈವ ದೇವಾಲಯಗಳು** 

ಭಾರತೀಯ ಇತಿಹಾಸದಲ್ಲಿ ಶೈವ ಧರ್ಮಕ್ಕೆ ಅತ್ಯಂತ ಪ್ರಾಚೀನ ಇತಿಹಾಸವಿದೆ. ಹೆಸರೇ ಹೇಳುವಂತೆ ಈ ಧರ್ಮದ ಪ್ರಮುಖ ದೇವರು ಶಿವ. ಈತನನ್ನು ಆರಾಧಿಸಲು ನಿರ್ಮಿತಗೊಂಡಿರುವ ಶಿವಾಲಯಗಳೇ ಶೈವ ದೇವಾಲಯಗಳು. ಹರಪ್ಪಾ ಸಂಸ್ಕೃತಿಯ ನೆಲೆಗಳಲ್ಲಿ ದೊರೆತ ಪಶುಪತಿ ಶಿವನ ಮುದ್ರೆಗಳಿಂದ ಭಾರತದಲ್ಲಿ ಕ್ರಿ.ಪೂ.೨೫೦೦ ವರ್ಷಗಳ ಹಿಂದೆಯೇ ಶಿವಾರಾಧನೆ ಪ್ರಚಲಿತದಲ್ಲಿತ್ತೆಂದು ಹೇಳಬಹುದು. ಕರ್ನಾಟಕದ ಮಟ್ಟಿಗೆ ನೋಡುವುದಾದರೆ ಶಾತವಾಹನ-ಕದಂಬರ ಕಾಲಕ್ಕಾಗಲೇ ಶೈವಧರ್ಮವಿದ್ದುದಕ್ಕೆ ಸ್ಪಷ್ಟ ಆಧಾರಗಳಿವೆ. ಬಾದಾಮಿ, ಐಹೊಳೆಗಳಲ್ಲಿರುವ ಗುಹಾಂತರ ದೇವಾಲಯಗಳಿಂದ ಕರ್ನಾಟಕದಲ್ಲಿ ಬಾದಾಮಿ ಚಾಲುಕ್ಯರ ಕಾಲಕ್ಕಾಗಲೇ ಶೈವ ಧರ್ಮದ ಪರಂಪರೆ ಉಚ್ಛ್ರಾಯ ಸ್ಥಿತಿಯನ್ನು ತಲುಪಿತ್ತು. ನಂತರ ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ಹೊಯ್ಸಳ, ವಿಜಯನಗರ ಎಂಬ ಮುಂತಾದ ಅರಸು ಮನೆತನದವರ ಪ್ರೋತ್ಸಾಹದಿಂದ ಪ್ರಮುಖ ಧರ್ಮವಾಗಿ ಬೆಳೆದು ನಾಡಿನಾದ್ಯಂತ ಹಲವಾರು ಶೈವ ದೇವಾಲಯಗಳು ನಿರ್ಮಾಣವಾದವು.[೨೭] ಈ ನಿಟ್ಟಿನಲ್ಲಿ ಪಟ್ಟಣದಲ್ಲಿ ನಿರ್ಮಾಣಗೊಂಡಂತಹ ಶೈವ ಪರಂಪರೆಯ ಪ್ರಮುಖ ದೇವಾಲಯಗಳ ವಿವರ ಈ ಕೆಳಗಿನಂತಿದೆ.

ಅಧ್ಯಯನ ಪ್ರದೇಶದಲ್ಲಿ ನೋಡುಗರ ಮನಸನ್ನು ಆಕರ್ಷಿಸುವಂತಹ ವಾಸ್ತುಶಿಲ್ಪವನ್ನು ಹೊಂದಿರುವ, ಶೈವ ಪರಂಪರೆಯಲ್ಲಿ ಬೆಳೆದು ಬಂದಂತಹ ದೇವಾಲಯಗಳು ಕಂಡು ಬರದಿದ್ದರೂ, ಚಿಕ್ಕ ಚಿಕ್ಕ ಗುಡಿಗಳಿಗೇನೂ ಬರವಿಲ್ಲವೆಂಬಂತೆ ಇಲ್ಲಿ ಹಲವಾರು ಗುಡಿಗಳು ಕಂಡು ಬಂದಿವೆ. ವಿಜಯನಗರೋತ್ತರ ಕಾಲದ ಬೆರಳೆಣಿಕೆಯ ದೇವಾಲಯಗಳನ್ನು ಹೊರತು ಪಡಿಸಿದರೆ, ಉಳಿದಂತಿರುವ ದೇವಾಲಯಗಳೆಲ್ಲವೂ ೨೦ನೇ ಶತಮಾನದಲ್ಲಿ ನಿರ್ಮಾಣಗೊಂಡಿವೆ. ಇಲ್ಲಿ ಶೈವ ದೇವಾಲಯಗಳಿಗೆ ಸಂಬಂಧಿಸಿದಂತೆ ಹೆಚ್ಚಾಗಿ ಶಿವಾಲಯಗಳೇ ಕಂಡು ಬಂದಿವೆ. ಇಲ್ಲಿನ ಪ್ರಮುಖ ಶೈವ ದೇವಾಲಯಗಳೆಂದರೇ

**ಹಿರೇಮಠ**

ಮೊಳಕಾಲ್ಮೂರುವಿನ ಶೈವ ದೇವಾಲಯಗಳಿಗೆ ಸಂಬಂಧಿಸಿ ನೋಡಿದರೆ ಅಲ್ಲಿನ ಹಿರೇಮಠವು ಪ್ರಮುಖವಾಗಿದೆ. ಇದು ಊರಿನಿಂದ ಉತ್ತರ ದಿಕ್ಕಿನಲ್ಲಿರುವ ಧವಳಪ್ಪನ ಬೀದಿಯಲ್ಲಿದೆ. ಈ ಬೀದಿಯ ಉತ್ತರಕ್ಕಿರುವ ಬೆಟ್ಟ ಸಾಲಿನ ಸಮೀಪದಲ್ಲಿರುವ ಇದರ ಪ್ರವೇಶ ದ್ವಾರ ದಕ್ಷಿಣಾಭಿಮುಖ ವಾಗಿದ್ದು, ಇಲ್ಲಿನ ಕಪೋತದ ಭಾಗದಲ್ಲಿ ನಂದಿಯ ಗಾರೆಶಿಲ್ಪವಿದೆ. ಸರಳ ವಾಸ್ತು ಶೈಲಿಯಲ್ಲಿ ನಿರ್ಮಾಣಗೊಂಡಿರುವ ಮಠವು ವಿಜಯನಗರೋತ್ತರ ಕಾಲದಲ್ಲಿ ನಿರ್ಮಾಣಗೊಂಡಿದೆ. ಸುತ್ತಲೂ ಪ್ರಾಕಾರದ ಗೋಡೆಯನ್ನು ಹೊಂದಿ, ವಿಶಾಲವಾದ ಪ್ರಾಂಗಣದ ಮಧ್ಯದಲ್ಲಿ ನಿರ್ಮಿತಗೊಂಡಿರುವ ಇದರ ಮುಖ್ಯದ್ವಾರ ಪೂರ್ವಾಭಿಮುಖವಾಗಿದೆ. ಇದು ಗರ್ಭಗೃಹ, ತೆರೆದ ಸಭಾಮಂಟಪದ ಹಾಗೂ ಮುಖಮಂಟಪವನ್ನು ಒಳಗೊಂಡಿದೆ. ವಿಶಾಲವಾದ ಇಲ್ಲಿನ ಗರ್ಭಗುಡಿಯ ಮಧ್ಯದಲ್ಲಿ ಮುಖ್ಯದ್ವಾರಕ್ಕೆ ಎದುರಾಗಿ ಚಿಕ್ಕದಾದ ಗಣೇಶನ ಮೂರ್ತಿ, ಹಿರೇಮಠರ ಮರದ ಪಾದರಕ್ಷೆಗಳು, ಆಯುಧೋಪಕರಣಗಳು. ಮತ್ತು ಮಡಿಕೆಯ ಬೊಗಣಿಗೆಳೆಂಬ ಮುಂತಾದ ಪೂಜಾ ಸಾಮಾಗ್ರಿಗಳಿವೆ. ಅಲ್ಲದೇ ಗರ್ಭಗೃಹದಲ್ಲಿ ಸರಳತೆಯಿಂದ ಕೂಡಿದ ನಾಲ್ಕು ಕಂಬಗಳಿದ್ದು. ಅದರ ಬೋದಿಗೆಗಳು ಗರ್ಭಗುಡಿಯನ್ನು ಹೊತ್ತಂತಿವೆ. ಗರ್ಭಗುಡಿಯ ಮುಂಭಾಗದ ಸಭಾಮಂಟಪವು ಸು.೩ ಅಡಿ ಎತ್ತರದ ಅಧಿಷ್ಠಾನದ ಮೇಲೆ ನಿರ್ಮಿತಗೊಂಡಿದ್ದು, ಆರು ಕಂಬಗಳಿಂದ ಕೂಡಿದೆ. ಇವುಗಳು ಬಹು ಸರಳತೆಯಿಂದ ಕೂಡಿವೆ. ಸಭಾಮಂಟಪವನ್ನು ಹತ್ತಲು ಇದರ ಮುಂದೆ ಮೂರು ಕಲ್ಲಿನ ಸೋಪಾನಗಳಿವೆ. ತೆರೆದ ಸಭಾಮಂಟಪದ ಮುಂಭಾಗದ ಮುಖಮಂಟಪದ ಮೇಲ್ಛಾವಣಿಯಲ್ಲಿ ಸರಳವಾದ ವಾಸ್ತುವನ್ನೊಳಗೊಂಡ ದೇವಕೋಷ್ಠಕಗಳಿದ್ದು ಅವುಗಳಲ್ಲಿ ಶಿವನ ನಾನಾ ಲೀಲೆಗಳನ್ನು ಒಳಗೊಂಡಂತಹ ಹಲವಾರು ಗಾರೆಶಿಲ್ಪಗಳಿವೆ. ಈ ಮುಖಮಂಟಪದಲ್ಲಿ ನೆಲಮಟ್ಟದಿಂದ ರಚಿತಗೊಂಡಂತಹ ಎರಡು ಕಂಬಗಳು ಹಾಗೂ ಎರಡು ಅರೆಗಂಬಗಳು ಕಂಡುಬರುತ್ತದೆ. ಇಲ್ಲಿನ ಅರೆಗಂಭಗಳ ಕೆಳಭಾಗದಲ್ಲಿ ನಂದಿ ಮತ್ತು ಆನೆಯ ಚಿತ್ರಗಳ ಕೆತ್ತನೆಯಿದ್ದರೆ ನಡುವಿನ ಎರಡು ಕಂಬಗಳ ಕೆಳಭಾಗದಲ್ಲಿ ಪದ್ಮ, ಶಿವಲಿಂಗ, ಹುಲಿ, ಮಿಥುನಶಿಲ್ಪಗಳೆಂಬ ಸರಳ ಕೆತ್ತನೆಗಳನ್ನು ಕಾಣುತ್ತೇವೆ. ಈ ಮುಖಮಂಟಪದ ಬಲಬದಿಯ ಪಾರ್ಶ್ವದಲ್ಲಿ ಸು.೪ ಅಡಿ ಎತ್ತರದ

ಕಮಾನಿನಾಕಾರದ ಸಣ್ಣ ದ್ವಾರವೊಂದರ ರಚನೆಯಿದೆ. ಈ ದ್ವಾರವು ಮಠದ ಪ್ರವೇಶ ದ್ವಾರಕ್ಕೆ ಎದುರಾಗಿದೆ. ಸಂಪೂರ್ಣವಾಗಿ ಸ್ಥಳೀಯ ಕಲ್ಲು ಬಂಡೆಗಳಿಂದ ನಿರ್ಮಿತಗೊಂಡಿರುವ ಇದರ ಭಿತ್ತಿಯ ಮೇಲ್ಭಾಗದಲ್ಲಿ ಸುತ್ತಲೂ ಹಾಸಿದ ಕಂಬದ ಅಡ್ಡತೊಲೆಗಳಲ್ಲಿ ಹಲವಾರು ಮಿಥುನ ಶಿಲ್ಪಗಳಿದ್ದು, ಅವುಗಳು ಸರಳತೆಯಿಂದ ಕೂಡಿವೆ. ವಿಶಾಲವಾದ ಪ್ರಾಂಗಣದಲ್ಲಿ ಹಿರೇಮಠರ ಗದ್ದುಗೆ, ಬಾವಿ ಮತ್ತು ವೀರಗಲ್ಲು ಎಂಬ ಮೊದಲಾದ ಸ್ಮಾರಕಗಳಿವೆ. ವಿಜಯನಗರೋತ್ತರ ಕಾಲದಲ್ಲಿ ನಿರ್ಮಿತಗೊಂಡಿರುವ ಇದರ ಮೇಲ್ಛಾವಣಿಯನ್ನು ಸಂಪೂರ್ಣವಾಗಿ ಸ್ಥಳೀಯ ಕಲ್ಲು-ಬಂಡೆಗಳಿಂದ ಮುಚ್ಚಲಾಗಿದೆ. ಪ್ರಸ್ತುತ ಉಮಾಪತಿ ಐಯ್ಯನೋರರವರ ಮನೆತನದ ಅಧೀನದಲ್ಲಿರುವ ಇದು ಸುಸ್ಥಿತಿಯಲ್ಲಿದೆ.

### ಬೆಟ್ಟದ ಮೇಲಿನ ಈಶ್ವರ ಗುಡಿ

ಕೋಟೆ ಬಡಾವಣೆಯಿಂದ ಉತ್ತರಕ್ಕಿರುವ ಬೆಟ್ಟಕ್ಕೆ ಹೋಗುವ ದಾರಿಯಲ್ಲಿ ಭೂ ಮಟ್ಟದಿಂದ ಸು.೩೦ ಅಡಿ ಎತ್ತರದಲ್ಲಿರುವ ಒಂದು ಸಮತಟ್ಟಾದ ಸ್ಥಳದಲ್ಲಿ ಈ ಶಿವಾಲಯವನ್ನು ನಿರ್ಮಿಸಲಾಗಿದೆ. ತೀರಾ ಶಿಥಿಲಗೊಂಡು ಮುಳ್ಳುಗಂಟೆಗಳಲ್ಲಿ ಮುಚ್ಚಿ ಹೋಗಿದ್ದ ಈ ಶಿವಾಲಯವಿರುವ ಸ್ಥಳವನ್ನು ಇಲ್ಲಿನ ಸ್ವಕುಳಸಾಳಿ ಜನಾಂಗದ ಘಟಕಾರಿ ವಂಶದ ದೊಡ್ಡ ನರಸಿಂಗಪ್ಪನವರು ಶುಚಿಗೊಳಿಸಿ ಕಲ್ಲಿನ ಕಟ್ಟಡದಿಂದ ಪುನರ್ ನಿರ್ಮಾಣಗೊಳಿಸಿದರೆಂದು ತಿಳಿಯುತ್ತದೆ. ಈ ದೇವಾಲಯವು ಬೆಟ್ಟದ ಮೇಲಿರುವ ಕಾರಣದಿಂದ ಮೇಲಿನ ಈಶ್ವರ, ಬೆಟ್ಟದ ಮೇಲಿನ ಈಶ್ವರ, ಬಂಡೆ ಮೇಲಿನ ಈಶ್ವರ ಎಂಬ ಹಲವಾರು ಹೆಸರುಗಳಿಂದ ಗುರುತಿಸಿಕೊಂಡಿದೆ. ಚಿಕ್ಕ ಗುಡಿಯಾಗಿದ್ದ ಈ ದೇವಾಲಯವು ಗರ್ಭಗೃಹ ಮತ್ತು ಸಭಾಮಂಟಪವನ್ನು ಒಳಗೊಂಡಿದೆ. ಇಲ್ಲಿನ ಗರ್ಭಗೃಹದಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಿದ್ದಾರೆ. ಈ ಗರ್ಭಗುಡಿಯ ಪ್ರವೇಶದ್ವಾರದ ಲಲಾಟದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದ್ದು, ಇದರ ಬಾಗಿಲು ವಾಡಗಳ ಎರಡೂ ಬದಿಯಲ್ಲಿ ಬೂ ಬಳ್ಳಿಗಳ ಸರಳ ಕೆತ್ತನೆಯಿದೆ. ಗರ್ಭಗುಡಿಯ ಮುಂಭಾಗದ ಸಭಾಮಂಟಪದಲ್ಲಿ ಶಿವಲಿಂಗಕ್ಕೆ ಮುಖ ಮಾಡಿರುವ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಹಾಗೆಯೇ ಇಲ್ಲಿನ ಒಳಭಾಗದ ಭಿತ್ತಿಯಲ್ಲಿ ಕೋಷ್ಠಕಗಳ ರಚನೆ ಕಂಡು ಬರುತ್ತದೆ. ಸಭಾಮಂಟಪದೊಳಗೆ ಎಡಭಾಗದಲ್ಲಿ ಚಿಕ್ಕದಾದ ಗಣೇಶ ಮತ್ತು ಶಿವಲಿಂಗವಿದ್ದರೆ, ಬಲಭಾಗದಲ್ಲಿ ಸರ್ಪದ ಶಿಲ್ಪಗಳಿವೆ. ಸಭಾಮಂಟಪದ ಮುಂಭಾಗದಲ್ಲಿ ೩ ಅಡಿ ಎತ್ತರದ ದೀಪಸ್ತಂಭವಿದೆ. ಈ ದೇವಾಲಯದ ಬಲಗಡೆಯಲ್ಲಿ ಮಂಟಪದ ರಚನೆಯ ಜೊತೆಗೆ ಪ್ರವೇಶದ್ವಾರವನ್ನೊಳಗೊಂಡ ಪ್ರಕಾರದ ಗೋಡೆಯ ರಚನೆಯಿದೆ. ಈ ದೇವಾಲಯದ ಹೊರಭಾಗದ ಭಿತ್ತಿಯ ಎಡಭಾಗದಲ್ಲಿ ಆಮೆ, ಮೀನು, ಬಲಭಾಗದಲ್ಲಿ- ನಂದಿ, ಶಿವಲಿಂಗ ಮತ್ತು ಹಿಂಬಾಗದಲ್ಲಿ ಮೀನು, ಆನೆ ಹಾಗೂ ಸರ್ಪಗಳ ಉಬ್ಬು ಶಿಲ್ಪಗಳು ಕಂಡು ಬರುತ್ತವೆ. ಪೂರ್ವಾಭಿಮುಖವಾಗಿರುವ ಈ ದೇವಾಲಯವನ್ನು ಇತ್ತೀಚಿನ ಐದಾರು ವರ್ಷಗಳ ಹಿಂದೆ

ಮತ್ತೊಮ್ಮೆ ಪುನರುಜ್ಜೀವನಗೊಳಿಸಿ ಗರ್ಭಗುಡಿಯ ಮೇಲೆ ಗೋಪುರ ಮತ್ತು ದೇವಾಲಯಕ್ಕೆ ಹತ್ತಿ ಹೋಗಲು ಕೆಳಗಿನಿಂದ ಮೇಲಕ್ಕೆ ಕಲ್ಲಿನ ಸೋಪಾನಗಳನ್ನು ನಿರ್ಮಾಣಮಾಡಿದ್ದಾರೆ.

**ಕೆಳಗಿನ ಈಶ್ವರ ಗುಡಿ**

ಕೆಳಗಿನ ಈಶ್ವರ ಗುಡಿಯು ಕೋಟೆ ಬಡಾವಣೆಯಿಂದ ವೆಂಕಟರಮಣದೇವಾಲಯಕ್ಕೆ ಹೋಗುವ ಮಾರ್ಗದಲ್ಲಿದೆ. ಬೆಟ್ಟದ ಕೆಳಗೆ ಇರುವ ಕಾರಣದಿಂದ ಇದನ್ನು ಕೆಳಗಿನ ಈಶ್ವರ ಎಂದು ಕರೆಯುತ್ತಾರೆ. ಉತ್ತರಾಭಿಮುಖವಾಗಿರುವ ಈ ಶಿವಾಲಯವನ್ನು ಮೊದಲು ಇಲ್ಲಿ ಸ್ವಕುಳಸಾಳಿ ಸಮಾಜದ ಶ್ರೀ ಇರುವೆ ಬೀಮಣ್ಣನವರು ಪುನಃಶ್ಚೇತನಗೊಳಿಸಿದ್ದರು. ತದನಂತರದಲ್ಲಿಯೂ ಶಿಥಿಲಗೊಳ್ಳುವ ಹಂತದಲ್ಲಿದ್ದಾಗ ಒಂದೆರಡು ವರ್ಷಗಳ ಕೆಳಗೆ ಮತ್ತೊಮ್ಮೆ ಈ ದೇವಾಲಯವನ್ನು ಸ್ವಕುಳಸಾಳಿ ಸಮಾಜ ಪುನರ್ರಜ್ಜೀವನಗೊಳಿಸಿದೆ. ಹೀಗಾಗಿ ಈಗಿರುವ ಪ್ರಸ್ತುತ ದೇವಾಲಯವು ಗರ್ಭಗುಡಿ ಮತ್ತು ಸಭಾಮಂಟಪನ್ನು ಒಳಗೊಂಡಿದ್ದು, ಇಲ್ಲಿನ ಗರ್ಭಗುಡಿಯಲ್ಲಿ ಸು.೨x೨ ಅಡಿ ಉದ್ದಗಲದ ವಿಸ್ತೀರ್ಣ ಹೊಂದಿರುವ ಎತ್ತರದ ಕಟ್ಟೆಯನ್ನು ನಿರ್ಮಿಸಿ ಅದರ ಮೇಲೆ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಹಾಗೆಯೇ ಗರ್ಭಗುಡಿಯ ಪ್ರವೇಶದ್ವಾರದ ಬಲಭಾಗದಲ್ಲಿ ಪ್ರಭಾವಳಿಯನ್ನು ಹೊಂದಿದ ಬಲಮುರಿಗಣೇಶ ಶಿಲ್ಪವನ್ನು ಎಡಭಾಗದಲ್ಲಿ ಮಯಾರದ ಮೇಲೆ ಆಸಿನಭಂಗಿಯಲ್ಲಿದ್ದು ಅಭಯಹಸ್ತವನ್ನು ನೀಡುತ್ತಿರುವ ಶ್ರೀ ಸುಬ್ರಹ್ಮಣ್ಯನ ಶಿಲ್ಪ ಹಾಗೂ ನಾಗರಶಿಲ್ಪವನ್ನು ಒಳಗೊಂಡಂತೆ ಮಧ್ಯದಲ್ಲಿ ಶಿವಲಿಂಗನಿಗೆ ಮುಖಮಾಡಿ ಸುಮಾರು ಒಂದೂವರೆ ಅಡಿ ಉದ್ದಗಲದ ಕಟ್ಟೆಯ ಮೇಲೆ ನಂದಿಯನ್ನೊಳಗೊಂಡಿರುವ ಸಭಾಮಂಟಪವಿದೆ. ಅಲ್ಲದೇ ಪ್ರಸ್ತುತದಲ್ಲಿ ಈ ದೇವಾಲಯದ ಸುತ್ತಲೂ ಉತ್ತರ ಮತ್ತು ಪಶ್ಚಿಮಕ್ಕೆ ಪ್ರವೇಶದ್ವಾರಗಳನ್ನು ಹೊಂದಿರುವಂತೆ ಪ್ರಾಕಾರಗೋಡೆಯನ್ನು ನಿರ್ಮಿಸಿರುವುದು ಕಂಡು ಬರುತ್ತದೆ.

**ಬಸವಣ್ಣನ ಗುಡಿ**

ಬಸವಣ್ಣನ ಗುಡಿಯು ಊರಿನಿಂದ ವಾಯುವ್ಯ ದಿಕ್ಕಿನಲ್ಲಿರುವ ಕಲ್ಗೋಡ್ ಮೊಹಲ್ಲಾದಲ್ಲಿದೆ. ಪೂರ್ವಾಭಿಮುಖವಾಗಿರುವ ಈ ದೇವಾಲಯವು ವಿಜಯನಗರೋತ್ತರ ಕಾಲದಲ್ಲಿ ನಿರ್ಮಾಣಗೊಂಡಿದೆ. ಈ ದೇವಾಲಯವನ್ನು ಇಲ್ಲಿನ ಸ್ಥಳೀಯರು ಹಿರಣ್ಯೇಶ್ವರ ದೇವಾಲಯ ಎಂತಲೂ ಕರೆಯುವರು. ಈ ದೇವಾಲಯವು ಮಹಾದ್ವಾರ, ಪ್ರದಕ್ಷಿಣಾ ಪ್ರಕಾರವುಳ್ಳ ಮುಖಮಂಟಪ ಮತ್ತು ಗರ್ಭಗುಡಿಯನ್ನು ಒಳಗೊಂಡಿದೆ. ಇಲ್ಲಿನ ಗರ್ಭಗೃಹದಲ್ಲಿ ಸುಮಾರು ಎರಡು ಅಡಿ ಎತ್ತರದ ಪಾಣಿಪೀಠದ ಮೇಲೆ ಸು. ೫ ಅಡಿ ಎತ್ತರದ ಪಾಚಿವರ್ಣದ ನಾಮಧಾರಿ ಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಸಾಮಾನ್ಯವಾಗಿ ಶಿವಲಿಂಗಗಳು ಕಪ್ಪನೆಯ ಶಿಲೆಗಳಲ್ಲಿ ಕೆತ್ತುತ್ತಿದ್ದು, ಮಧ್ಯದಲ್ಲಿ ಅಡ್ಡಗೆರೆಗಳು ಕಂಡು ಬರುತ್ತವೆ. ಆದರೆ ಈ ಶಿವಲಿಂಗವು ಪಾಚಿವರ್ಣದಲ್ಲಿದ್ದು ಮಧ್ಯದಲ್ಲಿ ಉದ್ದನೆಯ ಗೆರೆಗಳು ಕಂಡುಬರುತ್ತವೆ. ಗರ್ಭಗೃಹದ ಬಾಗಿಲಿನ ಲಲಾಟದಲ್ಲಿ ಗಜಲಕ್ಷ್ಮೀಯ

ಉಬ್ಬುಶಿಲ್ಪದ ಕೆತ್ತನೆಯಿದ್ದು, ಇಲ್ಲಿನ ಬಾಗಿಲು ವಾಡದಲ್ಲಿ ಸರಳತೆಯ ಕೆತ್ತನೆಯಿಂದ ಕೂಡಿದ ಹೂಬಳ್ಳಿಗಳ ಚಿತ್ರಣಗಳಿವೆ. ೧೨ ಕಲ್ಲಿನ ಕಂಬಗಳ ಆಧಾರದ ಮೇಲೆ ರಚಿತಗೊಂಡಂತ ಗರ್ಭಗುಡಿಯ ಮುಂಭಾಗದ ಮುಖಮಂಟಪದಲ್ಲಿ ಲಿಂಗಕ್ಕೆ ಅಭಿಮುಖವಾಗಿ ಕೊರಳಿನಲ್ಲಿ ಗಂಟೆಯಸರ, ಕಿವಿಯಾಭರಣ, ಬಲಗಡೆಯ ಪಾದವನ್ನು ಒಳಗೆ ಹಾಕಿಕೊಂಡು ಮುಂದಿನ ಕಾಲುಗಳನ್ನು ಮಡಚಿಕೊಂಡಿರುವ ಬಳಪದ ಕಲ್ಲಿನಿಂದ ರಚಿಸಿರುವ ನಂದಿಯ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ಸುತ್ತಲೂ ಎತ್ತರದ ಪ್ರಾಕಾರಗೋಡೆನ್ನೊಂದಿರುವ ಈ ದೇವಾಲಯದ ಮುಖಮಂಟಪದ ಮುಂಭಾಗದಲ್ಲಿ ಮಹಾದ್ವಾರ, ಪ್ರವೇಶದ್ವಾರವನ್ನು ಒಳಗೊಂಡಿದ್ದು, ಅದರ ಮೇಲ್ಭಾಗದ ಕಪೋತದ ಭಾಗದಲ್ಲಿ ನಂದಿ, ಶಿವಲಿಂಗದ ಕೆತ್ತನೆಯಿರುವುದು ಕಂಡು ಬಂದಿದೆ. ಅಷ್ಟೇ ಅಲ್ಲದೇ ಪೂರ್ವಾಭಿಮುಖವಾಗಿರುವ ಇಲ್ಲಿನ ಮಹಾದ್ವಾರದ ಮುಂಭಾಗದಲ್ಲಿ ಸು.೧೦ ಅಡಿ ಎತ್ತರದ ದೀಪಸ್ತಂಭವೊಂದನ್ನು ಸಹ ನೆಡಲಾಗಿದೆ. ಈ ದೇವಾಲಯದ ಮೇಲ್ಭಾಗವು ಸಂಪೂರ್ಣವಾಗಿ ಸ್ಥಳೀಯ ಕಲ್ಲು ಬಂಡೆಗಳಿಂದ ಮುಚ್ಚಲ್ಪಟ್ಟಿದೆ. ಒಟ್ಟಾರೆಯಾಗಿ ಈ ದೇವಾಲಯದ ಸ್ಥಿತಿಯು ಸುಸ್ಥಿತಿಯಲ್ಲಿದೆ ಎಂದು ಹೇಳಲಾಗಿದೆ.

**ಎನ್.ಎಂ.ಎಸ್. ಬಡಾವಣೆಯ ಈಶ್ವರ ಗುಡಿ**

ಊರಿನಿಂದ ಆಗ್ನೇಯ ಬಾಗದಲ್ಲಿರುವ ಎನ್.ಎಂ.ಎಸ್ ಬಡಾವಣೆಯಲ್ಲಿರುವ ಈ ದೇವಾಲಯವು ದಕ್ಷಿಣಾಭಿಮುಖವಾಗಿದೆ. ಈ ದೇವಾಲಯದ ರಚನೆಯನ್ನು ಗಮನಿಸಿದರೆ ಇದೊಂದು ಪ್ರಾಚೀನ ದೇವಾಲಯವೆನಿಸುತ್ತದೆ. ದಕ್ಷಿಣಾಭಿಮುಖವಾಗಿರುವ ಈ ಆಲಯವು ಸಂಪೂರ್ಣವಾಗಿ ಸ್ಥಳೀಯ ಚಪ್ಪಡಿ ಕಲ್ಲು ಬಂಡೆಗಳಿಂದ ನಿರ್ಮಾಣಗೊಂಡಿದ್ದು ಗರ್ಭಗೃಹ ಮತ್ತು ತೆರೆದ ಸಭಾಮಂಟಪವನ್ನು ಒಳಗೊಂಡಿದೆ. ಗರ್ಭಗೃಹದಲ್ಲಿ ಲಿಂಗ, ವೀರಭದ್ರ, ನಂದಿಯ ಶಿಲ್ಪಗಳೆಂಬ ಹಲವಾರು ಚಿಕ್ಕ ಚಿಕ್ಕ ಶಿಲ್ಪಗಳಿವೆ. ಗರ್ಭಗೃಹದ ಬಾಗಿಲಿನ ಮುಂಭಾಗದ ತೆರೆದ ಸಬಾಮಂಟಪದಲ್ಲಿ ನಾಲ್ಕು ಒರಟಾದ ಕಲ್ಲಿನ ಕಂಬಗಳು ಮತ್ತು ಸ್ಥಳೀಯ ಕಲ್ಲುಗಳಿಂದ ನಿರ್ಮಿತವಾದ ಗೋಡೆಗಳಿವೆ. ಸಬಾಮಂಟಪದ ಬಲಗಡೆಯ ಗೋಡೆಯು ಶಿಥಿಲಗೊಂಡು ಅವನತಿಯ ಸಮಯದಲ್ಲಿದ್ದಾಗ ಇಲ್ಲಿನ ಐಟಿಐ ಕಾಲೇಜಿನ ವಿದ್ಯಾರ್ಥಿಗಳಿಂದ ಮತ್ತೊಮ್ಮೆ ಜೋಡಿಸಲಾಗಿತ್ತು. ಹೀಗೆ ಸ್ಥಳೀಯ ಕಲ್ಲುಗಳಿಂದ ನಿರ್ಮಿತಗೊಂಡಿರುವ ಈ ದೇವಾಲಯದ ಮೇಲ್ಭಾವಣೆಯು ಸಂಪೂರ್ಣವಾಗಿ ಗ್ರಾನೈಟ್ ಶಿಲೆಯ ಬಂಡೆಗಳಿಂದ ಮುಚ್ಚಲ್ಪಟ್ಟಿದೆ. ಒಟ್ಟಾರೆಯಾಗಿ ಇದು ಪ್ರಸ್ತುತ ದಿನಮಾನಗಳಲ್ಲಿ ಅವನತಿಯ ಸ್ಥಿತಿಯಲ್ಲಿದೆ.

**ಗೌರಮ್ಮನಗುಡಿ/ಈಶ್ವರಗುಡಿ**

ಧವಳಪ್ಪನ ಬೀದಿಯಲ್ಲಿರುವ ಈಶ್ವರನ ಗುಡಿಯನ್ನು ಗೌರಮ್ಮನ ಗುಡಿ ಎಂದು ಕರೆಯುವರು. ಸು. ಅರವತ್ತೆಪ್ಪತ್ತು ವರ್ಷಗಳ ಹಿಂದೆ ಊರಿನ ಜನರೆಲ್ಲಾ ಸೇರಿ ಇಲ್ಲಿ ಗೌರಿ ಹಬ್ಬವನ್ನು ಮಾಡುತ್ತಿದ್ದರು.

ಇದರಿಂದಾಗಿ ಇದನ್ನು ಇಂದಿಗೂ ಗೌರಮ್ಮನ ಗುಡಿ ಎಂತಲೇ ಕರೆಯುವರು. ಸುಮಾರು ೫ ಅಡಿ ಎತ್ತರದ ಅಧಿಷ್ಠಾನದ ಮೇಲೆ ನಿರ್ಮಿತವಾಗಿರುವ ಈ ಆಲಯವು ಪಶ್ಚಿಮಾಬಿಮುಖವಾಗಿದೆ. ೨೦ನೇ ಶತಮಾನದಲ್ಲಿ ಸ್ಥಳೀಯ ಶೈಲಿಯನ್ನೊಂದಿ ನಿರ್ಮಿತಗೊಂಡಿರುವ ಈ ದೇವಾಲಯವು ಪ್ರಸ್ತುತದಲ್ಲಿ ಗರ್ಭಗೃಹ ಮತ್ತು ಸಭಾಮಂಟಪವನ್ನು ಒಳಗೊಂಡಿದೆ. ಇಲ್ಲಿನ ಗರ್ಭಗೃಹದಲ್ಲಿ ಈಶ್ವರನ ಲಿಂಗವಿದ್ದು, ಆ ಲಿಂಗಕ್ಕೆ ಅಭಿಮುಖವಾಗಿ ಸಭಾಮಂಟಪದಲ್ಲಿ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಅಲ್ಲದೇ ಇಲ್ಲಿನ ಸಭಾಮಂಟಪದಲ್ಲಿ ನಾಲ್ಕು ಕಂಬಗಳಿದ್ದು, ಅವುಗಳಲ್ಲಿ ಎರಡು ಅರೆಗಂಭಗಳಾಗಿವೆ, ಉಳಿದೆರಡು ಕಂಬಗಳು ಸ್ಥಳೀಯ ಶೈಲಿಯಲ್ಲಿ ರಚಿತಗೊಂಡಿವೆ. ಈ ಗುಡಿಯ ಮೇಲ್ಭಾಗವು ಸಂಪೂರ್ಣವಾಗಿ ಚಪ್ಪಡಿಕಲ್ಲು ಬಂಡೆಗಳಿಂದ ಮುಚ್ಚಲ್ಪಟ್ಟಿದ್ದು, ಇಡೀ ದೇವಾಲಯ ಸುಸ್ಥಿತಿಯಲ್ಲಿದೆ.

**ಮಾರ್ಕಂಡೇಯ ದೇವಾಲಯ**

ಮೊಳಕಾಲ್ಮೂರುವಿನ ಪೂರ್ವಕ್ಕಿರುವ ಪಟ್ಟಣ ಪಂಚಾಯಿತಿಯ ಕ್ರಾಸ್‌ನಿಂದ ಉತ್ತರಾಭಿಮುಖವಾಗಿ ಬೆಟ್ಟಕ್ಕೆ ಹೋಗುವ ಮಾರ್ಗದ ಎಡಬದಿಯಲ್ಲಿ ಮಾರ್ಕಂಡೇಯ ದೇವಾಲಯವಿದೆ. ಸ್ಥಳೀಯ ಶೈಲಿಯಲ್ಲಿ ೨೦ನೇ ಶತಮಾನದಲ್ಲಿ ನಿರ್ಮಾಣಗೊಂಡಿರುವ ಈ ಆಲಯವು ಪೂರ್ವಾಭಿಮುಖವಾಗಿದೆ. ಆಂಧ್ರಪ್ರದೇಶದ ಕಡೆಯಿಂದ ತಮ್ಮ ಕುಲಕಸುಬಾದ ನೇಯ್ಗೆಯನ್ನು ನಂಬಿಕೊಂಡು ವಲಸೆ ಬಂದು ನೆಲೆಸಿದ ಪದ್ಮಶಾಲೀಯ ಜನಾಂಗದ ಮುಖಂಡರು ತಮ್ಮ ಕುಲದೈವನಾದ ಶ್ರೀ ಮಾರ್ಕಂಡೇಯನ ಗುಡಿಯಿಲ್ಲದ ಕಾರಣದಿಂದ ಗುಡಿಯನ್ನು ನಿರ್ಮಿಸಲು ಈ ಸಮುದಾಯದ ಜನತೆಯ ಪೂರ್ಣ ಬೆಂಬಲ ಪಡೆದು ಪದ್ಮಶಾಲೀ ಬಹುತ್ತಮ ಸಮಾಜ ಎಂಬ ಸಂಘವನ್ನು ಕಟ್ಟಿ ಅದರ ನೇತೃತ್ವದಲ್ಲಿ ಗುಡಿಯನ್ನು ನಿರ್ಮಿಸಲು ಮುಂದಾಗಿ ಸು.೧೨ ವರ್ಷಗಳ ಪ್ರಯತ್ನದೊಂದಿಗೆ (೧೯೨೭-೧೯೩೯) ಗುಡಿಯನ್ನು ನಿರ್ಮಿಸಿದ್ದಾರೆ. ಈ ದೇವಾಲಯದ ನಿರ್ಮಾಣಕ್ಕೆ ಬೆಟ್ಟದ ಮೇಲಿನ ಈಶ್ವರನ ಬಂಡೆಯಿಂದ ಸ್ಥಳೀಯ ಭೋವಿಗಳಿಂದ ಬಂಡೆಯನ್ನು ಸುಡಿಸಿ ಇದಕ್ಕೆ ಬೇಕಾಗುವ ಕಲ್ಲು, ಬಂಡೆ, ಕಂಬಗಳು, ಕಲ್ಲಿನ ಕಂಬದ ತೊಲೆಗಳನ್ನು ಪಡೆದು ಅವುಗಳ ಸಹಾಯದಿಂದ ಅಂದಿನ ಶ್ರೀ ಮುತ್ಯಾಲಪ್ಪ ಮತ್ತು ಸುಂಕಪ್ಪ ಎಂಬ ಸಹೋದರರಿಂದ ದೇವಾಲಯವನ್ನು ಕಟ್ಟಿಸಿದರು. ಹೀಗೆ ೧೯೨೭ ಇಸವಿಯ ಶ್ರಾವಣಶುದ್ಧ ನವಮಿಯದಿನದಂದು ದೇವಾಲಯ ನಿರ್ಮಿಸಲು ಅಡಿಗಲ್ಲು ಹಾಕಿ ಆರಂಭಿಸಿದ ನಿರ್ಮಾಣಕಾರ್ಯ ೧೯೩೯ರ ಕಾರ್ತಿಕ ಶುದ್ಧ ಸಪ್ತಮಿಯದಿನದಂದು ವಿಗ್ರಹಗಳ ಪ್ರತಿಷ್ಠಾಪನೆಯೊಂದಿಗೆ ಅಂತಿಮವಾಗಿ ಕೊನೆಗೊಂಡಿತು.[೨೮] ಈ ದೇವಾಲಯ ನಿರ್ಮಾಣ ಕಾರ್ಯದಲ್ಲಿ ಶ್ರೀಮಹೇಶಲ ರಾಮಪ್ಪ ಶ್ರೀ ಗುರ್‍ರಂ ವೆಂಕಟಮಣಪ್ಪ, ಶ್ರೀ ದೇವರಕೊಂಡೆ ತಿಪ್ಪಯ್ಯ, ಶ್ರೀ ಪೊರಾಳ್ ವೆಂಕಟಪ್ಪ, ಶ್ರೀ ದೇವರಕೊಂಡೆ ಸಣ್ಣ ನರಸಪ್ಪ, ಶ್ರೀಗುರ್‍ರಂ ನಾಗಪ್ಪ, ಶ್ರೀವಾಸಿ ವೆಂಕಟಕೊಂಡಪ್ಪ, ಶ್ರೀ ಜಿಂಕಾರಾಮಣ ಮತ್ತು ಶ್ರೀ ಜಿಂಕಾಲಕ್ಷ್ಮಣ್ಣ

ಎಂಬುವವರ ಸತತ ಪ್ರಯತ್ನ ಅಪಾರವಾದುದರಿಂದ ಅವರನ್ನು ಗುಡಿಕಟ್ಟಿದ ನವಮಹನೀಯರು[೨೮] ಎನ್ನಲಾಗಿದೆ.

ಪ್ರಸ್ತುತ ಈ ದೇವಾಲಯವು ಸುತ್ತಲೂ ಪ್ರಾಕಾರಗೋಡೆಯನ್ನು ಹೊಂದಿದ್ದು, ಮಹಾದ್ವಾರ, ಸಭಾಮಂಟಪ ಮತ್ತು ಗರ್ಭಗೃಹಗಳನ್ನು ಒಳಗೊಂಡಿದೆ. ಇಲ್ಲಿನ ಗರ್ಭಗೃಹದಲ್ಲಿ ಸು. ೨ ಅಡಿ ಎತ್ತರದ ಪಾಣಿಪೀಠದ ಮೇಲೆ ಅಮೃತ ಶಿಲೆಯಿಂದ ತಯಾರಿಸಿದ ಶ್ರೀ ಪರಮೇಶ್ವರನನ್ನು ತಬ್ಬಿ ಹಿಡಿದ ಮಾರ್ಕಂಡೇಯ ಸಮೇತವಾಗಿರುವ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ಇದರ ಸುತ್ತಲೂ ಕೀರ್ತಿಮುಖವನ್ನು ಹೊಂದಿ ಹೂಬಳ್ಳಿ ನಂದಿಗಳಿಂದ ಅಲಂಕೃತಗೊಂಡ ಪಂಚಲೋಹದ ಪ್ರಭಾವಳಿಯಿದೆ. ಹಾಗೂ ಇಲ್ಲಿನ ಬಲಗಡೆಗೆ ಪಾರ್ವತಿ, ಎಡಗಡೆಗೆ ಗಣೇಶನನ್ನು ಪ್ರತಿಷ್ಠಾಪಿಸಲಾಗಿದೆ. ಮಾರ್ಕಂಡೇಯ ಶಿಲ್ಪದ ಮುಂಭಾಗದಲ್ಲಿ ಶಿವಲಿಂಗವಿದ್ದು. ಅದರ ಬಲಬದಿಗೆ ಸ್ಥಾನಿಕ ಭಂಗಿಯಲ್ಲಿರುವ ಶ್ರೀಭದ್ರಾವತಿದೇವಿ, ಎಡಬದಿಗೆ ಸ್ಥಾನಿಕ ಭಂಗಿಯಲ್ಲಿರುವ ಶ್ರೀ ಭಾವನಾಋಷಿಯ ಅಮೃತ ಶಿಲೆಯಿಂದ ತಯಾರಿಸಿದ ಶಿಲ್ಪಗಳಿವೆ. ಗರ್ಭಗುಡಿಯ ಮುಂಭಾಗದ ತೆರೆದ ಸಭಾಮಂಟಪದಲ್ಲಿ ೬ ಕಂಬಗಳಿದ್ದು ೧೦ ಅರೆಗಂಭಗಳಿವೆ. ಇಲ್ಲಿನ ಮಧ್ಯಭಾಗದಲ್ಲಿ ಶಿವಲಿಂಗಕ್ಕೆ ಅಭಿಮುಖವಾಗಿರುವ ಅಮೃತಶಿಲೆಯ ನಂದಿಯನ್ನು ಸಹ ಪ್ರತಿಷ್ಠಾಪಿಸಲಾಗಿದೆ. ಸಭಾಮಂಟಪದ ಮುಂಭಾಗದಲ್ಲಿ ಪ್ರಾಂಗಣದಲ್ಲಿ ಸು. ೧೦ ಅಡಿ ಎತ್ತರದ ದೀಪಸ್ತಂಭವಿದೆ. ವಿಶಾಲವಾದ ಇಲ್ಲಿನ ಪ್ರಾಂಗಣದಲ್ಲಿ ದೇವಾಲಯದ ಬಲಬದಿಯಲ್ಲಿ ಇತ್ತೀಚೆಗೆ ನವಗ್ರಹಗಳನ್ನು ಪ್ರತಿಷ್ಠಾಪಿಸಿ ಚಿಕ್ಕದಾದ ಗುಡಿಯನ್ನು ಕಟ್ಟಿದ್ದಾರೆ. ಅಷ್ಟೇ ಅಲ್ಲದೇ ಕಳೆದ ಒಂಭತ್ತು ವರ್ಷಗಳ ಹಿಂದೆ ಇಲ್ಲಿನ ಪ್ರವೇಶದ್ವಾರದ ಮೇಲೆ ೩ ಅಂತಸ್ತಿನ ರಾಜಗೋಪುರ, ಗರ್ಭಗುಡಿಯ ಮೇಲೆ ಗೋಪುರಗಳನ್ನೂ ಸಹ ಸ್ಥಳೀಯ ಶೈಲಿಯಲ್ಲಿ ರಚಿಸಲಾಗಿದೆ. ಸ್ಥಳೀಯ ಕಲ್ಲು ಬಂಡೆಗಳಿಂದ ನಿರ್ಮಿತವಾಗಿರುವ ಈ ದೇವಾಲಯದ ಸಭಾಮಂಟಪದ ಮೇಲ್ಭಾಗದಲ್ಲಿ ಭುವನೇಶ್ವರಿಯನ್ನೂ ರಚಿಸಲಾಗಿದೆ. ಒಟ್ಟಾರೆಯಾಗಿ ಈ ದೇವಾಲಯವು ಪ್ರಸ್ತುತದಿನಗಳಲ್ಲಿ ಸುಸ್ಥಿತಿಯಲ್ಲಿದೆ.

## ವೈಷ್ಣವ ದೇವಾಲಯಗಳು

ಭಾರತೀಯರ ಪ್ರಾಚೀನ ಧರ್ಮಗಳಲ್ಲಿ ವೈಷ್ಣವ ಧರ್ಮವೂ ಒಂದಾಗಿದೆ. ವಿಷ್ಣುವಿನ ಹಿನ್ನೆಲೆಯಲ್ಲಿ ಪ್ರವರ್ಧಮಾನಕ್ಕೆ ಬಂದ ಈ ಧರ್ಮದ ಆರಂಭಿಕ ಉಲ್ಲೇಖಗಳು ನಮಗೆ ವೈದಿಕ ಸಾಹಿತ್ಯದಲ್ಲಿ ಕಂಡುಬಂದಿವೆ. ವೈಷ್ಣವಧರ್ಮ ಅಖಂಡ ಭಾರತದಾದ್ಯಂತ ಹರಡಿಕೊಂಡಂತೆ ಕರ್ನಾಟಕದಲ್ಲಿಯೂ ಪ್ರಚಾರದಲ್ಲಿತ್ತೆಂಬುದು ಶಾತವಾಹನರ ಕಾಲದಲ್ಲಿಯೇ ಕಂಡುಬಂದಿದೆ. ಅಂದರೆ ಶಾತವಾಹನರ ಅರಸನಾದ ಗೌತಮಿಪುತ್ರ ಶಾತಕರ್ಣಿಯನ್ನು ರಾಮ (ಬಲರಾಮ) ಕೇಶವ (ಕೃಷ್ಣ) ಹಾಗೂ ಇನ್ನಿತರೇ ಪೌರಾಣಿಕ ವ್ಯಕ್ತಿಗಳಿಗೆ ಹೋಲಿಸಲಾಗಿದೆ. ಪಲ್ಲವರು ತಮ್ಮನ್ನು ಶಾಸನಗಳಲ್ಲಿ ಪರಮಭಾಗವತರೆಂದು ಕರೆದುಕೊಂಡಿದ್ದಾರೆ ಆದಿ ಕದಂಬ ಗಂಗರ ಕಾಲಕ್ಕಾಗಲೇ ಈ ಧರ್ಮವು ವ್ಯಾಪಕವಾಗಿ ಹರಡಿದ್ದನ್ನು ಹಲವಾರು ಶಾಸನಗಳಿಂದ ಹಾಗೂ ಶಿಲ್ಪಗಳ

ಸಹಾಯದಿಂದ ಕಾಣುತ್ತೇವೆ.[೨೦] ಆನಂತರದಲ್ಲಿ ರಾಜಾಡಳಿತ ನಡೆಸಿದ ಹಲವಾರು ರಾಜ ಮನೆತನಗಳ ದೊರೆಗಳ ಪ್ರೋತ್ಸಾಹದಿಂದ ವಿಜಯನಗರ ಮತ್ತು ವಿಜಯನಗರೋತ್ತರ ಕಾಲದವರೆಗೂ ತನ್ನದೇ ಆದಂತಹ ಬೆಳವಣಿಗೆಯನ್ನು ಹೊಂದಿತು.

ಅಧ್ಯಯನ ಪ್ರದೇಶದಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಂಡಾಗ ಇಲ್ಲಿ ವಿಜಯನರೋತ್ತರ ಕಾಲದ ಒಂದೆರಡು ದೇವಾಲಯಗಳನ್ನು ಹೊರೆತು ಪಡಿಸಿದರೆ ಉಳಿದೆಲ್ಲಾ ೨೦ನೇ ಶತಮಾನದಲ್ಲಿ ರಚನೆಗೊಂಡಂತಹ ಸ್ಥಳೀಯ ಶೈಲಿಯ ಸಣ್ಣ ಸಣ್ಣ ಗುಡಿಗಳೇ ಹೆಚ್ಚಾಗಿ ಕಂಡು ಬಂದಿವೆ. ಅವುಗಳಲ್ಲಿಯೂ ಆಂಜನೇಯನ ಗುಡಿಗಳೇ ಅಧಿಕವಾಗಿವೆ. ಇಲ್ಲಿ ಕಂಡು ಬಂದಂತಹ ಪ್ರಮುಖ ವೈಷ್ಣವ ದೇವಾಲಯಗಳ ವಿವರ ಕೆಳಗಿನಂತಿದೆ.

### ವೆಂಕಟರಮಣ ದೇವಾಲಯ

ಮೊಳಕಾಲ್ಮೂರುವಿನ ಕೋಟೆ ಬಡಾವಣೆಯ ಕೃಷ್ಣರಾಜ ವನದಲ್ಲಿರುವ ದೇವಾಲಯಗಳಲ್ಲಿ ಶ್ರೀ ವೆಂಕಟರಮಣನ ದೇವಾಲಯವು ಪ್ರಮುಖವಾದುದಾಗಿದೆ. ಸ್ಥಳೀಯರು ಇದನ್ನು ಕೋಟೆ ವೆಂಕಟೇಶ್ವರ ಎಂತಲೂ ಕರೆಯುವರು. ಈ ದೇವಾಲಯದ ಸುತ್ತಮುತ್ತಲಿನ ಪ್ರದೇಶದಲ್ಲಿ ಮೇಲಿನ ಈಶ್ವರ, ಕೆಳಗಿನ ಈಶ್ವರ, ವೀರಾಂಜಿನೇಯ ಹಾಗೂ ಇತ್ತೀಚಿಗೆ ನಿರ್ಮಾಣವಾದ ಶ್ರೀ ರಾಘವೇಂದ್ರರಾಯರ ಮಠಗಳಿವೆ ಇದರ ನಿರ್ಮಾಣಕ್ಕೆ ಸಂಬಂಧಿಸಿದಂತೆ ಯಾವುದೇ ರೀತಿಯ ಶಾಸನಗಳು ಲಭ್ಯವಿಲ್ಲದಿದ್ದರೂ ರಚನಾ ಶೈಲಿಯಿಂದ ವಿಜಯನಗರೋತ್ತರ ಕಾಲದಲ್ಲಿ ನಿರ್ಮಾಣವಾಯಿತೆಂದು ಹೇಳಲಾಗಿದೆ. ಪಟ್ಟಣದ ಬ್ರಾಹ್ಮಣ ಸಮುದಾಯದವರು ನಿರ್ಮಿಸಿದ ಈ ದೇವಾಲಯ ಇಂದಿಗೂ ಅವರ ಉಸ್ತುವಾರಿಯಲ್ಲಿಯೇ ನಿರ್ವಾಹಿಸಿಕೊಂಡು ಬರಲಾಗುತ್ತದೆ.

ಸುತ್ತಲೂ ಪ್ರಕಾರ ಗೋಡೆಯನ್ನು ಹೊಂದಿರುವ ಈ ದೇವಾಲಯದ ಪ್ರವೇಶದ್ವಾರವು ಉತ್ತರಾಭಿಮುಖವಾಗಿದೆ. ಇದರ ಮೇಲ್ಭಾಗದ ಭಾವಣಿಯಲ್ಲಿ ವಿಷ್ಣುವಿನ ವಾಹನವಾದ ಗರುಡನ ಗಾರೆಶಿಲ್ಪವಿದೆ. ಇಲ್ಲಿನ ವಿಶಾಲವಾದ ಪ್ರಾಂಗಣದ ಮಧ್ಯಭಾಗದಲ್ಲಿ ನಿರ್ಮಾಣಗೊಂಡಿರುವ ಈ ದೇವಾಲಯದ ಮುಖ್ಯದ್ವಾರ ಪೂರ್ವಭಿಮುಖವಾಗಿದೆ. ಈ ದೇವಾಲಯವು ಗರ್ಭಗೃಹ ಮತ್ತು ಸಭಾಮಂಟಪ ಎಂಬ ಎರಡು ಅಂಕಣಗಳಿಂದ ಕೂಡಿದೆ. ಚಚ್ಚೌಕಕಾರದ ಇಲ್ಲಿನ ಗರ್ಭಗೃಹದಲ್ಲಿ ಸು. ೩ ಅಡಿ ಎತ್ತರದ ಸ್ಥಾನಿಕ ಭಂಗಿಯಲ್ಲಿರುವ ಶ್ರೀವಿಷ್ಣುವಿನ ಮೂರ್ತಿಶಿಲ್ಪವನ್ನು ಪೂರ್ವಾಭಿಮುಖವಾಗಿ ಪ್ರತಿಷ್ಠಾಪಿಸಲಾಗಿದೆ. ಈ ಮೂರ್ತಿಯ ಹಿಂಭಾಗದಲ್ಲಿ ಪಂಚಲೋಹದಿಂದ ತಯಾರಿಸಿದ ಕೀರ್ತಿಮುಖವನ್ನು ಹೊಂದಿದ ಪ್ರಭಾವಳಿ ಇದೆ. ಶ್ರೀಸ್ವಾಮಿಯ ಪಾದದ ಕೆಳಭಾಗದಲ್ಲಿ ಆಂಜಿನೇಯನ ಶಿಲ್ಪವಿದೆ. ಈ ಗರ್ಭಗುಡಿಯ ಪ್ರವೇಶದ್ವಾರದ ಬಾಗಿಲುವಾಡವು ಪಂಚಲೋಹದಿಂದ ಲೇಪನಗೊಂಡಿದ್ದು, ಇದರ ಎರಡು ಬದಿಗಳಲ್ಲಿ ದ್ವಾರ ಪಾಲಕರ ಉಬ್ಬುಶಿಲ್ಪಗಳನ್ನು ಕಾಣಬಹುದು. ಗರ್ಭಗೃಹದ ಮುಂಭಾಗದ ಸಭಾಮಂಟಪ, ಮುಖಮಂಟಪದ ಭಾವಣಿಯ ಮೇಲ್ಭಾಗದಲ್ಲಿ

ವಿಷ್ಣುವಿನ ದಶಾವತಾರಗಳಿಗೆ ಸಂಬಂಧಿಸಿದ ಗಾರೆಶಿಲ್ಪಗಳನ್ನು ಕಾಣಬಹುದು. ಮತ್ತು ಸಭಾಮಂಟಪದ ಮುಂಭಾಗದಲ್ಲಿ ದೀಪಸ್ತಂಭ ಹೋಮಕುಂಡ ಹಾಗೂ ನಾಗರಕಟ್ಟೆ ಇದೆ.

ಈ ದೇವಾಲಯವು ಅಧಿಷ್ಠಾನ, ಭಿತ್ತಿ, ಪ್ರಸ್ತರ, ಗ್ರೀವ, ಶಿಖರ ಮತ್ತು ಸ್ತೂಪಿ ಎಂಬ ಆರು ಷಡ್ವರ್ಗಗಳನ್ನು ಒಳಗೊಂಡಿದ್ದು, ಇಡೀ ದೇವಾಲಯ ಸಂಪೂರ್ಣವಾಗಿ ಇಟ್ಟಿಗೆ ಮತ್ತು ಗಚ್ಚುಗಾರೆಯಿಂದ ನಿರ್ಮಾಣಗೊಂಡಿದೆ. ಷಟ್‌ಸ್ಥಲಗಳಿಂದ ಕೂಡಿದ ದ್ರಾವಿಡ ಶೈಲಿಯ ಈ ದೇವಾಲಯದ ಭಿತ್ತಿಯ ಹೊರಭಾಗದಲ್ಲಿ ಮೀನು, ಸರ್ಪ, ಮೊಸಳೆ, ಹಂಸ ಪಕ್ಷಿಗಳ ಕೆತ್ತನೆಯ ಉಬ್ಬುಶಿಲ್ಪಗಳಿವೆ. ಅಲ್ಲದೇ ಇಲ್ಲಿನ ಪ್ರಸ್ತರ, ಗ್ರೀವ ಮತ್ತು ಶಿಖರದ ಭಾಗದಲ್ಲಿ ಗಿಣಿಗಳ ಸಾಲುಗಳನ್ನು ಕಾಣಬಹುದು. ಇದರ ಕಳಸವು ಗುಮ್ಮಟಾಕಾರವಾಗಿದ್ದು ಅದರ ಸುತ್ತಲೂ ವಿಷ್ಣುವಿಗೆ ಸಂಬಂಧ ಪಟ್ಟಂತಹ ವಿವಿಧ ಗಾರೆಶಿಲ್ಪಗಳನ್ನು ಕೆತ್ತಲಾಗಿದೆ. ಈ ದೇವಾಲಯದ ಎಡಬದಿಯ ಪ್ರಾಕಾರ ಗೋಡೆಯ ಒಳಿಯಲ್ಲಿ ಆಂಜನೇಯ, ನಂದಿ, ಶಿವಲಿಂಗದಂತಹ ಬಿಡಿಶಿಲ್ಪಗಳಿರುವುದನ್ನು ಸಹ ಕಾಣಬಹುದು. ಬ್ರಾಹ್ಮಣ ಸಮುದಾಯದವರ ಉಸ್ತುವಾರಿಯಲ್ಲಿರುವ ಕಾರಣದಿಂದ ಈ ದೇವಾಲಯದ ಸ್ಥಿತಿಯು ಸುಸ್ಥಿತಿಯಲ್ಲಿದೆ.

**ಜನ್ನಿಗೆ ಪಾಲು ಆಂಜನೇಯ**

ಮೊಳಕಾಲ್ಮೂರು ಪಟ್ಟಣದಿಂದ ದಕ್ಷಿಣ ದಿಕ್ಕಿನಲ್ಲಿರುವ ಮಾರುತಿ ಬಡಾವಣೆಯಲ್ಲಿ ಜನ್ನಿಗೆ ಪಾಲು ಆಂಜನೇಯನ ದೇವಾಲಯವಿದೆ. ಇದನ್ನು ಜನ್ನಿಗೆ, ಜೆನ್ನಿಪಾಲು, ಜೊನ್ನಪೋಲು ಜೊನ್ನಪಲ್ಲಿ ಆಂಜನೇಯ ಎಂಬ ಹಲವಾರು ಹೆಸರುಗಳಿಂದ ಕರೆಯುವರು. ದಕ್ಷಿಣಾಭಿಮುಖವಾಗಿರುವ ಇದು ಸಂಪೂರ್ಣ ಸ್ಥಳೀಯ ಗ್ರಾನೈಟ್ ಚಪಡಿ ಬಂಡೆಗಳಿಂದ ನಿರ್ಮಾಣವಾಗಿದೆ. ವಿಶಾಲವಾದ ಪ್ರಾಂಗಣದಲ್ಲಿ ನಿರ್ಮಿತಗೊಂಡಿರುವ ಈ ದೇವಾಲಯವು ೨೦ನೇ ಶತಮಾನದಲ್ಲಿ ನಿರ್ಮಾಣ ಗೊಂಡಿದ್ದು, ಸ್ಥಳೀಯ ಶೈಲಿಯನ್ನು ಹೊಂದಿದೆ. ಸುತ್ತಲೂ ಪ್ರಕಾರ ಗೋಡೆಯನ್ನು ಹೊಂದಿರುವ ಇದರ ಪ್ರವೇಶದ್ವಾರವು ಸು.೯ ಅಡಿ ಎತ್ತರವಿದ್ದು, ಇಲ್ಲಿನ ಲಲಾಟದಲ್ಲಿ ಪದ್ಮದ ಕೆತ್ತನೆಯಿದೆ. ಅಲ್ಲದೇ ಇಲ್ಲಿನ ಪ್ರಕಾರ ಗೋಡೆಗೆ ಹೊಂದಿಕೊಂಡಂತೆ ಪ್ರವೇಶ ದ್ವಾರದ ಇಕ್ಕೆಲಗಳಲ್ಲಿ ಮತ್ತು ದೇವಾಲಯದ ಹಿಂಭಾಗದಲ್ಲಿ ಮಂಟಪಗಳ ರಚನೆಯಿದೆ. ಗರ್ಭಗೃಹ ಮತ್ತು ಸಭಾಮಂಟಪವನ್ನು ಒಳಗೊಂಡಿರುವ ಈ ದೇವಾಲಯದ ಗರ್ಭಗೃಹದಲ್ಲಿ ೬ ಅಡಿ ಎತ್ತರದ ಆಂಜಿನೇಯನ ಶಿಲ್ಪವಿದೆ. ಜೊತೆಗೆ ವಿಷ್ಣು ಮತ್ತು ಲಕ್ಷ್ಮೀಯ ಶಿಲ್ಪಗಳೂ ಸಹ ಇಲ್ಲಿವೆ.

ಗರ್ಭಗುಡಿಯ ಮುಂಭಾಗದ ಸಬಾಮಂಟಪದ ಪ್ರವೇಶ ದ್ವಾರದ ಲಲಾಟದಲ್ಲಿ ಪದ್ಮದ ಕೆತ್ತನೆ ಇದೆ. ಇದರ ಬಾಗಿಲು ಸಂಪೂರ್ಣವಾಗಿ ಕಬ್ಬಿಣದಿಂದ ತಯಾರಿಸಲ್ಪಟ್ಟಿದೆ. ಸಭಾಮಂಟಪದ ಒಳಗಡೆ ಸ್ಥಳೀಯ ಶೈಲಿಯಲ್ಲಿ ರಚಿತಗೊಂಡಂತಹ ಎರಡು ಕಂಬಗಳಿವೆ. ಅಲ್ಲದೇ ಸು. ಎರಡು ಅಡಿ ಎತ್ತರದ ಶಿಲೆಯಲ್ಲಿ ಕಡೆದ ಗಜಲಕ್ಷ್ಮೀಯ ಶಿಲ್ಪವು ಸಭಾಮಂಟಪದ ಒಳಗೆ ಕಂಡು ಬಂದಿದೆ.

ಈ ದೇವಾಲಯದ ಸುತ್ತಲಿನ ಪ್ರಾಂಗಣದಲ್ಲಿ ಶಿವಲಿಂಗವಿದೆ. ಸಬಾಮಂಟಪದ ಮುಂಬಾಗದಲ್ಲಿ ಪ್ರಾಕಾರ ಗೋಡೆಗೆ ಹೊಂದಿಕೊಂಡಂತಿರುವ ಪ್ರವೇಶ ದ್ವಾರವಿದ್ದು, ಅದರ ಮುಂಭಾಗದಲ್ಲಿ ದೀಪ ಸ್ತಂಭವಿದ್ದು ಅದರ ಬಲಬದಿಯ ವಿಶಾಲವಾದ ಕಟ್ಟೆಯ ಮೇಲೆ ನಾಗರ ಶಿಲ್ಪಗಳು ಮತ್ತು ನವಗ್ರಹಗಳ ಪ್ರತಿಷ್ಠಾಪನೆ ಮಾಡಿರುವುದು ಕಂಡುಬಂದಿದೆ. ಒಟ್ಟಾರೆಯಾಗಿ ಸ್ಥಳೀಯ ಶೈಲಿಯಲ್ಲಿ ರಚಿತಗೊಂಡಿರುವ ಈ ದೇವಾಲಯವು ಸಂಪೂರ್ಣವಾಗಿ ಸ್ಥಳೀಯ ಕಲ್ಲು ಬಂಡೆಗಳಿಂದ ನಿರ್ಮಿತಗೊಂಡಂತಹ ೨೦ನೇ ಶತಮಾನದ ದೇವಾಲಯವಾಗಿದೆ.

**ಕೋಟೆ ಆಂಜನೇಯ ಗುಡಿ**

ಇದು ಊರಿನಿಂದ ಉತ್ತರಕ್ಕಿರುವ ಬೆಟ್ಟದ ಮೇಲಿನ ಕೋಟೆಯ ಏಣಿಮಾರಮ್ಮನ ಬಾಗಿಲಿನ ಸಮೀಪದಲ್ಲಿದೆ ಕೋಟೆಯಲ್ಲಿರುವ ಕಾರಣದಿಂದ ಇದನ್ನು ಕೋಟೆ ಆಂಜನೇಯ ಎನ್ನುವರು. ಉತ್ತರಾಭಿಮುಖವಾಗಿರುವ ಈ ದೇವಾಲಯವು ಸಂಪೂರ್ಣವಾಗಿ ನಶಿಸಿ ಹೋಗಿದ್ದು, ಕೇವಲ ಅಧಿಷ್ಠಾನ ಭಾಗದ ಕುರುಹುಗಳು ಮಾತ್ರ ಕಂಡು ಬರುತ್ತವೆ. ಇವುಗಳನ್ನು ಗಮನಿಸಿದಾಗ ಸಭಾಮಂಟಪ, ಅಂತರಾಳ ಮತ್ತು ಗರ್ಭಗೃಹಗಳು ಕಂಡು ಬರುತ್ತವೆ. ಕೇವಲ ಗರ್ಭಗೃಹ ಮಾತ್ರ ಸುಸ್ಥಿತಿಯಲ್ಲಿದ್ದು ಅದರಲ್ಲಿ ಉತ್ತರಾಭಿಮುಖವಾಗಿರುವ ಸಂಪೂರ್ಣ ಕಪ್ಪುಕಣಶಿಲೆಯಲ್ಲಿ ರಚಿತಗೊಂಡಂತಹ ಆಂಜನೇಯನ ಶಿಲ್ಪವಿದೆ. ಇಲ್ಲಿನ ಸಭಾಮಂಟಪದ ಅಧಿಷ್ಠಾನದ ಭಾಗದಲ್ಲಿ ಕೋತಿ, ಪದ್ಮ ಮತ್ತು ವ್ಯಾಳಿಯ ಕೆತ್ತನೆಗಳು ಕಂಡು ಬರುತ್ತಿದ್ದು, ಅದರ ಮುಂಭಾಗದಲ್ಲಿ ದೀಪಸ್ತಂಭವಿದ್ದು ಅದರ ಕೆಳಭಾಗದಲ್ಲಿ ಭಕ್ತಿಶಿಲ್ಪವಿರುವುದು ಕಂಡು ಬಂದಿದೆ. ಒಟ್ಟಾರೆಯಾಗಿ ಈ ದೇವಾಲಯದ ರಚನೆಯನ್ನು ಗಮನಿಸಿದರೆ ಇದು ವಿಜಯ ನಗರೋತ್ತರ ಕಾಲದಲ್ಲಿ ನಿರ್ಮಾಣಗೊಂಡಂತಹ ದೇವಾಲಯವಾಗಿದ್ದು, ಅದರ ಸ್ಥಿತಿಯು ಅಳಿವಿನಂಚಿನಲ್ಲಿದೆ.

**ಬಯಲು ಆಂಜನೇಯ ಗುಡಿ**

ಬಯಲು ಆಂಜನೇಯ ಬಡಾವಣೆಯಲ್ಲಿರುವ ಈ ದೇವಾಲಯವು ಊರಿನಿಂದ ಪೂರ್ವಕ್ಕಿದೆ. ಬಡಾವಣೆಯ ಉತ್ತರದ ವಿಶಾಲ ಬಯಲಿನಲ್ಲಿರುವ ಈ ಗುಡಿಯನ್ನು ಹಾಳೂರು ಆಂಜನೇಯ ಎಂತಲೂ ಕರೆಯುವರು. ಇಲ್ಲಿನ ಬೆಟ್ಟದ ಬೃಹತ್ತಾದ ಗುಂಡುವಿನ ಕೆಳಭಾಗದಲ್ಲಿ ಕೆತ್ತಿರುವ ಆಂಜನೇಯ ಶಿಲ್ಪವು ದಕ್ಷಿಣಾಭಿಮುಖವಾಗಿದೆ. ದೇವರ ಶಿಲ್ಪವನ್ನು ಕೆತ್ತಲ್ಪಟ್ಟ ಗುಂಡು ಹಂದರದಂತೆ ಮುಂಚಾಚಿದ್ದು, ಮಳೆ-ಗಾಳಿಯಿಂದ ಶಿಲ್ಪವನ್ನು ರಕ್ಷಿಸುವ ಆಲಯದಂತಿದೆ. ಸ್ಥಳೀಯರು ಈ ಗುಂಡುವಿನ ದಕ್ಷಿಣಾ ಭಾಗದಲ್ಲಿ ಅದಕ್ಕೆ ಹೊಂದಿಕೊಂಡಂತೆ ಗೋಡೆಯನ್ನು ನಿರ್ಮಿಸಿ, ಪೂರ್ವಾಭಿಮುಖಕ್ಕೆ ಪ್ರವೇಶ ದ್ವಾರವನ್ನು ಹೊಂದಿರುವಂತೆ ದೇವಾಲಯವನ್ನು ಕಟ್ಟಿರುವುದರಿಂದ ಇದರ ಸ್ಥಿತಿಯು ಸುಸ್ಥಿತಿಯಲ್ಲಿದೆ.

### ವೀರಾಂಜನೇಯ ಗುಡಿ

ವೀರಾಂಜನೇಯ ಗುಡಿಯು ಊರಿನಿಂದ ಉತ್ತರದ ದಿಕ್ಕಿಗೆ ಇರುವ ಕೋಟೆ ಬಡಾವಣೆಯಲ್ಲಿದೆ. ಇಲ್ಲಿ ಬೆಟ್ಟಕ್ಕೆ ಹೋಗುವ ದಾರಿಯಲ್ಲಿರುವ ಈ ದೇವಾಲಯವು ದಕ್ಷಿಣಾಭಿಮುಖವಾಗಿದೆ. ಸಂಪೂರ್ಣವಾಗಿ ಸ್ಥಳೀಯ ಕಲ್ಲುಗಲಿಂದ ನಿರ್ಮಿತಗೊಂಡಿರುವ ಈ ದೇವಾಲಯವು ಗರ್ಭಗೃಹ ಮತ್ತು ಸಭಾಮಂಟಪವನ್ನು ಒಳಗೊಂಡಿದ್ದು, ಇಲ್ಲಿನ ಗರ್ಭಗೃಹದಲ್ಲಿ ಸು.೪ ಅಡಿ ಎತ್ತರದ ಗ್ರಾನೈಟ್ ಶಿಲೆಯ ಮಧ್ಯಬಾಗದಲ್ಲಿ ಚಿಕ್ಕದಾದ ಆಂಜಿನೇಯನ ಮೂರ್ತಿಶಿಲ್ಪವನ್ನು ಕೆತ್ತಲಾಗಿದೆ. ಇದನ್ನು ಉದ್ಭವ ವೀರಾಂಜಿನೇಯ ಎಂತಲೂ ಕರೆಯುವರು. ಗರ್ಭಗೃಹದ ಮುಂಬಾಗದಲ್ಲಿ ಸಭಾಮಂಟಪ ಅದರ ಮುಂಭಾಗದಲ್ಲಿ ದೀಪಸ್ತಂಭ ಇರುವುದು ಕಂಡು ಬಂದಿದೆ. ಈ ದೇವಾಲಯದ ಬಲಬದಿಗೆ ಪುಷ್ಕರಣೆಯೊಂದಿದೆ. ಬಹುಶಃ ಈ ಪುಷ್ಕರಣೆಯನ್ನು ದೇವಾಲಯದ ಸೇವೆಗಾಗಿ ನಿರ್ಮಿಸಿರಬೇಕೆನಿಸುತ್ತದೆ. ಸಂಪೂರ್ಣವಾಗಿ ಸ್ಥಳೀಯ ಕಲ್ಲುಗಳಿಂದ ನಿರ್ಮಿಸಿರುವ ಈ ದೇವಾಲಯ ೨೦ನೇ ಶತಮಾನದಲ್ಲಿ ನಿರ್ಮಾಣಗೊಂಡಿದೆ ಎನ್ನಲಾಗಿದೆ.

### ಬಾಲಾಂಜನೇಯ ಗುಡಿ

ಈ ದೇವಾಲಯವೂ ಸಹ ಕೋಟೆ ಬಡಾವಣೆಯಲ್ಲಿಯೇ ಕಂಡುಬರುತ್ತದೆ. ಇಲ್ಲಿನ ಕೋಟೆಯ ಊರು ಬಾಗಿಲ ಬಳಿಯಲ್ಲಿರುವ ಈ ದೇವಾಲಯವು ದಕ್ಷಿಣಾಭಿಮುಖವಾಗಿದೆ. ಕೋಟೆ ಗೋಡೆಗೆ ಹೊಂದಿಕೊಂಡಂತೆ ಇದ್ದ ಈ ಆಲಯ ಕೋಟೆಯ ಗೋಡೆಯೊಂದಿಗೆ ಶಿಥಿಲಗೊಳ್ಳುತ್ತಾ ಸಾಗಿದ್ದಾಗ ಸ್ವಕುಳ ಸಾಳ ಸಮಾಜದ ದೊಡ್ಡ ಸಿದ್ದಪ್ಪನವರು ಊರಿನ ಜನರ ಸಹಕಾರದಿಂದ ಈಗಿರುವ ದೇವಾಲಯವನ್ನು ನಿರ್ಮಿಸಿದ್ದಾರೆ. ಗರ್ಭಗುಡಿ ಮತ್ತು ಸಭಾಮಂಟಪವನ್ನು ಹೊಂದಿರುವ ಈ ಆಲಯದ ಗರ್ಭಗುಡಿಯಲ್ಲಿ ಬಾಲ್ಯಾವಸ್ಥೆಯಲ್ಲಿರುವ ಸ್ವಾಮಿಯ ೫ ಅಡಿ ಎತ್ತರದ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಇಲ್ಲಿನ ಸಭಾಮಂಟಪದ ಮುಂಭಾಗದಲ್ಲಿ ದೀಪಸ್ತಂಭ ಹಾಗೂ ಸು.೫ ಅಡಿ ಎತ್ತರದ ವಿಶಾಲವಾದ ಅರಳೀಮರದ ಕಟ್ಟೆ ಇದೆ. ಸಂಪೂರ್ಣವಾಗಿ ಸ್ಥಳೀಯ ಕಲ್ಲುಗಳಿಂದ ನಿರ್ಮಿಸಿರುವ ಈ ದೇವಾಲಯವನ್ನು ಮಹಾಂಜಿನೇಯ ಎಂತಲೂ ಸಹ ಕರೆಯುವರು.

### ಪೆನ್ನೋಬಳ ಸ್ವಾಮಿ ದೇವಾಲಯ/ಲಕ್ಷ್ಮೀನರಸಿಂಹ ದೇವಾಲಯ

ಈ ದೇವಾಲಯವು ಊರಿನಿಂದ ಪಶ್ಚಿಮಕ್ಕಿರುವ ಕುರಾಕಲ ಹಟ್ಟಿಯಲ್ಲಿದೆ. ಇದು ಪೂರ್ವಾಭಿಮುಖವಾಗಿದೆ. ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ಉರವಕೊಂಡ ಸಮೀಪದ ಪೆನ್ನೋಬಳಂ ಈ ದೇವರ ಮೂಲನೆಲೆಯಾಗಿರುವುದರಿಂದ ಇದನ್ನು ಪೆನ್ನೋಬಳ ಸ್ವಾಮಿ ಗುಡಿಎಂದು ಕರೆಯುವರು. ಆರಂಭದಲ್ಲಿ ಚಿಕ್ಕ ಗುಡಿಯಾಗಿದ್ದ ಇದು ನಶಿಸುವ ಹಂತದಲ್ಲಿದ್ದಾಗ ಊರಿನ ಜನರೆಲ್ಲಾ ಸೇರಿ ಈಗಿರುವ ದೇವಾಲಯವನ್ನು ನಿರ್ಮಿಸಿದ್ದಾರೆ. ಸ್ಥಳೀಯ ಶೈಲಿಯಲ್ಲಿ

ರಚಿತಗೊಂಡಿರುವ ಈಗಿರುವ ದೇವಾಲಯವು ಗರ್ಭಗೃಹ ಮತ್ತು ಸಭಾಮಂಟಪವನ್ನು ಒಳಗೊಂಡಿದ್ದು, ಇಲ್ಲಿನ ಗರ್ಭಗೃಹದಲ್ಲಿ ನಾಲ್ಕು ಕೈಗಳನ್ನು ಹೊಂದಿರುವ ನರಸಿಂಹನು ತನ್ನ ಬಲಗಡೆಯ ಹಿಂಗೈಯಲ್ಲಿ ಚಕ್ರ ಎಡಗಡೆಯ ಹಿಂಗೈಯಲ್ಲಿ ಶಂಖವನ್ನು ಹಿಡಿದು, ಬಲಗಡೆಯ ಮುಂಗೈಯನ್ನು ಅಭಯ ಹಸ್ತವಾಗಿ ನೀಡುತ್ತಾ ಎಡಗಡೆಯ ಮುಂಗೈನ ಸಹಾಯದಿಂದ ತನ್ನ ಎಡಗಡೆಯ ತೊಡೆಯ ಮೇಲೆ ಲಕ್ಷ್ಮಿಯನ್ನು ಕೂರಿಸಿಕೊಂಡಿರುವಂತಹ ಆಸಿನ ಭಂಗಿಯ ಮೂರ್ತಿ ಶಿಲ್ಪವಿದೆ. ಈ ಶಿಲ್ಪದ ಹಿಂಭಾಗದಲ್ಲಿ ಹಿತ್ತಾಳೆಯ ಲೋಹದಿಂದ ತಯಾರಿಸಿದ ಸುತ್ತಲೂ ಹೂ ಬಳ್ಳಿಗಳಿಂದ ಅಲಂಕೃತವಾದ ಕೀರ್ತಿಮುಖವನ್ನು ಹೊಂದಿದಂತಹ ಪ್ರಭಾವಳಿ ಕಂಡು ಬಂದಿದೆ. ಗರ್ಭಗುಡಿಯ ಮುಂಭಾಗದಲ್ಲಿ ಸಭಾಮಂಟಪದ ರಚನೆಯಿದೆ. ೨೦ನೇ ಶತಮಾನದಲ್ಲಿ ನಿರ್ಮಿತಗೊಂಡಿರುವ ಈ ದೇವಾಲಯದ ಸ್ಥಿತಿಯು ಸುಸ್ಥಿತಿಯಲ್ಲಿದೆ.

**ಪಾಂಡುರಂಗದೇವಾಲಯ**

ಪಾಂಡುರಂಗ ದೇವಾಲಯವು ಊರಿನಿಂದ ಉತ್ತರಕ್ಕಿರುವ ದೊಡ್ಡ ಪೇಟೆಯಲ್ಲಿದೆ. ಸುತ್ತಲೂ ಪ್ರಾಕಾರದ ಗೋಡೆಯನ್ನು ಹೊಂದಿರುವ ಈ ದೇವಾಲಯದ ಪ್ರವೇಶದ್ವಾರವು ಉತ್ತರ ದಿಕ್ಕಿಗೆ ಇದೆ. ಇಲ್ಲಿನ ಪ್ರಾಂಗಣದಲ್ಲಿರುವ ದೇವಾಲಯವು ಪೂರ್ವಾಭಿಮುಖವಾಗಿದೆ. ೨೦ನೇ ಶತಮಾನದಲ್ಲಿ ಸ್ಥಳೀಯ ಶೈಲಿಯೊಂದಿಗೆ ಗ್ರಾನೈಟ್ ಶಿಲೆಯ ಕಲ್ಲು ಬಂಡೆಗಳಿಂದ ನಿರ್ಮಿತಗೊಂಡಿರುವ ಪ್ರಸ್ತುತ ದೇವಾಲಯವು ಗರ್ಭಗುಡಿ ಮತ್ತು ಸಭಾಮಂಟಪವನ್ನು ಒಳಗೊಂಡಿದೆ. ಇಲ್ಲಿನ ಗರ್ಭಗುಡಿಯ ಪ್ರವೇಶದ್ವಾರದ ಲಲಾಟದಲ್ಲಿ ಪದ್ಮದ ಚಿತ್ರಕೆತ್ತನೆಯಿದೆ. ಬಾಗಿಲು ವಾಡವು ಸರಳತೆಯಿಂದ ಕೂಡಿದೆ. ಗರ್ಭಗುಡಿಯ ಒಳಭಾಗದ ಮಧ್ಯದಲ್ಲಿ ಸು. ೨ ಅಡಿ ಎತ್ತರದ ಪಾಣೀಪೀಠದ ಮೇಲೆ ಸ್ಥಾನಿಕ ಭಂಗಿಯಲ್ಲಿರುವ ಪಾಂಡುರಂಗ (ಕೃಷ್ಣ) ಮತ್ತು ಎಡಭಾಗದಲ್ಲಿ ರುಕ್ಮಿಣಿಯನ್ನೊಳಗೊಂಡಂತಹ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಕಪ್ಪು ಕಣಶಿಲೆಯಿಂದ ರಚಿತಗೊಂಡಿರುವ ಈ ಮೂರ್ತಿಗಳು ತಮ್ಮ ಕಿವಿ, ಕೈ, ಕಾಲುಗಳಲ್ಲಿ ಆಭರಣಗಳನ್ನು ಧರಿಸಿದ್ದು, ತಮ್ಮ ಕೈಗಳನ್ನು ಸೊಂಟಕ್ಕೆ ತಾಕೀತು ಮಾಡಿಕೊಂಡು ಮುಕುಟಾದಾರಿಗಳಾಗಿ ನಿಂತಿದ್ದಾರೆ. ಈ ಶಿಲ್ಪಗಳಿಗೆ ವಸ್ತ್ರಗಳನ್ನೂ ಸಹ ತೊಡಿಸಿದ್ದಾರೆ. ಗರ್ಭಗುಡಿಯ ಮುಂಭಾಗದ ಸಭಾಮಂಟಪದಲ್ಲಿ ಸ್ಥಳೀಯ ವಾಸ್ತುವಿನಿಂದ ಕೂಡಿದ ನಾಲ್ಕು ಕಂಬಗಳಿವೆ. ಸಭಾಮಂಟಪದ ಮುಂಭಾಗದಲ್ಲಿ ಸು. ೧೦ ಅಡಿ ಎತ್ತರದ ಸ್ತಂಭವಿದ್ದು ಅದರ ಕೆಳಭಾಗದಲ್ಲಿ ಗರ್ಭಗುಡಿಯಲ್ಲಿನ ದೇವರಿಗೆ ಎದುರಾಗಿ ನಿಂತಿರುವಂತಹ ಆಂಜನೇಯ ಶಿಲ್ಪದ ಕೆತ್ತನೆಯಿರುವುದು ಕಂಡು ಬಂದಿದೆ. ದೇವಾಲಯದ ಪ್ರಾಕಾರದ ಒಳಗೆ ಎಡಕ್ಕೆ ನವಗ್ರಹಗಳನ್ನು ಪ್ರತಿಷ್ಠಾಪಿಸಿದರೆ, ಬಲಭಾಗದಲ್ಲಿ ಕಲ್ಯಾಣಮಂಟಪವನ್ನು ನಿರ್ಮಿಸಿದ್ದಾರೆ. ಇಲ್ಲಿನ ಸ್ಥಳೀಯ ಸ್ವಕುಳ ಸಾಳಿಜನಾಂಗದ ಅಭಿವೃದ್ಧಿಯ ಟ್ರಸ್ಟ್‌ನ ಅಡಿಯಲ್ಲಿ ಬೆಳವಣಿಗೆ ಹೊಂದುತ್ತಿರುವ ಈ ದೇವಾಲಯದ ಪ್ರಸ್ತುತ ಸ್ಥಿತಿಯು ಸುಸ್ಥಿತಿಯಲ್ಲಿದೆ.

ಈ ಮೇಲೆ ಸೂಚಿಸಿದಂತಹ ಎಲ್ಲಾ ವೈಷ್ಣವ ದೇವಾಲಯಗಳಲ್ಲಿ ಕೋಟೆ ಆಂಜನೇಯ, ವೆಂಕಟರಮಣ ದೇವಾಲಯಗಳನ್ನು ಹೊರತು ಪಡಿಸಿದರೆ ಉಳಿದೆಲ್ಲಾ ದೇವಾಲಯಗಳು ಹೀಗೊಂದು ನೂರುವರ್ಷಗಳವರೆಗೆ ನಿರ್ಮಾಣಗೊಂಡಂತಹ ಆಧುನಿಕ ಕಾಲದ ದೇವಾಲಯಗಳಾಗಿವೆ.

## ಶಾಕ್ತ ದೇವಾಲಯಗಳು

ವೈವಿಧ್ಯಮಯವಾದ ಸಂಸ್ಕೃತಿಯನ್ನು ಹೊಂದಿರುವ ಭಾರತದಲ್ಲಿ ಮಹಿಳೆಗೆ ವಿಶೇಷಸ್ಥಾನಮಾನವನ್ನು ನೀಡಲಾಗಿದೆ. ಭಾರತೀಯ ಇತಿಹಾಸದ ಆರಂಭದ ಕಾಲವನ್ನು ನೋಡಿದರೆ ಒಂದರ್ಥದಲ್ಲಿ ಮಾತೃದೇವತಾ ಆರಾಧನೆಯ ಸಮಾಜವನ್ನು ನೋಡಬಹುದು. ಇಲ್ಲಿನ ಪ್ರಾಚೀನ ಹರಪ್ಪಾ ಸಂಸ್ಕೃತಿಯಲ್ಲಿ ಮಾತೃದೇವತೆಗೆ ಪ್ರಮುಖ ಸ್ಥಾನವಿದ್ದುದನ್ನು ನಾವು ಚರಿತ್ರೆಯ ಪುಟಗಳಿಂದ ಕಂಡಿದ್ದೇವೆ. ಹೀಗೆ ಕ್ರಿ.ಪೂ. ೩೦೦೦ ವರ್ಷಗಳ ಕಾಲದಿಂದಲೇ ಅಸ್ತಿತ್ವಕ್ಕೆ ಬಂದಂತಹ ಮಾತೃದೇವತಾ ಆರಾಧನೆಯ ಪರಂಪರೆಯು ಇಂದಿಗೂ ಪ್ರಚಲಿತದಲ್ಲಿರುವುದನ್ನು ಕಾಣಬಹುದು. ಶಾಕ್ತ ಸಂಪ್ರದಾಯದ ಮೂಲಾಧಾರವಾಗಿರುವ ಮಾತೃದೇವತಾ ಆರಾಧನೆಯ ಪರಂಪರೆಯು ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿತ್ತೆಂಬುದನ್ನು ಕ್ಷೇತ್ರಕಾರ್ಯದಲ್ಲಿ ಕಂಡುಬಂದ ಕೆಲವೊಂದು ದೇವಾಲಯಗಳು ಹಾಗೂ ಮೂರ್ತಿಶಿಲ್ಪಗಳಿಂದ ಕಂಡುಬಂದಿದೆ. ಇಲ್ಲಿನ ಪ್ರಮುಖ ಶಾಕ್ತದೇವಾಲಯಗಳ ವಿವರ ಕೆಳಗಿನಂತಿದೆ.

## ಗಾಳಿ ಮಾರಮ್ಮನ ಗುಡಿ

ಈ ದೇವಾಲಯವು ಮೊಳಕಾಲ್ಮೂರಿನಿಂದ ಪೂರ್ವಾಭಿಮುಖವಾಗಿ ರಾಯದುರ್ಗಕ್ಕೆ ಹೋಗುವ ಮುಖ್ಯರಸ್ತೆಯ ಬಲಬದಿಯಲ್ಲಿ ಕಂಡುಬರುತ್ತದೆ. ಊರಿನಿಂದ ಸು. ೫ಕಿ.ಮೀ.ಗಳ ದೂರದಲ್ಲಿನ ಕರ್ನಾಟಕ ಆಂಧ್ರಪ್ರದೇಶದ ಗಡಿಯಂಚಿನಲ್ಲಿರುವ ಈ ದೇವಾಲಯವು ಒಂದು ಚಿಕ್ಕ ಗುಡಿಯಾಗಿದೆ. ಪೂರ್ವಾಭಿಮುಖವಾಗಿರುವ ಈ ಗುಡಿಯು ನಶಿಸುವ ಸ್ಥಿತಿಯಲ್ಲಿದ್ದುದರಿಂದ ಸ್ಥಳೀಯರೆಲ್ಲಾ ಸೇರಿ, ಈಗಿರುವ ದೇವಾಲಯವನ್ನು ಜೀರ್ಣೋದ್ಧಾರಗೊಳಿಸಿದ್ದಾರೆ. ಪ್ರಸ್ತುತ ದೇವಾಲಯವು ಗರ್ಭಗೃಹ ಮತ್ತು ತೆರೆದ ಸಭಾಮಂಟಪವನ್ನು ಒಳಗೊಂಡಿದೆ. ಇಲ್ಲಿನ ಗರ್ಭಗುಡಿಯಲ್ಲಿ ಕುದುರೆಯ ಮೇಲೆ ಕತ್ತಿಹಿಡಿದು ಕುಳಿತಿರುವಂತಹ ದೇವಿಯ ಮರದ ಮೂರ್ತಿಶಿಲ್ಪವಿದ್ದು, ಗರ್ಭಗೃಹದ ಬಾಗಿಲು ವಾಡವು ಹಿತ್ತಾಳೆಯ ಲೋಹದಿಂದ ಲೇಪನಗೊಂಡಿದ್ದು ಸಿಂಹ, ಮಯೂರ, ಗಣೇಶ ಹಾಗೂ ಹೂಬಳ್ಳಿಗಳ ಅಲಂಕಾರ ಮತ್ತು ಕೆಳಭಾಗದಲ್ಲಿ ದ್ವಾರಪಾಲಕರ ಉಬ್ಬುಶಿಲ್ಪಗಳಿಂದ ಕೂಡಿದೆ. ಗರ್ಭಗೃಹದ ಮುಂಭಾಗದಲ್ಲಿ ತೆರೆದ ಸಭಾಮಂಟಪವಿದ್ದು, ಅದರ ಮುಂಭಾಗದ ಬಯಲಿನಲ್ಲಿ ದೀಪಸ್ತಂಭವಿದೆ. ಈ ದೇವಾಲಯದ ಉತ್ತರದ ವಿಶಾಲ ಬಯಲಿನಲ್ಲಿ ದೇವಿಯ ಉತ್ಸವಾಚರಣೆಯಲ್ಲಿ ನಡೆಸುವ ಸಿಡಿ ಹಾಡುವಿಕೆಯ ಕಂಬ ಕಂಡುಬರುತ್ತದೆ. ಹಾಗೆಯೇ ದೇವಾಲಯದ ದಕ್ಷಿಣಕ್ಕೆ ತಾಕಿಕೊಂಡಂತೆ ಮುಂಭಾಗದಲ್ಲಿ ಒಂದು ವಿಶಾಲವಾದ ವಿಜಯನಗರೋತ್ತರ

ಕಾಲದ ಹಾಳಾದ ಪುಷ್ಕರಣಿಯಿದೆ. ಸಂಪೂರ್ಣವಾಗಿ ಗಾರೆ ಮತ್ತು ಸ್ಥಳೀಯ ಕಲ್ಲುಗಳಿಂದ ಆಧುನಿಕ ಕಾಲದಲ್ಲಿ ನಿರ್ಮಿತಗೊಂಡಿರುವ ಈ ಗುಡಿಯ ಸ್ಥಿತಿಯು ಸುಸ್ಥಿತಿಯಲ್ಲಿದೆ.

**ದುರ್ಗಾದೇವಿ ದೇವಾಲಯ**

ಹಾನಗಲ್ ರಸ್ತೆಯಲ್ಲಿರುವ ಹೌಸಿಂಗ್‌ಬೋರ್ಡ್ ಕಾಲೋನಿಯ ಸಮೀಪದಲ್ಲಿ ಸ್ವಕುಳಸಾಳಿ ಸಮಾಜದ 'ಏಕಬೋಟೆ' ವಂಶಸ್ಥರ ಉಸ್ತುವಾರಿಯ ಈ ದೇವಿ ಪಟ್ಟಣದ 'ನಗರ ದೇವತೆ'ಯಾಗಿದ್ದಾಳೆ. ಇಲ್ಲಿನ ಸ್ಥಳೀಯರಾದ ಕಟುಕರ ನಾಗೋಜಿ ಮೂಲಪುರುಷರು ಈ ದೇವಿಗೆ ತಮ್ಮ ಕೃಷಿಭೂಮಿಯಲ್ಲಿಯೇ ದೇವಾಲಯವನ್ನು ನಿರ್ಮಿಸಿ ಪೂಜಿಸುತ್ತಾ ಬರುತ್ತಿದ್ದರು. ನಾಗೋಜಿ ಕಪಿಲೆಯ ವಂಶಸ್ಥರು ಅಳಿದು ಹೋದ ಮೇಲೆ ಈ ದೇವಾಲಯದ ನಿರ್ವಾಹಣೆಯು ಕುರಾಕಲಹಟ್ಟಿಯ ಯಾದವ ಸಮುದಾಯದವರಿಗೆ, ನಂತರ ಸ್ವಕುಳಸಾಳಿ ಸಮಾಜದ ಏಕಬೋಟಿ ವಂಶಸ್ಥರ ಅಧೀನಕ್ಕೆ ಬರುತ್ತದೆ. ಹಾಗಾಗಿ ಇಂದಿಗೂ ಇದರ ನಿರ್ವಹಣೆಯನ್ನು ಏಕಬೋಟಿ ವಂಶಸ್ಥರೇ ವಹಿಸಿಕೊಂಡು ಬರುತ್ತಿದ್ದಾರೆ.

ಸುತ್ತಲೂ ಪ್ರಕಾರದ ಗೋಡೆಯನ್ನು ಒಳಗೊಂಡಿರುವ ಈ ದೇವಾಲಯದ ಪ್ರವೇಶದ್ವಾರ ಪೂರ್ವಾಭಿಮುಖವಾಗಿದೆ. ಪ್ರವೇಶದ್ವಾರದ ಒಳಗಿರುವ ವಿಶಾಲವಾದ ಪ್ರಾಂಗಣದ ಮಧ್ಯದಲ್ಲಿ ನಿರ್ಮಿತಗೊಂಡಿರುವ ಈ ದೇವಾಲಯವು ಪೂರ್ವಾಭಿಮುಖವಾಗಿದೆ. ಸು. ನಾಲ್ಕು ಅಡಿ ಎತ್ತರದ ಅಧಿಷ್ಠಾನದ ಮೇಲೆ ಸ್ಥಳೀಯ ಕಲ್ಲು ಬಂಡೆಗಳಿಂದ ನಿರ್ಮಿತಗೊಂಡಿರುವ ಈ ದೇವಾಲಯವು ಗರ್ಭಗುಡಿ ಮತ್ತು ಸಭಾಮಂಟಪವನ್ನು ಒಳಗೊಂಡಿದೆ. ಇಲ್ಲಿನ ಗರ್ಭಗೃಹದ ಒಳಗೆ ದೇವಿಯ ಮರದ ಮೂರ್ತಿಯಿದ್ದು, ಅದನ್ನು ಹೂ, ಎಲೆಗಳಿಂದ ಅಲಂಕೃತಗೊಳಿಸಿದ್ದಾರೆ. ಗರ್ಭಗುಡಿಯ ಮುಂಭಾಗದ ಸಭಾಮಂಟಪದಲ್ಲಿ ಸ್ಥಳೀಯ ಶೈಲಿಯಲ್ಲಿ ರಚಿತಗೊಂಡಂತಹ ನಾಲ್ಕು ಕಂಬಗಳಿವೆ. ಇಲ್ಲಿನ ಸುತ್ತಲಿನ ಪ್ರಾಕಾರ ಗೋಡೆಯ ಒಳಭಾಗದಲ್ಲಿ ಸುತ್ತಲೂ ಕೋಷ್ಟಕಗಳನ್ನು ರಚಿಸಲಾಗಿದೆ. ಹಾಗೂ ಮಂಟಪಗಳ ರಚನೆಯೂ ಸಹ ಕಂಡುಬಂದಿದೆ. ಗರ್ಭಗುಡಿಯ ಮೇಲೆ ಗುಮ್ಮಟಾಕಾರದ ಗೋಪುರ ಸ್ಥಳೀಯ ಶೈಲಿಯಲ್ಲಿ ನಿರ್ಮಾಣಗೊಂಡಿದೆ. ಈ ದೇವಾಲಯದ ಪ್ರವೇಶದ್ವಾರದ ಮುಂಭಾಗದಲ್ಲಿ ದೇವಿಯ ಪಾದಗಳಿದ್ದು, ಅವುಗಳ ಸುತ್ತಲೂ ನಾಗ ಶಿಲ್ಪಗಳ ಕೆತ್ತನೆಗಳಿವೆ. ಇದಕ್ಕೆ ಕಟ್ಟೆಯೊಂದನ್ನು ನಿರ್ಮಿಸಿದ್ದಾರೆ. ಅಷ್ಟೇ ಅಲ್ಲದೇ ಇಲ್ಲಿನ ಬೃಹದಾಕಾರದ ಶಮೀವೃಕ್ಷಕ್ಕೆ ಕಟ್ಟೆಯೊಂದನ್ನು ನಿರ್ಮಿಸಿ ಅದರ ಮೇಲೆನೂ ಹಲವಾರು ನಾಗರಶಿಲ್ಪಗಳನ್ನು ಪ್ರತಿಷ್ಠಾಪಿಸಿದ್ದಾರೆ. ಸ್ಥಳೀಯ ಕಲ್ಲು ಬಂಡೆಗಳಿಂದ ನಿರ್ಮಾಣಗೊಂಡಿರುವ ಈ ದೇವಾಲಯವು ಸುಸ್ಥಿತಿಯಲ್ಲಿದೆ.

**ಮಾಹೇಶ್ವರಿ ಗುಡಿ**

ಮೊಳಕಾಲ್ಮೂರುವಿನ ದೊಡ್ಡಪೇಟೆಯ ಚಾವಡಿಯಿಂದ ಉತ್ತರಕ್ಕಿರುವ ಧವಳಪ್ಪನ ಬೀದಿಯಲ್ಲಿ ಈಗ ದೇವಾಲಯವಿರುವ ಸ್ಥಳದಲ್ಲಿರುವ ಬೇವಿನ ಮರದ ಕೆಳಗೆ ಹಿಂದೆ ಮಣ್ಣಿನ ಆಕೃತಿಯ

ರೂಪದಲ್ಲಿದ್ದ ದೇವಿಗೆ ಇತ್ತೀಚಿನ ವರ್ಷಗಳಲ್ಲಿ ಶಿಲಾಮೂರ್ತಿಯನ್ನು ನಿರ್ಮಿಸಿ ಒಂದಂಕಣದ ಗುಡಿಯೊಂದನ್ನು ನಿರ್ಮಿಸಲಾಗಿದೆ. ಇದು ಮೂಲತಃ ಶಾಕ್ತ ದೇವತೆಯಾಗಿದ್ದರೂ, ಈ ಗುಡಿಯ ಮುಂದೆ ಪ್ರಾಣಿಬಲಿ ನಡೆಯುವುದಿಲ್ಲ. ಬದಲಿಗೆ ಮೊಸರನ್ನವನ್ನು ದೇವಿಯ ನೈವೇದ್ಯಕ್ಕೆ ಬಳಸುವುದು ವಿಶೇಷವಾಗಿದೆ. ದೇವಿಯ ಉತ್ಸವದ ಸಮಯದಲ್ಲಿ ಇಲ್ಲಿನ ಹಿರೇಮಠದ ಉಸ್ತುವಾರಿಗಳಾದ ಚೆನ್ನವೀರಯ್ಯ ಸ್ವಾಮಿಯವರ ಮನೆಯಿಂದಲೇ ಮೊದಲ ಪೂಜೆ ನಡೆಯುತ್ತದೆ. ಆನಂತರ ದೇವಿಗೆ ಸಾರ್ವಜನಿಕರಿಂದ ಸಾಂಧರ್ಭಿಕ ಪೂಜೆಗಳು ನಡೆಯುತ್ತವೆ.

ಹೀಗೆ ಪಟ್ಟಣದಲ್ಲಿ ಈ ರೀತಿಯ ಒಂದು ಅಂಕಣದಿಂದ ಕಂಡಿದಂತಹ ಶಾಕ್ತ ದೇವತೆಗಳ ಆಲಯಗಳು ಅಂಬೇಡ್ಕರ್ ನಗರದ ಕೊಲ್ಲಾರಮ್ಮ ಬಯಲು ಆಂಜಿನೇಯ ಬಡಾವಣೆಯ ಚೌಡೇಶ್ವರಿ, ರಾಯದುರ್ಗದ ರಸ್ತೆಯಲ್ಲಿ ಬನ್ನಿ ಮಹಾಕಾಳಿಯಮ್ಮ, ಕನಕ ಹಟ್ಟಿಯ–ವೀರಣ್ಣನಗುಡಿ ಎಂದು ಕರೆಯಲಾಗುವ ಮಾರಮ್ಮನಗುಡಿ, ಹುಲಿಮರಿತಿಪ್ಪೆಯ ಮಲಿಯಮ್ಮ ತೋಣಪೇ ಮಾರಮ್ಮ ಎಂಬ ಹಲವಾರು ಚಿಕ್ಕಚಿಕ್ಕ ಗುಡಿಗಳಿರುವುದು ಕಂಡುಬಂದಿದೆ.

ಒಟ್ಟಾರೆಯಾಗಿ ಅಧ್ಯಯನ ಪ್ರದೇಶದಲ್ಲಿ ಶಾಸನ ಉಲ್ಲೇಖಿತ ದೇವಾಲಯಗಳು ಹಾಗೂ ಪ್ರಾಚೀನ ಕಾಲದ ದೇವಾಲಯಗಳು ಮತ್ತು ಉತ್ತಮ ವಾಸ್ತುಶಿಲ್ಪವನ್ನು ಹೊಂದಿರುವಂತಹ ದೇವಾಲಯಗಳು ಕಂಡು ಬಂದಿಲ್ಲ. ಇಲ್ಲಿನ ಕೋಟೆ ಆಂಜನೇಯ, ಜನ್ನಿಗೆ ಪಾಲು ಆಂಜಿನೇಯ, ವೆಂಕಟರಮಣ ದೇವಾಲಯ, ಹಿರೇಮಠದಂತಹ ದೇವಾಲಯಗಳು ವಿಜಯನಗರೋತ್ತರ ಕಾಲದಲ್ಲಿ ನಿರ್ಮಾಣಗೊಂಡರೇ ಉಳಿದೆಲ್ಲಾ ದೇವಾಲಯಗಳು ೨೦ನೇ ಶತಮಾನದ ಕಾಲದಲ್ಲಿ ಸ್ಥಳೀಯ ಶೈಲಿಯಲ್ಲಿ ರಚಿತಗೊಂಡಿವೆ. ಇದರಿಂದ ಇಲ್ಲಿನ ದೇವಾಲಯಗಳು ವಾಸ್ತುಶಿಲ್ಪದ ಹಿನ್ನೆಲೆಯಲ್ಲಿ ಮಹತ್ವ ಪಡೆಯದಿದ್ದರೂ ಉತ್ತಮವಾದ ನಂಬಿಕೆ–ಆಚರಣೆಗಳಿಂದ ಸ್ಥಳೀಯ ಜನರನ್ನು ತಮ್ಮೆಡೆಗೆ ಸೆಳೆದು ಭಕ್ತಿ ಪರಂಪರೆಯ ಕೇಂದ್ರಗಳಾಗಿದ್ದು ಇಲ್ಲಿನ ಸಾಂಸ್ಕೃತಿಕ ಪರಂಪರೆಯನ್ನು ಅರೆಯಲು/ಸಾರುವಲ್ಲಿ ಪ್ರಮುಖ ಪಾತ್ರವಹಿಸಿವೆ.

**೩.೧.೨. ರಕ್ಷಣಾವಾಸ್ತುಶಿಲ್ಪ**

ಸಾವಿರಾರು ವರ್ಷಗಳ ಸುದೀರ್ಘ ಇತಿಹಾಸವನ್ನೊಂದಿರುವ ಪ್ರಾಚೀನ ಕರ್ನಾಟಕದಲ್ಲಿ ಆಡಳಿತ ನಡೆಸಿ ಮರೆಯಾಗಿ ಹೋಗಿರುವ, ಹಲವಾರು ರಾಜಮನೆತನಗಳ ಹಾಗೂ ಸಣ್ಣಪುಟ್ಟ ಪಾಳೆಯಗಾರರ ಕಾಲದಲ್ಲಿ ನಡೆದ ಘೋರ ಕದನಗಳಿಂದ ಹಾಗೂ ಪರಕೀಯರ ದಾಳಿಗಳಿಂದ ಹಲವಾರು ಸ್ಮಾರಕಗಳು ನಶಿಸಿ ಹೋಗಿವೆ. ಆದರೂ ಕೆಲವೊಂದು ಅಳಿದುಳಿದಿರುವ ಶಾಸನಗಳು, ಶಾಸನ ಶಿಲ್ಪಗಳು, ದೇವಾಲಯಗಳು, ಅರಮನೆ, ಕಟ್ಟಡಗಳ ಅವಶೇಷಗಳು ಮತ್ತು ಕೋಟೆ ಕೊತ್ತಲಗಳೆಂಬ ಮೊದಲಾದ ಸ್ಮಾರಕಾವಶೇಷಗಳು, ಗತಕಾಲದ ಚರಿತ್ರೆ ಮತ್ತು ಸಂಸ್ಕೃತಿಯ ಕುರುಹುಗಳಾಗಿ ಇಂದಿಗೂ ಉಳಿದುಕೊಂಡು ಬಂದಿರುವುದರ ಜೊತೆಗೆ ತಮ್ಮ ಗತವೈಭವ

ಸಾರುತ್ತಿರುವುದನ್ನು ಕಾಣಬಹುದು.[೩೧] ಈ ಸ್ಮಾರಕಾವಶೇಷಗಳ ನೆರವಿನಿಂದ ಗತಕಾಲದ ಜೀವನ ಕ್ರಮವನ್ನು ಅರಿಯಬಹುದಾಗಿದೆ. ಸಾಮಾನ್ಯವಾಗಿ ಭೂಮಿಯ ಮೇಲೆ ವಾಸಿಸುವ ಪ್ರತಿಯೊಂದು ಜೀವಿಯು ಸಹ ಬದುಕುಳಿಯಬೇಕೆಂದರೇ ಆ ಜೀವಿಗಳಿಗೆ ಪ್ರಕೃತಿಯಲ್ಲಿ ಸಹಜವಾಗಿ ಸಂಭವಿಸುವಂತಹ ಭೂಕಂಪ, ಚಂಡಮಾರುತ, ನೆರೆಹಾವಳಿ, ಅಧಿಕ ಬಿಸಿಲು, ಅಧಿಕ ಚಳಿ, ಅತೀ ವೃಷ್ಠಿ ಹಾಗೂ ಅನಾವೃಷ್ಠಿಗಳೆಂಬ ಮುಂತಾದ ನೈಸರ್ಗಿಕ ವಿಕೋಪಗಳಿಂದ ರಕ್ಷಣೆಯು ಅತ್ಯಗತ್ಯವಾಗಿರುತ್ತದೆ. ಹೀಗಾಗಿ ಕೆಲವೊಂದು ಜೀವಿಗಳು ದಪ್ಪನೆಯ ಚರ್ಮ, ಎಣ್ಣೆ, ಉಗುರು, ಚಿಪ್ಪಿನಂತಹ ಮೇಲು ಹೊದಿಕೆ ಎಂಬ ಮುಂತಾದ ನೈಸರ್ಗಿಕ ವಸ್ತುಗಳಿಂದ ರಕ್ಷಣೆಯನ್ನು ಪಡೆದರೆ, ಮಾನವನಿಗೆ ಯಾವುದೇ ರೀತಿಯ ರಕ್ಷಣಾ ವಸ್ತುಗಳಿಲ್ಲದರಿಂದ ಆತನು ತನ್ನ ಬುದ್ಧಿವಂತಿಕೆಯಿಂದ ತನ್ನ ರಕ್ಷಣೆಗಾಗಿ ಹಲವಾರು ಮನೆ, ಮಠ, ಮಂದಿರಗಳನ್ನು ನಿರ್ಮಿಸಿಕೊಂಡನು.[೩೨]

ಸಮಾಜಶಾಸ್ತ್ರಜ್ಞರುಗಳು ಹೇಳುವಂತೆ "ಮಾನವ ಮೂಲತಃ ಸಂಘಜೀವಿ ಮತ್ತು ಸಮಾಜಜೀವಿ"ಯಾಗಿದ್ದಾನೆ. ಇವನು ತನ್ನ ಅಲೆಮಾರಿ ಜೀವನದಿಂದ ಪ್ರಗತಿಯನ್ನು ಹೊಂದಿ ಸ್ಥಿರವಾಗಿ ಒಂದು ಕಡೆ ನೆಲೆನಿಂತಾಗ ವಿವಿಧ ವಿಶಿಷ್ಟ ಹಿತಾಸಕ್ತಿಯ ಸಮಾಜಗಳು ನಿರ್ಮಾಣಗೊಂಡವು. ಈ ಆರಂಭಿಕ ಸಮಾಜದ ಜನರು ಮೊದಲು ಚಿಕ್ಕ ಚಿಕ್ಕ ಗುಂಪುಗಳಾಗಿ ವಾಸಿಸುತ್ತಿದ್ದು, ಕಾಲಕ್ರಮೇಣ ಈ ಗುಂಪುಗಳಲ್ಲಿ ಜನಸಂಖ್ಯೆ ಹೆಚ್ಚಾಗಿ, ಕುಟುಂಬ ವ್ಯವಸ್ಥೆ ಬೆಳೆದು ಆನಂತರ ಅನೇಕ ಕುಟುಂಬಗಳು ಜೊತೆಗೂಡಿ ಊರುಗಳಾದವು. ಹೀಗೆ ಮಾನವನು ತಾನು ನೆಲೆನಿಂತಿದ್ದ ಊರಿನ ಸುತ್ತಮುತ್ತಲಿನ ಪರಿಸರದ ಅಭದ್ರತೆಯ ಕುರಿತಾಗಿ ಯೋಚಿಸಿ ತನ್ನ ಹಾಗೂ ತನ್ನ ಕುಟುಂಬದ ರಕ್ಷಣೆಯ ಸಲುವಾಗಿ ಕೋಟೆ ಕಟ್ಟಿಕೊಳ್ಳುವುದನ್ನು ಆರಂಭಿಸಿದನು.[೩೩] ಈ ಊರುಗಳು ನಂತರದಲ್ಲಿ ಪಟ್ಟಣಗಳಾಗಿ, ನಗರಗಳಾಗಿ ಹಾಗೂ ರಾಜ್ಯ-ಸಾಮ್ರಾಜ್ಯಗಳಾಗಿ ಪರಿಣಮಿಸಿದವು. ಹೀಗೆ ಉಗಮಗೊಂಡ ರಾಜ್ಯ ಅಥವಾ ಸಾಮ್ರಾಜ್ಯಕ್ಕೆ, ಆ ರಾಜ್ಯವನ್ನಾಳುವ ರಾಜನಿಗೆ ಮತ್ತು ಆ ರಾಜ್ಯದ ಪ್ರಧಾನ ಕೇಂದ್ರವಾದ ರಾಜಧಾನಿ ರಕ್ಷಣೆಗೆ ಕೋಟೆಗಳ ನಿರ್ಮಾಣದ ಅವಶ್ಯಕತೆ ಅನಿವಾರ್ಯವಾಯಿತು.

ಪ್ರಾಚೀನ ಸಾಹಿತ್ಯ ಕೃತಿಗಳಲ್ಲೊಂದಾದ ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ತಿಳಿದುಬಂದಿರುವಂತೆ ರಾಜ್ಯವೊಂದಕ್ಕೆ ರಾಜ(ಪ್ರಭು), ಅಮಾತ್ಯ(ಮಂತ್ರಿ), ರಾಷ್ಟ್ರ(ರಾಜ್ಯ/ಸಂಸ್ಥಾನ), ದುರ್ಗ(ಕೋಟೆ), ಕೋಶ(ಖಜಾನೆ), ದಂಡ(ಸೈನ್ಯ) ಮತ್ತು ಮಿತ್ರ(ಮಿತ್ರರಾಜ್ಯ) ಎಂಬ ಏಳು "ಸಪ್ತಾಂಗಗಳು" ಅತ್ಯವಶ್ಯಕ. ಈ ಏಳು ಸಪ್ತಾಂಗಗಳಲ್ಲಿ 'ದುರ್ಗ'/ಕೋಟೆಯು ಒಂದಾಗಿದೆ. ರಾಜ್ಯ ಹಾಗೂ ರಾಜ್ಯದಲ್ಲಿನ ಪ್ರಜೆಗಳ ರಕ್ಷಕನಾದ ರಾಜನಿಗೆ ತನ್ನ ರಾಜ್ಯವನ್ನು ರಕ್ಷಿಸುವ, ವಿಸ್ತರಿಸುವ ಹಾಗೂ

ನೆರೆಯ ರಾಜ್ಯವನ್ನು ಕಬಳಿಸುವ ಸಲುವಾಗಿ ಯುದ್ಧವನ್ನು ಕೈಗೊಳ್ಳಲು ಕೋಟೆಯ ಅಗತ್ಯತೆ ಅನಿವಾರ್ಯವಾಗಿದೆ.[೩೪] ಹೀಗಾಗಿ ಕೌಟಿಲ್ಯನು ತನ್ನ 'ಅರ್ಥಶಾಸ್ತ್ರ'ವೆಂಬ ಗ್ರಂಥದಲ್ಲಿ ರಾಜನಾದವನು ತನ್ನ ರಾಜ್ಯದ ಗಡಿಯ ನಾಲ್ಕು ದಿಕ್ಕುಗಳಲ್ಲಿಯೂ ಶತ್ರುಗಳನ್ನು ತಡೆಗಟ್ಟಲು ಸೂಕ್ತವಾದ ಕೋಟೆಗಳನ್ನು ಕಟ್ಟಬೇಕೆಂದು ಹೇಳಿದ್ದಾನೆ. ಹಾಗೆಯೇ ರಾಜನೀತಿ ಪ್ರಾಕಾರದಲ್ಲಿ ಬೃಹಸ್ಪತಿಯ ವಚನವೊಂದು ರಾಜನು ತನ್ನ ರಾಣಿಯ, ತನ್ನ ಜನರ ಹಾಗೂ ಸಂಪತ್ತಿನ ರಕ್ಷಣೆಗಾಗಿ ಭದ್ರವಾದ ಕೋಟೆ ಮತ್ತು ಬಾಗಿಲುಗಳನ್ನೊಳಗೊಂಡ ಕೋಟೆಯನ್ನು ಅವಶ್ಯಕವಾಗಿ ಕಟ್ಟಲೇಬೇಕೆಂದು ಉಲ್ಲೇಖಿಸುತ್ತದೆ.[೩೫] ಇದನ್ನು ಗಮನಿಸಿದರೆ ಒಂದು ಕೋಟೆಯು ರಾಜನಿಗೆ ಸಮಾನವಾದುದು ಎನ್ನಬಹುದಾಗಿದೆ. ಅಂದರೆ ರಾಜ್ಯದ ಉಳಿವಿಗೆ ರಾಜನ ಪಾತ್ರ ಎಷ್ಟು ಮುಖ್ಯವೋ ಆತನು ಕಟ್ಟಿಸಿದ ಕೋಟೆಯೂ ಸಹ ಅಷ್ಟೇ ಮುಖ್ಯವಾಗಿರುತ್ತದೆ. ಈ ಹಿನ್ನೆಲೆಯಲ್ಲಿಯೇ ಕಾಮಂದಕನೆಂಬ ವಿದ್ವಾಂಸ ತನ್ನ 'ನೀತಿಸಾರ' ಎಂಬ ಕೃತಿಯಲ್ಲಿ "ಭದ್ರವಾದ ಕೋಟೆಯಿಲ್ಲದ ರಾಜ ಬಿರುಗಾಳಿಗೆ ಸಿಕ್ಕಿದ ಮೋಡದ ತುಣುಕುಗಳಿಗೆ ಸಮಾನ" ಎಂದಿದ್ದಾನೆ.[೩೬] ಹಾಗೆಯೇ ಚನ್ನಬಸಪ್ಪ ಎಸ್.ಪಾಟೀಲರು ಕೋಟೆಯಿಲ್ಲದ ರಾಜನನ್ನು "ಬಿರುಗಾಳಿಗೆ ಸಿಲುಕಿದ ಮೋಡದಂತೆ, ಮದರಹಿತವಾದ ಆನೆಯಂತೆ ಹಾಗೂ ವಿಷರಹಿತವಾದ ಹಾವಿನಂತೆ"[೩೭] ಎಂದಿದ್ದಾರೆ. ಜೆ.ಟಿ.ಡಾಂಟೆಯವರು ಹೇಳುವಂತೆ "ಗತಕಾಲದ ಕೋಟೆಗಳು ರಾಜಧಾನಿಯ ರಕ್ಷಣಾ ಸಾಧನಗಳಾಗಿದ್ದವು."[೩೮] ಈ ಮಾತಿನಿಂದ ಪ್ರತಿಯೊಂದು ರಾಜ್ಯದ ರಾಜಧಾನಿಗೂ ಸಹ ಕೋಟೆಯು ಅವಶ್ಯಕವಿತ್ತೆನಿಸುತ್ತದೆ. ಹಾಗಾಗಿ ಪ್ರತಿ ರಾಜ್ಯದ ರಾಜಧಾನಿಯೂ ಸಹ ತನ್ನದೇ ಆದಂತ ರಕ್ಷಣಾ ವ್ಯವಸ್ಥೆಯ ಸಲುವಾಗಿ ಕೋಟೆಗಳನ್ನು ಹೊಂದಿರಬೇಕಿತ್ತು/ಹೊಂದಿದ್ದವು. ಕೋಟೆಯಿಲ್ಲದ ರಾಜಧಾನಿಯನ್ನು ಊಹಿಸಲು ಸಾಧ್ಯವಿಲ್ಲ. ಈ ವಿಷಯದಲ್ಲಿ ಕೊಟೆಯು ರಾಜಕೀಯವೆಂಬ ದೇಹದ ಪ್ರಮುಖ ಹಾಗೂ ಅನಿವಾರ್ಯದ ಅಂಗವಾಗಿತ್ತು. ಯಾವುದೇ ರಾಜ್ಯದ ರಾಜಧಾನಿಯು ದೇಹದಲ್ಲಿನ ಹೃದಯವಿದ್ದಂತೆ. ರಾಜಧಾನಿಯನ್ನು ವಶಪಡಿಸಿಕೊಂಡರೆ ಇಡೀ ರಾಜ್ಯವೇ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುತ್ತಿತ್ತು. ಹೀಗಾಗಿ ರಾಜರುಗಳು ತಮ್ಮ ರಾಜ್ಯವನ್ನು ರಕ್ಷಿಸಿಕೊಳ್ಳಲು ರಾಜಧಾನಿ ಹಾಗೂ ರಾಜ್ಯದ ಗಡಿ ಪ್ರದೇಶಗಳಲ್ಲಿ ಬೃಹದಾಕಾರದ ಕೋಟೆಗಳನ್ನು ಕಟ್ಟಿಸುತ್ತಿದ್ದರು.[೩೯] ಈ ನಿಟ್ಟಿನಲ್ಲಿ ಯಾವುದೇ ಕೋಟೆಯ ರಚನೆ, ವಿನ್ಯಾಸ ಹಾಗೂ ಇತಿಹಾಸವನ್ನು ತಿಳಿಯುವ ಪೂರ್ವದಲ್ಲಿ ಕೋಟೆಯ ಅರ್ಥ, ನಿರ್ಮಾಣದ ಉದ್ದೇಶ ಹಾಗೂ ವಿಧಗಳನ್ನು ತಿಳಿದುಕೊಳ್ಳುವುದು ಅತ್ಯವಶ್ಯಕವಾಗಿರುತ್ತದೆ.

ಸಾಮಾನ್ಯವಾಗಿ ಕೋಟೆ ಎಂದರೇ ರಕ್ಷಣೆಯ ಆವರಣ ಉಳ್ಳ ಪ್ರದೇಶ ಎಂದರ್ಥ.[೪೦] ಕೋಟೆ ಎಂದರೇ ಗಟ್ಟಿಯಾದ ಸ್ಥಳ. ಜನರು ವಾಸಿಸುವ ಇಂತಹ ಗಟ್ಟಿಯಾದ ಸ್ಥಳದಲ್ಲಿ

ರಕ್ಷಣೆ ಹಾಗೂ ಭದ್ರತೆಯನ್ನು ಒದಗಿಸುವುದೆಂದರ್ಥ. ಕೋಟೆಯನ್ನು ಸಂಸ್ಕೃತದಲ್ಲಿ 'ದುರ್ಗ'ವೆಂದು, ತಮಿಳು ಸಾಹಿತ್ಯದಲ್ಲಿ "ಕೋಟೈ" ಎಂದು, ತೆಲುಗು ಸಾಹಿತ್ಯದಲ್ಲಿ 'ಕೋಟ' ಎಂದು, ಹಳೆಗನ್ನಡ ಸಾಹಿತ್ಯದಲ್ಲಿ "ಕೋಂಟೆ" ಎಂದು ಕರೆದರೆ ವೈದಿಕ ಸಾಹಿತ್ಯದಲ್ಲಿ 'ಪುರ'(ಅಂದರೆ ಭದ್ರವಾದ ಕೋಟೆಯನ್ನು ಹೊಂದಿರುವ ಪಟ್ಟಣ) ಎಂದು ಕರೆಯಲಾಗಿದೆ. ಅಂದರೆ ಇಲ್ಲಿ ಕೋಟೆ ಮತ್ತು ಪಟ್ಟಣಗಳೆರಡನ್ನೂ ಸರಿಸಮವೆಂದು ಪರಿಗಣಿಸಲಾಗಿದೆ.[೪೧] ಹಾಗೆಯೇ ಕೋಟೆಯನ್ನು ಆಂಗ್ಲಭಾಷೆಯಲ್ಲಿ Fort ಎಂದು ಕರೆಯಲಾಗುತ್ತದೆ. ಫೋರ್ಟ್ ಎಂಬ ಈ ನಾಲ್ಕು ಅಕ್ಷರಗಳ ಅರ್ಥವನ್ನು ನೋಡುವುದಾದರೆ F=Formidable, O=Obstruct, R=Rampart, T=Tactics ಎಂದು ಹೇಳಬಹುದಾಗಿದೆ.[೪೨] ಶತ್ರುಗಳ ಸಂಭವನೀಯ ದಾಳಿಗಳಿಂದ ರಕ್ಷಿಸಿಕೊಳ್ಳಲು ನಗರ ಅಥವಾ ಗ್ರಾಮದ ಸುತ್ತಲೂ ನಿರ್ಮಿಸಿದ ಎತ್ತರವಾದ ಹಾಗೂ ಭದ್ರವಾದ ರಕ್ಷಣಾ ಗೋಡೆಯನ್ನು ಕೋಟೆ ಎಂದು ಕರೆಯಲಾಗುತ್ತದೆ.[೪೩] ಸಾಮಾನ್ಯವಾಗಿ ದುರ್ಗ, ಕಿಲ್ಲೆ ಎಂಬ ಮೊದಲಾದ ಹೆಸರುಗಳಿಂದ ಕರೆಯಲ್ಪಡುವ ಹಾಗೂ ಯುದ್ದ ಮತ್ತು ರಕ್ಷಣೆಯ ಉದ್ದೇಶಗಳಿಂದಲೇ ನಿರ್ಮಿತಗೊಂಡಂತಹ ಕೋಟೆಗಳೆಲ್ಲವೂ ಸಹ ಒಂದೇ ರೀತಿಯಾಗಿರುವುದಿಲ್ಲ. ಹಾಗಾಗೀ ಕೋಟೆಗಳಲ್ಲಿ ಹಲವಾರು ವಿಧಗಳನ್ನು ಗುರುತಿಸಬಹುದಾಗಿದೆ.

ಕ್ರಿ.ಪೂ.೩ನೇ ಶತಮಾನದಲ್ಲಿ ಮೌರ್ಯಸಾಮ್ರಾಜ್ಯದ ಚಕ್ರವರ್ತಿಯಾದ ಚಂದ್ರಗುಪ್ತ ಮೌರ್ಯನ ಆಸ್ಥಾನದಲ್ಲಿ ಮಂತ್ರಿಯಾಗಿದ್ದ ಕೌಟಿಲ್ಯನು ತನ್ನ "ಅರ್ಥಶಾಸ್ತ್ರ"ದಲ್ಲಿ ಕೋಟೆಗಳನ್ನು ನೈಸರ್ಗಿಕ ಸನ್ನಿವೇಶಗಳಿಗನುಗುಣವಾಗಿ ಔದಕ(ಜಲದುರ್ಗ), ಪರ್ವತ(ಗಿರಿದುರ್ಗ), ದಾನವನ(ಮರುಭೂಮಿದುರ್ಗ), ಖಾಜನ(ಮಿಶ್ರದುರ್ಗ) ಮತ್ತು ವನದುರ್ಗ ಎಂದು ವರ್ಗೀಕರಿಸಿದರೇ, "ವಿಶ್ವಕರ್ಮನ ವಾಸ್ತುಶಿಲ್ಪ"ವು ಪ್ರಾದೇಶಿಕತೆಯ ಹಿನ್ನೆಲೆಯಲ್ಲಿ ಗಿರಿದುರ್ಗ, ವನದುರ್ಗ, ಜಲದುರ್ಗ, ಐರಿಣದುರ್ಗ, ದೈವದುರ್ಗ, ಪರ್ವತದುರ್ಗ, ಕೂರ್ಮದುರ್ಗವೆಂದು ಹಾಗೂ ತಾಂತ್ರಿಕತೆಯ ಆಧಾರದ ಮೇಲೆ ಪ್ರಭುದುರ್ಗ ಮತ್ತು ಯುದ್ಧದುರ್ಗಗಳೆಂದು ವರ್ಗೀಕರಿಸಲಾಗಿದೆ. ಹಾಗೆಯೇ "ಶುಕ್ರನ ನೀತಿಸಾರ"ದಲ್ಲಿ ಐರಿಣದುರ್ಗ, ಪರಿಖದುರ್ಗ, ಪರಿಘದುರ್ಗ, ವನದುರ್ಗ, ಧನ್ವದುರ್ಗ, ಜಲದುರ್ಗ, ಗಿರಿದುರ್ಗ, ಸೈನ್ಯದುರ್ಗ, ಮತ್ತು ಸಹಾಯದುರ್ಗ ಎಂದು ಒಂಬತ್ತು ಬಗೆಯ ಕೋಟೆಗಳನ್ನು ಗುರುತಿಸಿದರೆ, ಸ್ಮೃತಿಕಾರನಾದ ಮನು ಧನುದುರ್ಗ, ಮಹೀದುರ್ಗ, ಜಲದುರ್ಗ, ವೃಕ್ಷದುರ್ಗ, ಗಿರಿದುರ್ಗ ಮತ್ತು ನರದುರ್ಗ ಎಂಬ ಆರು ಪ್ರಕಾರದ ದುರ್ಗಗಳನ್ನು ತಿಳಿಸಿದ್ದಾನೆ. ೧೨ನೇ ಶತಮಾನದ ಚಾಲುಕ್ಯ ದೊರೆಯಾದ ಮೂರನೇ ಸೋಮೇಶ್ವರನ ಅಭಿಲಾಷಿತಾರ್ಥ ಚಿಂತಾಮಣಿ ಮತ್ತು ೧೭ನೇ ಶತಮಾನದ ಕೆಳದಿಯ ಬಸವರಾಜನ ಶಿವತತ್ವರತ್ನಾಕರಗಳಲ್ಲಿ ಜಲದುರ್ಗ, ಗಿರಿದುರ್ಗ, ಪಾಷಾಣದುರ್ಗ,

ಇಷ್ಟಕದುರ್ಗ, ಮೃತ್ತಿಕಾಮಯನ್‌ದುರ್ಗ, ವನದುರ್ಗ, ಮರದುರ್ಗ, ದಾರುಣಮಯದುರ್ಗ ಮತ್ತು ನರದುರ್ಗ ಎಂಬ ಒಂಭತ್ತು ಪ್ರಕಾರಗಳಲ್ಲಿ ಕೋಟೆಯನ್ನು ಉಲ್ಲೇಖಿಸಲಾಗಿದೆ. ಈ ಮೇಲಿನ ಸಾಹಿತ್ಯೀಕ ಕೃತಿಗಳಷ್ಟೇ ಅಲ್ಲದೇ ಪುರಾಣಗಳಿಗೆ ಸಂಬಂಧಿಸಿದಂತೆ ವಾಯುಪುರಾಣದಲ್ಲಿ ನಾಲ್ಕು ಬಗೆಯ, ಅಗ್ನಿ ಮತ್ತು ಮತ್ಸ್ಯ ಪುರಾಣಗಳಲ್ಲಿ ಆರು ಪ್ರಕಾರದಲ್ಲಿ ಕೋಟೆಗಳನ್ನು ಉಲ್ಲೇಖಿಸಿ ವರ್ಗೀಕರಿಸಲಾಗಿದೆ.[೪೪] ಈ ಮೇಲೆ ಸೂಚಿಸಿದ ಕೃತಿಗಳೆಲ್ಲವು ಕೋಟೆಯ ಸ್ಥಳ, ಆಕಾರ ಮತ್ತು ರಚನೆಗೆ ಉಪಯೋಗಿಸಿದ ವಸ್ತುಗಳಾಧಾರದ ಮೇಲೆ ಕೋಟೆಗಳಲ್ಲಿನ ಹಲವಾರು ವಿಧಗಳ ವರ್ಗೀಕರಣವನ್ನು ತಿಳಿಸುತ್ತವೆ.

ಕರ್ನಾಟಕದ ಐತಿಹಾಸಿಕ ಚರಿತ್ರೆಯ ಪುಟಗಳನ್ನು ತಿರುವಿದಾಗ ಇಲ್ಲಿ ಆಡಳಿತ ನಡೆಸಿದ ವಿವಿಧ ರಾಜಮನೆತನದವರು ಹಾಗೂ ಪಾಳೆಯಗಾರರು, ರಾಜ್ಯಕಟ್ಟುವ ಹವ್ಯಾಸದಲ್ಲಿ ತೊಡಗಿ, ಘೋರ ಯುದ್ಧಗಳನ್ನು ಕೈಗೊಂಡು ಜಯಿಸಿದ ನಾಡ ನೆಲದ ರಕ್ಷಣೆಗಾಗಿ ಹಾಗೂ ಅಲ್ಲಿನ ಜನರ ರಕ್ಷಣೆಗಾಗಿ, ಆಯಾ ಕಾಲದ ಯುದ್ಧ ಕಲೆಗೆ ಅನುಗುಣವಾಗಿ ವಿವಿಧ ಬಗೆಯ ಕೋಟೆ-ಕೊತ್ತಲಗಳನ್ನು ನಿರ್ಮಾಣ ಮಾಡಿದರು.[೪೫] "ಕನ್ನಡಿಗರ ಜನಜೀವನದಲ್ಲಿ ತ್ಯಾಗಕ್ಕೆ ಇರುವಷ್ಟು ಮೌಲ್ಯ ವೀರತ್ವಕ್ಕೆ ಇದೆ"[೪೬] ಎಂದು ಹೇಳಿರುವ ಚಿದಾನಂದಮೂರ್ತಿಯವರ ಮಾತು ಕೇವಲ ಕನ್ನಡಿಗರಿಗಷ್ಟೆ ಅಲ್ಲದೇ ಅಖಂಡ ಭಾರತೀಯರೆಲ್ಲರಿಗೂ ಅನ್ವಯಿಸುತ್ತದೆ. ಏಕೆಂದರೆ ಇಂತಹ ವೀರತ್ವವನ್ನು ಪ್ರದರ್ಶಿಸುವಂತಹವುಗಳಲ್ಲಿ ಕೋಟೆ-ಕೊತ್ತಲಗಳು ಬಹುಪ್ರಮುಖವಾದವುಗಳಾಗಿವೆ. ಆದ್ದರಿಂದ ಕೋಟೆ-ಕೊತ್ತಲಗಳನ್ನು ನಿರ್ಮಿಸುವುದು ಹಾಗೂ ಜಯಿಸುವುದು ಹಿಂದೆ ರಾಜಮಹಾರಾಜರುಗಳಿಗೆ ಪ್ರತಿಷ್ಠೆಯಾಗಿತ್ತು. ಈ ನಿಟ್ಟಿನಲ್ಲಿ ಕರ್ನಾಟಕದಲ್ಲಿಯೂ ಅಸಂಖ್ಯಾತ ಕೋಟೆ ಕೊತ್ತಲಗಳು ನಿರ್ಮಾಣಗೊಂಡು ಅಂದಿನ ಗತವೈಭವವನ್ನು ಇಂದಿನ ಚರಿತ್ರೆ ಮತ್ತು ಸಾಂಸ್ಕೃತಿಕ ಅಧ್ಯಯನಕ್ಕೆ ಸಾರುತ್ತಿವೆ. ಕರ್ನಾಟಕದಲ್ಲಿನ ಕೋಟೆಗಳ ಪ್ರಾಚೀನತೆಯನ್ನು ನಾವು ಮೌರ್ಯರ ಕಾಲಕ್ಕೆ ಕೊಂಡೊಯ್ಯಬಹುದು. ಮೌರ್ಯರ ಕಾಲದ ಪ್ರಮುಖ ಪಟ್ಟಣಗಳಲ್ಲೊಂದಾಗಿರುವ 'ಇಸಿಲ'(ಇಂದಿನ ಬ್ರಹ್ಮಗಿರಿ) ಪ್ರದೇಶವು ಕೋಟೆಯಿಂದ ಆವೃತವಾದ ಊರಾಗಿತ್ತೆಂದು ಅಭಿಪ್ರಾಯಪಡಲಾಗಿದೆ.[೪೭] ಇಟ್ಟಿಗೆಗಳಿಂದ ನಿರ್ಮಿಸಿದ ಗುಲ್ಬರ್ಗ ಜಿಲ್ಲೆಯ ಸನ್ನತಿಯಲ್ಲಿನ ಕೋಟೆಯು(ಶಾತವಾಹನರ ಕಾಲದ್ದು) ಕರ್ನಾಟಕದ ಅತ್ಯಂತ ಪ್ರಾಚೀನ ಕೋಟೆಯಾಗಿದೆ. ಬನವಾಸಿಯ ಕೋಟೆಯು ಇದರ ಸಮಕಾಲೀನವಾದುದಾಗಿದೆ.[೪೮] ಹೀಗೆ ಕರ್ನಾಟಕದಲ್ಲಿ ಮೌರ್ಯರ ಕಾಲದಿಂದ ಪಾಳೆಯಗಾರರ ಕಾಲದವರೆಗೆ ಆಡಳಿತ ನಡೆಸಿದ ಹಲವಾರು ಹಿಂದೂ ಮತ್ತು ಮುಸ್ಲಿಂ ದೊರೆಗಳು ಸಾಕಷ್ಟು ಪ್ರಮಾಣದಲ್ಲಿ ಕೋಟೆಗಳನ್ನು ನಿರ್ಮಿಸಿದ್ದಾರೆ. ಕರ್ನಾಟಕದ ಬಾದಾಮಿ, ಸನ್ನತಿ, ರಾಯಚೂರು, ಬಿಜಾಪುರ,

ಚಿತ್ರದುರ್ಗ, ಶ್ರೀರಂಗಪಟ್ಟಣ, ಮುದಗಲ್, ಬನವಾಸಿ, ಶಿರಾ, ಸಾವನದುರ್ಗ, ಉಚ್ಚಂಗಿದುರ್ಗ, ಮಧುಗಿರಿಗಳಲ್ಲಿನ ಕೋಟೆಗಳು ಪ್ರಮುಖವಾದವುಗಳಾಗಿವೆ.[೪೯] ಕೋಟೆಗಳ ನಿರ್ಮಾಣದಲ್ಲಿ ಮೊಳಕಾಲ್ಮೂರು ಪರಿಸರವು ಸಹ ಹೊರತಾಗಿರದೇ ಇಲ್ಲಿನ ಬ್ರಹ್ಮಗಿರಿ, ಸಂತೇಗುಡ್ಡ, ಜಟಂಗಿ ರಾಮೇಶ್ವರ, ಲುಂಕೀಮಲೆ, ಮೊಳಕಾಲ್ಮೂರು, ಉಚ್ಚಂಗಿದುರ್ಗ, ಗುಡ್ಡದಹಳ್ಳಿ[೫೦] ಎಂಬ ಮೊದಲಾದ ಸ್ಥಳಗಳಲ್ಲಿ ಕೋಟೆಗಳು ನಿರ್ಮಾಣಗೊಂಡಿರುವುದನ್ನು ನಾವು ಇಂದಿಗೂ ಕಾಣಬಹುದಾಗಿದೆ. ಈ ನಿಟ್ಟಿನಲ್ಲಿ ಮೊಳಕಾಲ್ಮೂರು ಕೋಟೆಯ ನಿರ್ಮಾಣ, ಇತಿಹಾಸ, ಸ್ಮಾರಕಾವಶೇಷಗಳನ್ನು ವಿಶ್ಲೇಷಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

## ಮೊಳಕಾಲ್ಮೂರು ಕೋಟೆ

ಕಲ್ಲು ಬಂಡೆಗಳ ಮೇಲೆ ನಿರ್ಮಾಣಗೊಂಡಿರುವ, ಈ ಊರಿನ ಸುತ್ತಲೂ ರಕ್ಷಣಾಗೋಡೆಯಂತೆ ಕೋಟೆ ಪ್ರದೇಶವು ಆವರಿಸಿದೆ. ಈ ಊರಿನ ಉತ್ತರಕ್ಕಿರುವ ಬೆಟ್ಟದ ಮೇಲೊಂದು ಕೋಟೆ ಇದೆ. ಈ ಕೋಟೆಯಿರುವ ಪ್ರದೇಶವು ಭೂನಕ್ಷೆಯಲ್ಲಿ ಉತ್ತರ ಅಕ್ಷಾಂಶ ೧೪೦.೪೩ ಮತ್ತು ಪೂರ್ವ ರೇಖಾಂಶ ೭೬೦.೪೫ ಇದ್ದು, ಸಮುದ್ರ ಮಟ್ಟದಿಂದ ೨೭೬೩ ಅಡಿಗಳಷ್ಟು ಎತ್ತರದಲ್ಲಿದೆ.[೫೧] ಇಲ್ಲಿ ಕಂಡುಬರುವ ಕೋಟೆಯು ಒಂದು ಗಿರಿದುರ್ಗವಾಗಿದೆ.[೫೨] ಗಿರಿದುರ್ಗವೆಂದರೇ ಬಹಳ ಎತ್ತರವಾದ ಬೆಟ್ಟದ ಮೇಲೆ ನಿರ್ಮಾಣಗೊಂಡಿರುವಂತಹ ಕೋಟೆಯಾಗಿದೆ. ಅಂದರೆ ಎತ್ತರವಾದ ಬೆಟ್ಟದ ಮೇಲೆ ಅಗಾಧವಾದ, ಅಗಮ್ಯವಾದ, ಅಹ್ಯಾತವಾಗಿ ನೀರಿನಿಂದ ಕೂಡಿದ, ಕಡಿದಾದ ಬಂಡೆಗಳನ್ನು ಹೊಂದಿದ ಮತ್ತು ಇಳಕಲಾದ, ಮೇಲೆ ಮತ್ತು ಕೆಳಗೆ ಅನೇಕ ಪ್ರಾಕಾರಗಳಿಂದ ಸುತ್ತುವರಿಯಲ್ಪಟ್ಟಿರುವ, ಸುಲಭವಾಗಿ ಹತ್ತಲು ಅಸಾಧ್ಯವಾಗಿರುವ ಪಟ್ಟಣವನ್ನು ಗಿರಿದುರ್ಗ ಎಂದು ಕರೆಯಲಾಗುತ್ತದೆ.[೫೩] ಈ ಊರಿನ ಉತ್ತರಕ್ಕಿರುವ "ಕದಂಬಗುಡ್ಡ"[೫೪] ವೆಂದು ಕರೆಯಲಾಗುವ ಬೆಟ್ಟವನ್ನು ಬಳಸಿಕೊಂಡು ದಕ್ಷಿಣದಲ್ಲಿ ಐದು ಸುತ್ತು, ಪೂರ್ವದಲ್ಲಿ ಎರಡು ಸುತ್ತು ಹಾಗೂ ಪಶ್ಚಿಮದಲ್ಲಿ ಅವಶ್ಯಕತೆಯಿರುವ ಕಡೆ ಒಂದು ಸುತ್ತಿನ ಕೋಟೆಯನ್ನು ಕಟ್ಟಲಾಗಿದೆ. ಆದರೆ ಬೃಹತ್ ಗಾತ್ರದ ಕಡಿದಾದ ಬಂಡೆಗಳ ಸಮೂಹವಿರುವ ನೈರುತ್ಯ ದಿಕ್ಕಿನಲ್ಲಿ ಯಾವುದೇ ರೀತಿಯಲ್ಲಿ ಕೋಟೆಯ ಸಾಲುಗಳು ನಿರ್ಮಾಣಗೊಂಡಿಲ್ಲ. ಏಳು ಸುತ್ತಿನ ಕೋಟೆಯಾಗಿರುವ ಇದು ವಿಜಯನಗರದ ಕಾಲದಲ್ಲಿ ನಿರ್ಮಾಣಗೊಂಡು, ಪಾಳೆಯಗಾರರ ಕಾಲದಲ್ಲಿ ಜೀರ್ಣೋದ್ಧಾರ ಗೊಂಡಿತೆಂದು[೫೫] ಎಸ್.ವೈ.ಸೋಮಶೇಖರ್ ಅವರು ಅಭಿಪ್ರಾಯಪಟ್ಟರೇ ಜಯಣ್ಣ ಯು. ಅವರು ನಾಯಕನಹಟ್ಟಿಯ ಪಾಳೆಯಗಾರನಾದ ಕಸ್ತೂರಿಮಲ್ಲಪ್ಪ ನಾಯಕನು ಈ ಕೋಟೆಯನ್ನು ಕಟ್ಟಿಸಿದನೆಂದು ಅಭಿಪ್ರಾಯಪಟ್ಟಿದ್ದಾರೆ.[೫೬] ಈ ಕೋಟೆಯ ನಿರ್ಮಾಣಕ್ಕೆ ಸಂಬಂಧಪಟ್ಟಂತೆ ಏನೇ ಇದ್ದರೂ ಈಗಾಗಲೇ ನಾವು ಕಂಡುಕೊಂಡಂತೆ

ರಾಯದುರ್ಗದ ಪಾಳೆಯಗಾರನಿಂದ ಈ ಬೆಟ್ಟ ಪ್ರದೇಶವನ್ನು ಪಡೆದ ಹಟ್ಟಿಯ ಕಸ್ತೂರಿ ಮಲ್ಲಪ್ಪ ನಾಯಕನು ಈ ಕೋಟೆಯನ್ನು ನಿರ್ಮಿಸಿ, ಕೋಟೆಯೊಳಗೆ ತನ್ನ ತಾಯಿಯ ಹೆಸರಿನಲ್ಲಿ ಕೆರೆಯೊಂದನ್ನು ನಿರ್ಮಿಸಿದರ ಕುರಿತಾದ ಹಾಗೂ ಯಾರಾದರೂ ಇಲ್ಲಿ ಅಕೃತ್ಯದಲ್ಲಿ ತೊಡಗಿದರೆ ಶಿಕ್ಷೆ ವಿಧಿಸುವುದಾಗೆಂದು ಕೋಟೆಯ ದ್ವಾರ ಬಾಗಿಲ ಬಳಿ ಶಾಸನಗಳನ್ನು ಕೆತ್ತಿಸಿರುವುದರ ಹಿನ್ನೆಲೆಯಲ್ಲಿ ಈತನೇ ಈ ಕೋಟೆಯನ್ನು ನಿರ್ಮಿಸಿದನೆಂದು ಹೇಳಬಹುದಾಗಿದೆ.[೫೭] ಉತ್ತರ ದಿಕ್ಕಿಗಿರುವ ಕೋಟೆಯು ದಕ್ಷಿಣ ದಿಕ್ಕಿಗಿರುವ ಕೋಟೆಗಿಂತ ಸುಭದ್ರವಾಗಿ ಇಂದಿಗೂ ಉಳಿದುಕೊಂಡು ಬಂದಿದೆ. ಊರಿನಲ್ಲಿದ್ದ ಎರಡು ಸುತ್ತಿನ ನೆಲಮಟ್ಟದ ಕೋಟೆ ಪ್ರಸ್ತುತ ನಾಶವಾಗಿದ್ದರೂ ಅಲ್ಲಲ್ಲಿ ದ್ವಾರಬಾಗಿಲುಗಳೆಂಬ ಕೋಟೆಯ ಪ್ರಮುಖ ಅವಶೇಷಗಳು ಇಂದಿಗೂ ಉಳಿದುಕೊಂಡು ಬಂದಿವೆ. ಅಂದರೆ ಇಡೀ ಕೋಟೆಯಲ್ಲಿ ಪ್ರಸ್ತುತವಾಗಿ ನಮಗೆ ಒಂಭತ್ತು ದ್ವಾರಬಾಗಿಲುಗಳು ಹಾಗೂ ಹತ್ತು ದಿಡ್ಡಿ ಬಾಗಿಲುಗಳು[೫೮] ಇಂದಿಗೂ ಕೋಟೆಯ ಜೀವಂತ ಪ್ರತೀಕಗಳಾಗಿ ಉಳಿದಿವೆ. ಊರಿನಿಂದ ಉತ್ತರಾಭಿಮುಖವಾಗಿ ಮುಂದೆ ಹೋದರೆ(ನುಂಕಪ್ಪನ ಕಟ್ಟೆಯ ಬಳಿ) ನೆಲಮಟ್ಟದಲ್ಲಿರುವ ಕೋಟೆಯ ಪ್ರಧಾನ ದ್ವಾರವಿದೆ. (ದಕ್ಷಿಣ ಕೋಟೆ) ಇನ್ನು ಈ ಬೆಟ್ಟವನ್ನು ಹತ್ತಿದಾಗ ಕೋಟೆ ಗೋಡೆಯು ಎದುರಾಗುತ್ತದೆ. ಈ ಕೋಟೆಯನ್ನು ಪೂರ್ವ ಮತ್ತು ಪಶ್ಚಿಮಕ್ಕಿರುವ ಎರಡು ಬೆಟ್ಟಗಳ ನಡುವೆ ಕಟ್ಟಲಾಗಿದೆ.[೫೯] ಇದರಿಂದ ಕೋಟೆಯ ರಚನೆಯ ಸ್ಥಳದ ಆಯ್ಕೆಯಲ್ಲಿ ಚಾಕಚಕ್ಯತೆ ಇದೆ ಎನ್ನಬಹುದು.

ಕೋಟೆಯನ್ನು ದಕ್ಷಿಣದಿಂದ ಪ್ರವೇಶಿಸಲು ಹೋದರೆ ಅಲ್ಲಿ ಗ್ರಾಮವನ್ನು ಆವರಿಸಿಕೊಂಡಂತೆ ನೆಲಮಟ್ಟದಲ್ಲಿ ರಚಿತಗೊಂಡಂತಹ ಎರಡು ಊರಿನ ದ್ವಾರ ಬಾಗಿಲುಗಳು ಕಂಡುಬರುತ್ತವೆ. ಆದರೆ ಈ ಎರಡು ಬಾಗಿಲುಗಳಲ್ಲಿ ಊರ ಬಾಗಿಲು ಎಂದು ಕರೆಯಲ್ಪಡುವ ಎರಡನೆ ಬಾಗಿಲು ಮಾತ್ರ ಇಂದಿಗೂ ತನ್ನವಶೇಷಗಳನ್ನು ಉಳಿಸಿಕೊಂಡಿದೆ. ಈ ದ್ವಾರ ಬಾಗಿಲು ೧೩ ಅಡಿ ಎತ್ತರ ಹಾಗೂ ೮ ಅಡಿ ಅಗಲವಿದೆ. ಅಲ್ಲದೇ ಉತ್ತರ ದಕ್ಷಿಣವಾಗಿ ೮ ಅಡಿ ಅಗಲ, ಪೂರ್ವ ಪಶ್ಚಿಮವಾಗಿ ೧೧ ಅಡಿ ಉದ್ದವಾಗಿದ್ದು, ನಾಲ್ಕು ಬಾಗಿಲುವಾಡಗಳನ್ನು ಹೊಂದಿದೆ. ಈ ಬಾಗಿಲುವಾಡಗಳಿಗೆ ಎರಡು ಅಡ್ಡ ತೊಲೆಗಳ ಮೇಲೆ ಚಪ್ಪಡಿ ಬಂಡೆಗಳನ್ನು ಮುಚ್ಚಿರುತ್ತಾರೆ. ಈಶ್ವರ ಮತ್ತು ನಂದಿಯ ಚಿತ್ರಗಳನ್ನು ಈ ಬಾಗಿಲುವಾಡಗಳ ಮೇಲೆ ಕೆತ್ತಿರುವುದರಿಂದ ಹಾಗೂ ಈ ಕೋಟೆಯೊಳಗೆ ಈಶ್ವರ ದೇವಾಲಯವಿರುವುದರಿಂದ ಈ ಬಾಗಿಲನ್ನು "ಈಶ್ವರನ ಬಾಗಿಲು" ಎಂದು ಕರೆಯುತ್ತಾರೆ. ಇಲ್ಲಿನ ನಾಲ್ಕು ಬಾಗಿಲುವಾಡಗಳ ನಡುವೆ ಕಟ್ಟಡದ ರಚನೆಯಿಂದ ಕೂಡಿದ ಸು.೩ ಅಡಿ ಆಳದ ತಗ್ಗನ್ನು ತೋಡಲಾಗಿದೆ. ಬಹುಶಃ ಈ ತಗ್ಗಿನ ತುಂಬ ನೀರನ್ನು ತುಂಬುವುದರ ಮೂಲಕ ಶತ್ರುಗಳಲ್ಲಿ ಭಯವನ್ನು ಹುಟ್ಟು ಹಾಕುತ್ತಿದ್ದರೆಂದು[೬೦]

ಸಂಶೋಧಕರಾದ ತಿಪ್ಪೇಸ್ವಾಮಿ ಎಸ್. ಅವರು ಅಭಿಪ್ರಾಯಪಟ್ಟಿದ್ದಾರೆ. ನೆಲಮಟ್ಟದಲ್ಲಿರುವ ಈ ಎರಡೂ ಕೋಟೆಗಳ ಸಮೀಪದಲ್ಲಿ ಹಿಂದೆ ಆಳವಾದ ಕಂದಕವಿತ್ತೆಂದು ಇಲ್ಲಿನ ಸ್ಥಳೀಯರು ಹೇಳುತ್ತಾರೆ. ಇಲ್ಲಿನ ಕೋಟೆ ಆಂಜನೇಯನನ್ನು ಈ ಊರ ಬಾಗಿಲಿನ ರಕ್ಷಕನಾಗಿ ನಿಂತಿರುವುದು ಕಂಡುಬರುತ್ತದೆ. ಅಷ್ಟೇ ಅಲ್ಲದೇ ಈ ಬಾಗಿಲಿನ ಎಡಭಾಗದಲ್ಲಿ ಪಾಳೆಯಗಾರರ ಕಾಲದ ಹಿರೇಮಠ, ವೀರಗಲ್ಲುಗಳು, ಪುಷ್ಕರಣಿಗಳೆಂಬ ಅವಶೇಷಗಳ ಜೊತೆಗೆ ಆಂಜನೇಯ, ಈಶ್ವರ ಹಾಗೂ ವೆಂಕಟರಮಣ ಎಂಬ ಮೊದಲಾದ ದೇವಾಲಯಗಳಿವೆ. ಈ ಬೆಟ್ಟವನ್ನು ಹತ್ತಿ ಸ್ವಲ್ಪ ಮುಂದೆ ಸಾಗಿದರೆ ವಿಶಾಲವಾದ ವೇದಿಕೆಯ ಕಟ್ಟಡದ ಅವಶೇಷಗಳು ಕಂಡುಬರುತ್ತವೆ. ಈ ಕಟ್ಟಡವು ಪೂರ್ವ ಪಶ್ಚಿಮವಾಗಿ ೩೨ ಮೀ. ಹಾಗೂ ಉತ್ತರ ದಕ್ಷಿಣವಾಗಿ ೧೧ ಮೀ. ಉದ್ದವನ್ನೊಂದಿದೆ. ನಾಲ್ಕು ಅಡಿ ಅಧಿಷ್ಠಾನವನ್ನೊಂದಿರುವ ಈ ಕಟ್ಟಡದ ರಚನೆಯನ್ನು ನೋಡಿದರೆ ಇದೊಂದು ಬಹುಉಪಯೋಗಿ ಕಟ್ಟಡವೆನಿಸುತ್ತದೆ. ಈ ಕಟ್ಟಡದ ಪಕ್ಕದಲ್ಲಿ ಇದಕ್ಕೆ ಹೊಂದಿಕೊಂಡಂತೆ ೧೨ ಅಡಿ ಎತ್ತರದ ಕೋಟೆಗೋಡೆಯಿದೆ. ಈ ಕೋಟೆಯ ಉತ್ತರ ಭಾಗದಲ್ಲಿ ೧೨ ಅಡಿ ಎತ್ತರವಿರುವ ಗೋಡೆಯನ್ನು ನಿರ್ಮಿಸಿ ಪೂರ್ವ ಪಶ್ಚಿಮಕ್ಕೆ ೩೨ ಅಡಿ, ಉತ್ತರ ದಕ್ಷಿಣವಾಗಿ ೧೧ ಅಡಿ ಹಾಗೂ ೫ ಅಡಿ ಒಳವಿಸ್ತಾರವನ್ನೊಂದಿರುವ ಕಣಜವೊಂದನ್ನು ನಿರ್ಮಿಸಲಾಗಿದೆ. ಇದರ ಉತ್ತರಕ್ಕೆ ಬಾರೀ ಬಂಡೆಗಳ ಸಮೂಹವಿದೆ. ಹೀಗೆ ಮಧ್ಯಮ ಗಾತ್ರದ ಬಿಳಿಕಣಶಿಲೆಯ ಸಹಾಯದಿಂದ ಕಣಜದ ಬಳಿಯಿರುವ ಬಂಡೆಗಳವರೆಗೂ ಕೋಟೆಗೋಡೆಯನ್ನು ನಿರ್ಮಿಸಲಾಗಿದೆ. ಈ ಕೋಟೆ ಗೋಡೆಯನ್ನು ದಾಟಿ ಬಂಡೆಗಳ ನಡುವೆ ಮೇಲುದುರ್ಗಕ್ಕೆ ಹೋಗುವಾಗ ಬಂಡೆಯೊಂದರ ಮೇಲೆ ಹನುಮಂತ, ಈಶ್ವರ ಮತ್ತು ನಂದಿಯ ಉಬ್ಬುಶಿಲ್ಪಗಳಿವೆ. ಇಲ್ಲಿಂದ ಕಡಿದಾದ ಬಂಡೆಗಳ ನಡುವೆ ಹೋದರೆ ಪೂರ್ವ ಮತ್ತು ಪಶ್ಚಿಮಕ್ಕಿರುವ ಎರಡು ಬೆಟ್ಟಗಳ ನಡುವೆಯಿರುವ ಕೋಟೆಯ ಗೋಡೆ ಎದುರಾಗುತ್ತದೆ. ಕೋಟೆಯ ಪಶ್ಚಿಮಕ್ಕಿರುವ ಬೆಟ್ಟವನ್ನು ಸಂಧಿಸುವ ಸ್ಥಳದಲ್ಲಿ ಪಶ್ಚಿಮಾಭಿಮುಖವಾಗಿ ದ್ವಾರಬಾಗಿಲನ್ನು ನಿರ್ಮಿಸಲಾಗಿದೆ. ಈ ಬಾಗಿಲ ಮುಂಭಾಗದಲ್ಲಿ ಬಸವಣ್ಣನ ದೇವಾಲಯವಿರುವುದರಿಂದ ಈ ಬಾಗಿಲಿಗೆ "ಬಸವನ ಬಾಗಿಲು" ಎಂದು ಕರೆಯಲಾಗುತ್ತದೆ. ಪೂರ್ವ ಪಶ್ಚಿಮವಾಗಿ ೫.೯ ಅಡಿ. ಉತ್ತರ ದಕ್ಷಿಣವಾಗಿ ೬.೩ ಅಡಿ ಹಾಗೂ ೧೦ ಅಡಿ ಎತ್ತರದಲ್ಲಿರುವ ಈ ಬಾಗಿಲಿಗೆ ಜೋಡಿಸಿರುವ ತೊಲೆಗಳಿಗೆ ಯಾವುದೇ ರೀತಿಯ ಚೌಕಟ್ಟು ಇಲ್ಲದರಿಂದ ಇಲ್ಲಿನ ನಾಲ್ಕು ಕಂಬಗಳ ಪಕ್ಕದಲ್ಲಿರುವ ಎತ್ತರವಾದ ಗೋಡೆಯನ್ನು ಕಟ್ಟುವುದರ ಮೂಲಕ ಈ ಬಾಗಿಲಿಗೆ ಭದ್ರತೆಯನ್ನು ಒದಗಿಸಲಾಗಿದೆ.[೬೧] ಅಷ್ಟೇ ಅಲ್ಲದೆ ಈ ಬಾಗಿಲ ಪಕ್ಕದಲ್ಲಿ ದಿಡ್ಡಿಬಾಗಿಲು ಅದರ ಪೂರ್ವಕ್ಕೆ ಹೆಬ್ಬೆಟ್ಟು ಗುಂಡುಗಳ ಬೆಟ್ಟವಿದೆ. ಬಸವನ ಬಾಗಿಲಿನ ಪಶ್ಚಿಮಕ್ಕೆ ಬೃಹದಾಕಾರದ ಕಲ್ಲಿನ ಬಂಡೆಯೊಂದಿದೆ. ಹಿಂದೆ ಈ ಬಂಡೆಯ ಮೇಲೆ ಭಾಗಶಃ

ಧ್ವಜವನ್ನು ಹಾರಿಸುತ್ತಿದ್ದರೆನೋ ಅದಕ್ಕಾಗಿಯೇ ಈ ಗುಂಡಿಗೆ ಇಂದು 'ಝುಂಡಾಗುಂಡು' ಎಂದು ಕರೆಯಲಾಗುತ್ತದೆ.

ಈ ಬಸವನ ಬಾಗಿಲನ್ನು ದಾಟಿ ಸ್ವಲ್ಪ ಮುಂದೆ ಹೋದರೆ ಕಟ್ಟಡದ ಅವಶೇಷಗಳು ಕಂಡುಬರುತ್ತವೆ. ಈ ಅವಶೇಷಗಳ ಮುಂಭಾಗದಲ್ಲಿಯೇ ವಿಶಾಲವಾದ 'ಲಕ್ಷ್ಮವ್ವ ನಾಗತಿ ಕೆರೆ' ಹಾಗೂ ಇದರ ನಿರ್ಮಾಣಕ್ಕೆ ಸಂಬಂಧಿಸಿದಂತಹ ಶಾಸನವೂ ಸಹ ಇದೆ(ಹೆಚ್ಚಿನ ಮಾಹಿತಿ ಮುಂದಿನ ಅಂಶವಾದ ಶಾಸನಗಳಲ್ಲಿದೆ). ಈ ಕೆರೆಯ ಹಿಂಭಾಗದಲ್ಲಿ ಬಾವಿಯೊಂದು ಇದೆ. ಇದಕ್ಕೆ ತುಪ್ಪದಮ್ಮನ ಬಾವಿ ಎನ್ನುವರು. ಈ ಬಾವಿಯ ನೀರನ್ನು ಈ ಪ್ರದೇಶದಲ್ಲಿದ್ದ ಶೃಂಗಾರ ತೋಟಕ್ಕೆ ಬಳಕೆ ಮಾಡುತ್ತಿದ್ದರೆಂದು ಇಲ್ಲಿನ ಸ್ಥಳೀಯರು ಹೇಳುತ್ತಾರೆ. ಈ ಬಾವಿಯ ಪಶ್ಚಿಮಕ್ಕಿರುವ ಬಾರೀ ಕಡಿದಾದ ಬಂಡೆಯನ್ನು 'ಕೂಗುವ ಬಂಡೆ', 'ಕೂಗೋ ಬೆಟ್ಟ' ಅಥವಾ 'ಮೊಳಗುವ ಕಲ್ಲು' ಎಂದು ಕರೆಯುತ್ತಾರೆ. ಇದರಿಂದ ಈ ಊರಿಗೆ ಮೊಳಕಾಲ್ಮೂರು ಎಂಬ ಹೆಸರು ಬಂದಿತೆಂಬ ಐತಿಹ್ಯವಿದೆ(ಹೆಚ್ಚಿನ ಮಾಹಿತಿ ಅಧ್ಯಾಯ ನಾಲ್ಕರಲ್ಲಿದೆ). ಈ ಕೂಗೋ ಬೆಟ್ಟದಿಂದ ಮುಂದೆ ಹೋದರೆ ನಾಗತಿಕೆರೆಯಂತೆ ಮತ್ತೊಂದು ನೀರಿನ ಆಶ್ರಯ ತಾಣವಾದ 'ನೀಲಮ್ಮನ ಕುಂಟೆ' ಇದೆ. ಸು.೩೦ ಮೀ ಉದ್ದವಿರುವ ಈ ಕುಂಟೆಯು ೧೫ ಮೀ. ಆಳವನ್ನು ಹೊಂದಿದೆ. ಈ ಕುಂಟೆಯ ಪಶ್ಚಿಮದಲ್ಲಿ ಮಧ್ಯಮ ಗಾತ್ರದ ಕಲ್ಲು ಮತ್ತು ಗಾರೆಯಿಂದ ನಿರ್ಮಿಸಿದಂತಹ ಮೇಲುದುರ್ಗದ/ಮೇಲ್ದುರ್ಗದ ಕೋಟೆಯಿದೆ. ಸು.೧೦ ಅಡಿ ಅಗಲ ಮತ್ತು ೧೫ ಅಡಿ ಎತ್ತರವಿರುವ ಈ ಮೇಲ್ದುರ್ಗದ ಕೋಟೆಗೋಡೆಗೆ ಬಂದೂಕು ಕಿಂಡಿಗಳಿವೆ. ಉತ್ತರ ದಕ್ಷಿಣವಾಗಿರುವ ಕೋಟೆ ಸಾಲಿನ ಮಧ್ಯದಲ್ಲಿ ದ್ವಾರಬಾಗಿಲಿದೆ. ಈ ಬಾಗಿಲಿಗೆ 'ಏಣಿಮಾರಮ್ಮನ ಬಾಗಿಲು' ಎಂದು ಕರೆಯುವರು. ಈ ದ್ವಾರಬಾಗಿಲಿನ ಬಾಗಿಲುವಾಡಗಳ ಮೇಲೆ ಖಡ್ಗವನ್ನಿಡಿದ ಸ್ತ್ರೀ ದೇವತೆಯೊಂದರ ಶಿಲ್ಪದ ಕೆತ್ತನೆಯಿದೆ. ಅಲ್ಲದೆ ಇದರ ಸಮೀಪದಲ್ಲಿ ಮಾರಮ್ಮನ ಗುಡಿಯಿದೆ. ಈ ದೇವತೆಯನ್ನು ಪೂಜಿಸಲು ಕೃತಕ ಏಣಿಯೊಂದನ್ನು ನಿರ್ಮಿಸಿರುವುದರ ಹಿನ್ನೆಲೆಯಲ್ಲಿ ಈ ಬಾಗಿಲಿಗೆ 'ಏಣಿಮಾರಮ್ಮನ ಬಾಗಿಲು' ಎಂದು ಕರೆಯುತ್ತಿರುವುದನ್ನು ಗಮನಿಸಬಹುದು. ಅಷ್ಟೇ ಅಲ್ಲದೇ ಈ ಬಾಗಿಲಿನ ಬೋದಿಗೆಗಳ ಮೇಲ್ಭಾಗದಲ್ಲಿ ಸುರಳಿಯಾಕಾರದ ಕೆತ್ತನೆ ಹಾಗೂ ಬಾಗಿಲ ಪ್ರದೇಶದ ಎರಡೂ ಬದಿಗಳಲ್ಲಿ ಪಹರೆ ಗೃಹದ ಅವಶೇಷಗಳು ಮತ್ತು ಈ ಅವಶೇಷಗಳ ಪಕ್ಕದಲ್ಲಿ ಕೋಟೆಯ ದಿಡ್ಡಿ ಬಾಗಿಲು ಇದೆ. ಈ ಬಾಗಿಲಿನ ಪೂರ್ವಭಾಗದಲ್ಲಿ ಹನುಮಂತನ ದೇವಾಲಯವಿದೆ. ಈ ದೇವಾಲಯವನ್ನು ಕೋಟೆ ಆಂಜನೇಯನ ಗುಡಿ ಎಂತಲೂ ಕರೆಯುವರು(ಇದರ ಮಾಹಿತಿ ಹಿಂದೆ ತಿಳಿಯಲಾದ ದೇವಾಲಯಗಳಲ್ಲಿದೆ). ಈ ದೇವಾಲಯದ ಪಶ್ಚಿಮದಲ್ಲಿರುವ ಕೋಟೆಯ ಏಣಿಮಾರಮ್ಮ ಬಾಗಿಲು ಮತ್ತು ಅದರ ಪಕ್ಕದಲ್ಲಿಯೇ ಒಂದು ಚಿಕ್ಕ ದಿಡ್ಡಿಬಾಗಿಲು ಇದೆ. ಎತ್ತರವಾದ ಇಲ್ಲಿನ

ಏಣಿ ಮಾರಮ್ಮನ ದ್ವಾರಬಾಗಿಲಿರುವ ಕೋಟೆ ಗೋಡೆಯ ಮೇಲ್ಭಾಗದಲ್ಲಿ ಉತ್ತರ ಮತ್ತು ದಕ್ಷಿಣದ ದಿಕ್ಕುಗಳಲ್ಲಿ ವ್ಯವಸ್ಥಿತವಾದಂತಹ, ಎತ್ತರವಾಗಿರುವ ಎರಡು ಬುರುಜುಗಳ ರಚನೆಯಿದೆ. ಈ ಬುರುಜುಗಳು ವೃತ್ತಾಕಾರದ ರಚನೆಯನ್ನು ಹೊಂದಿವೆ. ಉತ್ತರಕ್ಕಿರುವ ಬುರುಜುವಿನ ಕೆಳಭಾಗದಲ್ಲಿ ದೇವಾಲಯವಿದ್ದುದರ ಕುರುಹು, ಅವಶೇಷಗಳು ಕಂಡುಬರುತ್ತವೆ. ಇದನ್ನು ಇಲ್ಲಿನ ಸ್ಥಳೀಯರು ಹೊನ್ನೂರಸ್ವಾಮಿಯ ಗುಡಿ ಎಂತಲೂ ಕರೆಯುವರು.

ಏಣಿಮಾರಮ್ಮನ ದ್ವಾರದ ಒಳಭಾಗದ ಮೇಲ್ಭಾವಣಿಯಲ್ಲಿ ಕಮಲದ ಹೂವಿನ ಚಿತ್ರದ ಕೆತ್ತನೆಯನ್ನು ಹೊಂದಿದ ಭುವನೇಶ್ವರಿ ಇದ್ದು, ಅದರ ಎರಡು ಬದಿಗಳಲ್ಲಿ ಮತ್ಸ್ಯದ ಉಬ್ಬು ಶಿಲ್ಪಗಳ ಕೆತ್ತನೆಯಿರುವುದು ಕಂಡುಬಂದಿದೆ. ಅಷ್ಟೇ ಅಲ್ಲದೇ ಈ ಬಾಗಿಲು ದಾಟಿ ಪಶ್ಚಿಮದೆಡೆಗೆ ಮುಂದೆ ಸಾಗಿದರೆ ಬಾಗಿಲಿನ ಎರಡೂ ಬದಿಗಳಲ್ಲಿ ಪಹರೆ ಗೃಹದ ಅವಶೇಷಗಳು, ನೀರಿನ ಆಶ್ರಯ ತಾಣದ ಕುಂಟೆಗಳು(ಪ್ರಮುಖವಾಗಿ ಏಣಿಮಾರಮ್ಮನ ಕುಂಟೆ, ಇದರಲ್ಲಿ ಯಾವಾಗಲೂ ನೀರು ಇರುತ್ತದೆ) ಹಾಗೂ ಪುಷ್ಕರಣಿಗಳಿವೆ. ಅಲ್ಲದೇ ಇಲ್ಲಿನ ವಿಸ್ತಾರವಾದ ಪ್ರದೇಶವನ್ನೊಳಗೊಂಡಂತೆ ಉತ್ತರ ಮತ್ತು ದಕ್ಷಿಣದ ಭಾಗದಲ್ಲಿ ಎತ್ತರವಾದ ಕೋಟೆಯನ್ನು ನಿರ್ಮಿಸಲಾಗಿದೆ. ಜೊತೆಗೆ ಒಂದು ದಿಡ್ಡಿ ಬಾಗಿಲನ್ನು ಸಹ ಕಟ್ಟಿದ್ದಾರೆ. ಇಲ್ಲಿನ ದಿಡ್ಡಿ ಬಾಗಿಲು ಏಣಿಮಾರಮ್ಮನ ಬುರುಜುವಿನಿಂದ ಕೆಳಗಡೆ ಇರುವ ಕೋಟೆಗೆ ಸಂಪರ್ಕವನ್ನು ಕಲ್ಪಿಸುತ್ತದೆ.[೬೨] ಏಣಿಮಾರಮ್ಮ ಬುರುಜು ಹಾಗೂ ಕೆಳಕೋಟೆಯ ನಡುವೆ ಉತ್ತರ ದಕ್ಷಿಣವಾಗಿ ಹಾಗೂ ಪೂರ್ವ ಪಶ್ಚಿಮವಾಗಿ ವಿಶಾಲ ವ್ಯಾಪ್ತಿಯನ್ನು ಹೊಂದಿರುವಂತಹ ಕಟ್ಟಡದ ಅವಶೇಷಗಳಿವೆ. ಅಲ್ಲದೇ ಉತ್ತರ–ದಕ್ಷಿಣವಾಗಿ ಸು.೧೩ ಅಡಿ ಎತ್ತರವಾದ ಕಲ್ಲಿನ ಕೋಟೆ ಗೋಡೆಯನ್ನು ನಿರ್ಮಿಸಿ ಮತ್ತೇ ಅದರ ಮೇಲೆ ಬಂದೂಕಿನ ಕಿಂಡಿಗಳನ್ನೊಳಗೊಂಡು ಸು.೪ ಅಡಿ ಎತ್ತರದ ಮಣ್ಣಿನ ಕೋಟೆಯನ್ನು ಸಹ ನಿರ್ಮಿಸಲಾಗಿದೆ. ಈ ಎರಡೂ ಕೋಟೆಗಳ ನಡುವಿನ ವಿಶಾಲವಾದ ಬಯಲಿನಲ್ಲಿ ಅನೇಕ ಕೊಠಡಿಗಳು ರಚನೆಗೊಂಡಿದರ ಅವಶೇಷಗಳಿವೆ. ಭಾಗಶಃ ಈ ಕಟ್ಟಡಗಳ ರಚನೆಯನ್ನು ಗಮನಿಸಿದರೆ ಅದೊಂದು ಮುಖ್ಯ ಆಡಳಿತ ಕೇಂದ್ರವಾಗಿತ್ತು ಎನಿಸುತ್ತದೆ.[೬೩] ಆದರೆ ಸ್ಥಳೀಯರು ಇದನ್ನು ಪಾಳೆಯಗಾರರು ನ್ಯಾಯ ತೀರ್ಮಾನ ಮಾಡುತ್ತಿದ್ದ ಕೋರ್ಟ್ ಎಂಬ ಹೆಸರಿನಿಂದಲೂ ಕರೆಯುತ್ತಿದ್ದಾರೆ. ಈ ಕಟ್ಟಡದ ಮುಂಭಾಗದಲ್ಲಿ ಕಲ್ಲಿನ ಕಣಜಗಳು ಇವೆ. ಇಲ್ಲಿ ಪಾಳೆಯಗಾರರ ಕಾಲದಲ್ಲಿ ಕೋಟೆಯಲ್ಲಿದ್ದ ಸೈನಿಕರು ಹಾಗೂ ಕೋಟೆಯ ಕಾವಲುಗಾರರು ಆಹಾರ ಧಾನ್ಯಗಳನ್ನು ಸಂಗ್ರಹಿಸುತ್ತಿದ್ದರೆಂದು ಹೇಳಲಾಗಿದೆ. ಹಾಗೆಯೇ ಇಲ್ಲಿನ ಬೃಹತ್ತಾದ ಬಂಡೆಗಳ ನಡುವಿನ ಮಧ್ಯಭಾಗದಲ್ಲಿ ಗರಡಿ ಸಾಧನೆ ಮಾಡುತ್ತಿರುವ ಚಿತ್ರಗಳಿವೆ. ಈ ಚಿತ್ರಗಳಿಂದ ಇಲ್ಲಿ ಗರಡಿಯೊಂದು ಇತ್ತೆಂದು ಹೇಳಬಹುದು.

ಏಣಿಮಾರಮ್ಮನ ಕೋಟೆಯ ಬಾಗಿಲಿನ ಸುತ್ತಲೂ ಹೊಂದಿಕೊಂಡಂತೆ ಪೂರ್ವ–ಪಶ್ಚಿಮವಾಗಿ ಬಾರೀ ಎತ್ತರದ ಕೋಟೆಯ ಸಾಲು ಹಾಗೂ ದಿಡ್ಡಿ ಬಾಗಿಲು ಇದೆ. ಈ ಕೋಟೆ ಸಾಲು ಮೇಲೆ ಹೇಳಿದ ಉತ್ತರ–ದಕ್ಷಿಣಕ್ಕಿರುವ ಕಟ್ಟಡದ ಸಾಲುಗಳಿಗೆ ಹೊಂದಿಕೊಂಡಂತಿದ್ದು, ಉತ್ತರದಲ್ಲಿನ ಏಣಿಮಾರಮ್ಮನ ಬುರುಜುವಿನವರೆಗೆ ಸಾಗಿ ಪೂರ್ವಕ್ಕಿರುವ ನಾಗತಿಲಕ್ಷ್ಮವ್ವ ಕೆರೆಯವರೆಗೆ ಮುಂದುವರೆದಿದೆ.[೬೪] ಈ ಮಧ್ಯೆ ವಿಶೇಷ ರಚನೆಯ ದ್ವಾರ ಬಾಗಿಲಿದೆ. ಸು.೨೫ ಅಡಿ ಎತ್ತರದ ಕೋಟೆಯ ಕೆಳಭಾಗದಲ್ಲಿ ರಚಿತಕೊಂಡಿರುವ ದ್ವಾರ, ಈ ದ್ವಾರದ ಮಧ್ಯದಲ್ಲಿಯೇ ದಿಡ್ಡಿ ಬಾಗಿಲನ್ನು ನಿರ್ಮಿಸಿದ್ದಾರೆ. ಸಾಮಾನ್ಯವಾಗಿ ಕೋಟೆಯ ದ್ವಾರದ ಪಕ್ಕದಲ್ಲಿ ದಿಡ್ಡಿ ಬಾಗಿಲುಗಳು ನಿರ್ಮಾಣವಾಗುತ್ತವೆ. ಆದರೆ ಇಲ್ಲಿ ದ್ವಾರದ ಮಧ್ಯದಲ್ಲಿಯೇ ದಿಡ್ಡಿ ಬಾಗಿಲು ರಚಿತಗೊಂಡಿರುವುದು ವಿಶೇಷ. ಇಲ್ಲಿನ ದ್ವಾರ ಮತ್ತು ದಿಡ್ಡಿ ಬಾಗಿಲನ್ನು ದಾಟಿ ಒಳ ಹೋದರೆ ದೂರದಲ್ಲಿರುವ ಕೆರೆಕುಂಟೆಗಳ ದೃಶ್ಯ ಕಾಣುತ್ತದೆ. ಅಲ್ಲದೇ ದೊಡ್ಡದಾದ ಹೊಂಡದ ನಿರ್ಮಾಣವಿದೆ. ಇಲ್ಲಿಂದ ಕಡಿದಾಗಿರುವ ದಾರಿಯಲ್ಲಿ ಸಂಚರಿಸಿದರೆ ನುಂಕೀಮಲೆ ಕೋಟೆಗೆ ಪ್ರವೇಶವಿದೆ.

ಏಣಿಮಾರಮ್ಮನ ಬಾಗಿಲಿನಿಂದ ಪಶ್ಚಿಮದಲ್ಲಿರುವ ಮೇಲುದುರ್ಗಕ್ಕೆ ಹೋಗುವ ಬಲಭಾಗದಲ್ಲಿ ಭದ್ರವಾದ ಕೋಟೆಯ ಗೋಡೆ ಕಂಡುಬರುತ್ತಿದ್ದು, ಅದರ ಮಧ್ಯಭಾಗದಲ್ಲಿ ಸು.೧೫ ಅಡಿ ಎತ್ತರದ ಬಾಗಿಲು ಇದೆ. ಈ ಬಾಗಿಲು ದಕ್ಷಿಣಾಭಿಮುಖವಾಗಿದ್ದು, ಬಾಗಿಲುವಾಡಗಳಲ್ಲಿ ಹೂ ಬಳ್ಳಿಗಳ ಸುರುಳಿಯಾಕಾರದ ಅಲಂಕಾರದ ಜೊತೆಗೆ ಪದ್ಮ ಕೆತ್ತನೆ ಇದೆ. ಅಲ್ಲದೇ ಈ ಬಾಗಿಲಿನ ಲಲಾಟದಲ್ಲಿ ಹನುಮಂತನ ಉಬ್ಬುಶಿಲ್ಪದ ಕೆತ್ತನೆಯಿದೆ. ಇದರ ಹಿನ್ನೆಲೆಯಲ್ಲಿ ಇದನ್ನು ಕೋಟೆಯ ಹನುಮನಬಾಗಿಲು ಎಂದು ಕರೆಯುವರು. ಈ ಬಾಗಿಲನ್ನೊಳಗೊಂಡ ಕೋಟೆ ಗೋಡೆಯ ಕೊನೆಯ ಎರಡೂ ಬದಿಗಳಲ್ಲಿ ಹಾಳಾಗಿರುವ ಬುರುಜುಗಳ ಕುರುಹುಗಳಿವೆ. ಅಲ್ಲದೇ ಈ ಬಾಗಿಲನ್ನು ದಾಟಿ ಸ್ವಲ್ಪ ಮುಂದೆ ಹೋದರೆ, ಅಲ್ಲಿನ ಹುಟ್ಟು ಗುಂಡುವಿನೊಂದರ ಮೇಲೆ ಖಡ್ಗದಾರಿಯಾಗಿ ವೀರನೋರ್ವನು ಕುದುರೆಯ ಮೇಲೆ ಕುಳಿತಿರುವ ಹಾಗೂ ಆತನ ಹಿಂಭಾಗದಲ್ಲಿ ವ್ಯಕ್ತಿಯೋರ್ವನು(ಸೇವಕನಿರಬೇಕು) ವೃತ್ತಾಕಾರದ ಲಾಂಛನವೊಂದನ್ನು ಎತ್ತಿ ಹಿಡಿದಿರುವಂತಹ ಉಬ್ಬುಶಿಲ್ಪದ ಕೆತ್ತನೆಯಿದೆ. ಜೊತೆಗೆ ಇಲ್ಲಿನ ವೀರನ ಮುಂಭಾಗದಲ್ಲಿ ಸರ್ಪದ ಮುಂದೆ ಭಕ್ತನೋರ್ವನು ಕೈಮುಗಿದು ನಿಂತಿರುವಂತಹ ಹಾಗೂ ಭಕ್ತನನ್ನು ಹಿಂಬಾಲಿಸುವ ಸೇವಕನೊಬ್ಬನನ್ನು ಒಳಗೊಂಡಂತೆ ಕೆತ್ತಿರುವಂತಹ ಉಬ್ಬುಶಿಲ್ಪದ ರಚನೆಯಿದೆ. ಅಲ್ಲದೇ ಇಲ್ಲಿನ ಕೋಟೆಯ ಹನುಮನ ಬಾಗಿಲಿಗೆ ಹೊಂದಿಕೊಂಡಂತಿರುವ ಬೆಟ್ಟವನ್ನು ಬಳಸಿಕೊಂಡು ಕಟ್ಟಿದಂತಹ ಕೋಟೆ ಗೋಡೆಯು ಉತ್ತರದಿಂದ ದಕ್ಷಿಣಕ್ಕಿರುವ ಕೂಗೋ ಬೆಟ್ಟವನ್ನು ಸೇರುತ್ತದೆ.[೬೫] ಅಷ್ಟೇ ಅಲ್ಲದೇ ಇಲ್ಲಿನ ದುರ್ಗಮವಾದ ಪ್ರದೇಶದಲ್ಲಿನ

ಕಡಿದಾದ ದಾರಿಯಲ್ಲಿ ಸಂಚರಿಸಿದರೆ ಮೇಲುದುರ್ಗಕ್ಕೆ ಹೋಗುವ ದಾರಿ ಕಂಡುಬರುತ್ತದೆ. ಈ ದಾರಿಯಲ್ಲಿನ ಎಡ ಮತ್ತು ಬಲಭಾಗಕ್ಕಿರುವ ಇಲ್ಲಿನ ಸ್ವಾಭಾವಿಕ ಬಂಡೆಗಳ ಮೇಲೆ ಅಲ್ಲಲ್ಲಿ ಅಂದರೆ ಅವಶ್ಯಕವಿರುವ ಕಡೆಗಳಲ್ಲೆಲ್ಲಾ ಕೋಟೆ-ಕೊತ್ತಲಗಳನ್ನು ನಿರ್ಮಿಸಿದ್ದಾರೆ. ಇವುಗಳಿಂದ ಸ್ವಲ್ಪ ಮುಂದೆ ಹೋದರೆ ಮರವೊಂದರ ಬಳಿಯಲ್ಲಿ ಪಾದಗಟ್ಟೆ ಇದ್ದು, ಇಲ್ಲಿನ ಪಾದಗಳನ್ನು ನುಂಕಪ್ಪನ ಪಾದಗಳೆಂದು, ದೇವರ ತಗ್ಗು ಎಂದು ಕರೆದು/ಭಾವಿಸಿದ್ದಾರೆ. ಹಾಗೆಯೇ ವ್ಯವಸ್ಥಿತವಾಗಿ ನಿರ್ಮಾಣಗೊಂಡಂತಹ ಕೋಟೆ ಗೋಡೆಯ ಮೇಲೆ ಬಂದೂಕಿನ ಕಿಂಡಿಗಳ ಬಳಕೆಯ ರಚನೆಯನ್ನೊಂದಿರುವ ಬುರುಜು ಸಿಗುತ್ತದೆ. ವೃತ್ತಾಕಾರದ ಬುರುಜುವಿನ ಮೇಲೆ ನಿಂತು ವೀಕ್ಷಿಸಿದರೆ ನಮಗೆ ಕೋಟೆಯಲ್ಲಿನ ನಾಗತಿಕೆರೆ, ಕೂಗೋ ಬೆಟ್ಟ ಹಾಗೂ ಊರು ಬಾಗಿಲುಗಳೆಲ್ಲವೂ ಸಹ ಗೋಚರವಾಗುತ್ತವೆ. ಮತ್ತೇ ಇಲ್ಲಿಂದ ನಾವು ಎತ್ತರವಾದ ಕೊಡುಗಲ್ಲುಗಳ ನಡುವಿನ ಕಾಳಿಂಗನ ಗವಿ ಎಂಬ ಪ್ರದೇಶವನ್ನು ಬಳಸಿಕೊಂಡು ಇಲ್ಲಿನ ಮೇಲ್ದುರ್ಗಕ್ಕೆ ಹೋಗಬೇಕಾಗುತ್ತದೆ.

ಮೇಲ್ದುರ್ಗಕ್ಕೆ ಹೋಗುವಾಗ ಇಲ್ಲಿ ಕಾಳಿಂಗನ ಗವಿ ದಾಟುವುದೇ ಒಂದು ಸಾಹಸವೆನ್ನ ಬಹುದು. ಏಕೆಂದರೆ ಹಗಲಿನಲ್ಲಿಯೂ ಸಹ ಕತ್ತಲೆಯಿಂದ ಕೂಡಿರುತ್ತದೆ. ಇಲ್ಲಿ ಯಾವುದೇ ರೀತಿಯ ದಾರಿ ಕಾಣುವುದಿಲ್ಲ. ಕತ್ತಲಿನಿಂದ ಕೂಡಿದ ಕಾಳಿಂಗನ ಗವಿಯನ್ನು ದಾಟಿ ಹೋಗುವಾಗ ಸಿಗುವ ಮೇಲುದುರ್ಗದ ಪ್ರದೇಶದಲ್ಲಿ ವಿಶಾಲವಾದ ಮೆಟ್ಟಿಲುಗಳುಳ್ಳ ಬಂಡೆಯೊಂದರ ಮೇಲೆ ಬೃಹತ್ ಪ್ರಮಾಣದ ಬುರುಜು ಇದೆ. ಮಧ್ಯಮಗಾತ್ರದ ಕಲ್ಲುಗಳಿಂದ ನಿರ್ಮಾಣಗೊಂಡು ವೃತ್ತಾಕಾರದ ರಚನೆಯನ್ನು ಹೊಂದಿರುವ ಈ ಬುರುಜನ್ನು ಕಾಳಿಂಗನ ಬುರುಜು ಎಂದು ಕರೆಯುವರು.[೬೬] ಈ ಭಾಗದ ಅತ್ಯಂತ ಎತ್ತರದ ಬುರುಜಾಗಿರುವ ಇದು ಸು.೬ ಅಡಿಗಳಷ್ಟು ಎತ್ತರವನ್ನು ಹೊಂದಿದೆ. ಕಾಳಿಂಗನ ಬುರುಜನ್ನು ಒಮ್ಮೆ ಹತ್ತಿ ನೋಡಿದರೆ ನಮಗೆ ಉತ್ತರಕ್ಕಿರುವ ಜಟಂಗಿರಾಮೇಶ್ವರ, ಈಶಾನ್ಯಕ್ಕಿರುವ ಬ್ರಹ್ಮಗಿರಿ, ಉಚ್ಚಂಗಿದುರ್ಗ, ವಾಯುವ್ಯಕ್ಕಿರುವ ನುಂಕೀಮಲೆ ಮತ್ತು ನೈರುತ್ಯಕ್ಕಿರುವ ಇಲ್ಲಿನ ಮೇಲ್ದುರ್ಗ ಎಂಬ ಮುಂತಾದ ನೆಲೆಗಳಲ್ಲಿರುವ ಕೋಟೆಗಳು ಕಂಡುಬರುತ್ತವೆ. ಇದನ್ನು ಗಮನಿಸಿದರೆ ಎತ್ತರದಲ್ಲಿರುವ ಕಾಳಿಂಗನ ಬುರುಜನ್ನು ಇಲ್ಲಿನ ಸುತ್ತಮುತ್ತಲಿರುವ ಹಲವಾರು ಕೋಟೆಗಳೊಂದಿಗೆ ಸಂಪರ್ಕವನ್ನು ಸಾಧಿಸುವುದರ ಸಲುವಾಗಿ ನಿರ್ಮಿಸಿರಬೇಕು ಎನಿಸುತ್ತದೆ. ಕಾಳಿಂಗನ ಬುರುಜಿನಿಂದ ಸ್ವಲ್ಪ ದೂರದಲ್ಲಿ ನೈರುತ್ಯದೆಡೆಗೆ ಕಂಡುಬರುವುದೇ ಮೊಳಕಾಲ್ಮೂರು ಕೋಟೆಯ ಮೇಲುದುರ್ಗ. ಈ ಮೇಲ್ದುರ್ಗಕ್ಕೆ ಹೋಗುವ ಪೂರ್ವದಲ್ಲಿ ನಮಗೆ ಹಾಗೆಯೇ ಸ್ವಲ್ಪ ಮುಂದೆ ಸಾಗಿದರೆ ಕೋಟೆಯ ಗೋಡೆಯೊಂದು ಗೋಚರವಾಗುತ್ತದೆ. ಈ ಗೋಡೆಯ ಮಧ್ಯದಲ್ಲಿ ದ್ವಾರವೊಂದರ ರಚನೆಯಿದ್ದು, ಅದರ ಲಲಾಟದ ಭಾಗದಲ್ಲಿ ಗಣೇಶನ/ವಿನಾಯಕನ ಚಿತ್ರಣವನ್ನೊಳಗೊಂಡ ಉಬ್ಬುಶಿಲ್ಪವಿರುವುದು

ಕಂಡುಬಂದಿದೆ. ಹಾಗಾಗಿ ಇದನ್ನು ವಿನಾಯಕನ ಬಾಗಿಲು ಎಂದು ಕರೆಯುವರು. ಈ ಬಾಗಿಲಿನಿಂದ ಸ್ವಲ್ಪ ಮುಂದೆ ಹೋದರೆ ಚೌಕಾಕಾರದ ಕೋಟೆ ಗೋಡೆಯು ಇಲ್ಲಿನ ಮೇಲ್ದುರ್ಗವನ್ನು ಆವರಿಸಿಕೊಂಡಿದೆ. ಹಾಗೂ ಬಲಭಾಗದಲ್ಲಿರುವ ಬಂಡೆಗಲ್ಲುಗಳನ್ನು ಬಳಸಿಕೊಂಡು ಕೋಟೆ ಹಾಗೂ ಕೋಟೆಯ ಮಧ್ಯಭಾಗದಲ್ಲಿ ವೃತ್ತಾಕಾರದ ಬುರುಜುಗಳಿವೆ. ಇವುಗಳ ಮುಂಭಾಗದಲ್ಲಿ ಬೋಸೇದೇವರ ಹೊಂಡ, ಕಂಪಳ ದೇವರ ಹೊಂಡ ಎಂಬ ಸದಾಕಾಲ ನೀರು ಇರುವ ಆಶ್ರಯ ತಾಣಗಳಿವೆ. ಈ ಎರಡೂ ಹೊಂಡಗಳ ಮುಂಭಾಗದಲ್ಲಿರುವ ಬೆಟ್ಟ ಸಾಲಿನ ನಡುವೆಯೊಂದು ಸಮಾಧಿ ಇದ್ದು, ಅದನ್ನು ಕಾಳಿಂಗನ ಸಮಾಧಿ ಎಂದು ಕರೆಯುವರು.[೬೭] ಇತ್ತೀಚೆಗೆ ನಿಧಿಯ ಆಸೆಯಿಂದ ಸ್ಥಳೀಯರು ಈ ಸಮಾಧಿಯನ್ನು ಹಾಳು ಮಾಡುವ ಪ್ರಯತ್ನ ಮಾಡಿದ್ದಾರೆ. ಮೇಲೆ ಹೇಳಿದ ಹೊಂಡಗಳ ಹಿಂಭಾಗದಲ್ಲಿ ತೆರೆದ ಮಂಟಪವಿದೆ. ಸಂಪೂರ್ಣ ನಾಶವಾಗಿ ಕೇವಲ ಶಿವಲಿಂಗ ಮಾತ್ರ ಇದೆ. ಬಳಪದ ಕಲ್ಲಿನಿಂದ ರಚಿತಗೊಂಡ ಉದ್ದನೆಯ ಕೊಳವೆಯಾಕಾರದ ಶಿವಲಿಂಗ ಹಾಗೂ ಅದರ ಮುಂಭಾಗದಲ್ಲಿ ಚಿಕ್ಕದಾದ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಹಾಗಾಗಿ ಹಾಳಾದ ಈ ತೆರೆದ ಮಂಟಪವನ್ನು ಈಶ್ವರನ ಗುಡಿ ಎಂತಲೂ ಕರೆಯುವರು.

ಈ ಈಶ್ವರನ ಗುಡಿಯ ಹಿಂಭಾಗದಲ್ಲಿ ಇಲ್ಲಿನ ಮೇಲ್ದುರ್ಗದ/ಮೊಳಕಾಲ್ಮೂರು ಕೋಟೆಯ ಅಂತಿಮ ಸಾಲು ಇದೆ. ಮೇಲೆ ಹೇಳಿದ ಎರಡು ಹೊಂಡಗಳ ಪಕ್ಕದಲ್ಲಿ ಬಂಡೆಯ ಮೇಲೆ ಸುಂದರವಾಗಿ ವೀರನೋರ್ವನು ಕುದುರೆಯ ಮೇಲೇರಿ ಹೋಗುತ್ತಿರುವುದನ್ನು ಕೆತ್ತಲಾಗಿದೆ. ಇದನ್ನು ಕಂಪಿಲರಾಯನ ಮಗನಾದ ಕುಮಾರರಾಮನು ತನ್ನ 'ಬೊಲ್ಲ' ಎಂಬ ಕುದುರೆಯ ಮೇಲೆ ಹೋಗುತ್ತಿರುವನೆಂದು ಸ್ಥಳೀಯರು ಹೇಳುತ್ತಾರೆ.[೬೮] ಅಲ್ಲಿ ಎರಡು ದಿಡ್ಡಿ ಬಾಗಿಲುಗಳಿವೆ. ಇಲ್ಲಿನ ಪೂರ್ವದ ದಿಡ್ಡಿ ಬಾಗಿಲನ್ನು ತೂರಿ ದಕ್ಷಿಣದ ದಿಡ್ಡಿ ಬಾಗಿಲಿನ ಮೂಲಕ ಮುಂದೆ ಹೋದರೆ ಹಿಂದೆ ಅಲ್ಲಿ ಪಾಳೆಯಗಾರರು ಬೆಳೆ ಬೆಳೆಯುತ್ತಿದ್ದ ವಿಶಾಲವಾದ ಮಣ್ಣಿನ ಬಯಲನ್ನು ಕಾಣಬಹುದು. ಅಲ್ಲಿಂದ ಪಶ್ಚಿಮಕ್ಕೆ ಬಂದರೆ ಅಲ್ಲಿ ಸಿಗುವ ಕರೆಬಂಡೆ ಎಂದು ಕರೆಯುವ ಬಂಡೆಯ ಮೇಲಿನಿಂದ ಮೊಳಕಾಲ್ಮೂರುವಿಗೆ ಕೆಳಗೆ ಇಳಿಯಬಹುದು. ಕಂಪಿಲರಾಯನ ಹೊಂಡದಿಂದ ಹಿಂಭಾಗಕ್ಕೆ ಇಳಿದರೆ ಅಗಸರ ಹೊಂಡ, ಹೀರೇಗೊಂದಿ, ಆನೆ ತೊಳೆಯುವ ಹೊಂಡ ಸಿಗುತ್ತದೆ. ಈ ಆನೆ ತೊಳೆಯುವ ಹೊಂಡದಿಂದ ಉತ್ತರಕ್ಕಿರುವ ಬೆಟ್ಟದ ಮೇಲೊದರೆ ನುಂಕಪ್ಪನ ಬೆಟ್ಟಕ್ಕೆ ದಾರಿ ಸಿಗುತ್ತದೆ.[೬೯] ಇದರ ನಡುವೆ ಪೂರ್ವಕ್ಕಿರುವ ದಾರಿಯಲ್ಲಿ ಹೋದರೆ ಸೀಗುಲಗೊಂದಿ ಸಿಗುತ್ತದೆ. ಅಲ್ಲಿಂದಲೂ ಮೊಳಕಾಲ್ಮೂರು ಸೇರಬಹುದು. ಸೀಗುಲಗೊಂದಿಯಿಂದ ದಕ್ಷಿಣಕ್ಕೆ ಬಂದರೆ ಹಿರೇ ಅಡವಿ, ಹುಲಿಮರಿತಿಪ್ಪೆ ಬತೇರಿ, ಮಾವಿನ ತೋಪುಗಳನ್ನು ದಾಟಿ ಬಂದರೆ ಕೋತಲಗೊಂದಿ ಕೆರೆ ಸಿಗುತ್ತದೆ. ಇಲ್ಲಿಂದ ಮೊಳಕಾಲ್ಮೂರುವಿಗೆ ಬಂದು ಸೇರಬಹುದು.

ಒಟ್ಟಾರೆಯಾಗಿ ಮೊಳಕಾಲ್ಮೂರು ಪಟ್ಟಣದಿಂದ ಪೂರ್ವಾಭಿಮುಖವಾಗಿ ಹೋಗಿ ನಂತರ ಉತ್ತರಾಭಿಮುಖವಾಗಿ ಕೋಟೆ ಬಡಾವಣೆಯನ್ನು ತಲುಪುವುದರ ಮೂಲಕ ಬೆಟ್ಟವನ್ನು ಹತ್ತಿ ಬೆಟ್ಟದ ಮೇಲಿನ ಕೋಟೆಯ ಅಂತಿಮ ಗೋಡೆಯನ್ನು ಮೇಲ್ದುರ್ಗದ ಕಾಳಿಂಗನ ಹೊಂಡದ ಬಳಿಯಿರುವ ಕೋಟೆಯ ಅಂತಿಮಗೋಡೆಯನ್ನು ತಲುಪಿ ಅಲ್ಲಿಂದ ದಕ್ಷಿಣಾಭಿಮುಖವಾಗಿ ಕೆಳಗಿಳಿದು ಊರಿನಿಂದ ಪಶ್ಚಿಮಕ್ಕಿರುವ ಕೋತಲಗೊಂದಿಯನ್ನು ತಲುಪಿ, ಮತ್ತೇ ಪೂರ್ವಾಭಿಮುಖ ವಾಗಿ ಸಂಚರಿಸುವುದರ ಮೂಲಕ ಮೊಳಕಾಲ್ಮೂರನ್ನು ತಲುಪಬಹುದಾದಂತಹ ಇಲ್ಲಿನ ಕೋಟೆಯ ರಚನೆಯನ್ನು ಗಮನಿಸಿದರೆ ಬೇಧಿಸಲು ಅಸಾಧ್ಯವಾದಂತಹ ಈ ಕೋಟೆಯು ರಕ್ಷಣೆಯ ಹಿನ್ನೆಲೆಯಲ್ಲಿ ಇಡೀ ತಾಲೂಕಿನಲ್ಲಿಯೇ ಅತ್ಯಂತ ಪ್ರಮುಖವಾದಂತಹ ಕೋಟೆಯಾಗಿದೆ.

## ೩.೨. ಮೂರ್ತಿ ಶಿಲ್ಪ

ಭಾರತೀಯ ಕಲೆ ಮತ್ತು ವಾಸ್ತುಶಿಲ್ಪದ ಪರಂಪರೆಯಲ್ಲಿ ಮೂರ್ತಿಶಿಲ್ಪವೂ ಒಂದಾಗಿದೆ. ಇದು ವಾಸ್ತುಶಿಲ್ಪದೊಂದಿಗೆ ಅವಿನಾಭಾವ ಸಂಬಂಧವನ್ನು ಹೊಂದುವುದರ ಮೂಲಕ ಅದರೊಂದಿಗೆ ಪೂರಕವಾಗಿದ್ದು ಅದರ ಜೊತೆ ಜೊತೆಯಲ್ಲಿಯೇ ಬೆಳೆದು ಬಂದಿದೆಂಬ ಹಲವಾರು ವಿದ್ವಾಂಸರ ಮಾತಿನಂತೆ, ಭಾರತದಲ್ಲಿ ದೇವತಾರಾಧನೆ ಮತ್ತು ಕ್ರಮಬದ್ಧವಾದ ದೇವಾಲಯಗಳ ನಿರ್ಮಾಣಕಾರ್ಯ ಆರಂಭವಾದ ದಿನದಂದಿನಿಂದಲೇ ದೇವತಾ ಮೂರ್ತಿ ಶಿಲ್ಪಗಳ ರಚನೆ, ಪ್ರತಿಷ್ಠಾಪನೆ ಹಾಗೂ ಆರಾಧನೆಯ ಪರಂಪರೆ ನಡೆದು ಬಂದಿದೆ. ಹಾಗಾಗಿ ಯಾವುದೇ ಮತಪಂಥಗಳ ದೇವಾಲಯಗಳನ್ನು ಅವಲೋಕಿಸಿದರೆ, ಆ ದೇವಾಲಯದಲ್ಲೊಂದು ಸಾಂಸ್ಕೃತಿಕ ದೇವತಾಮೂರ್ತಿಶಿಲ್ಪ ಇದ್ದೇ ಇರುತ್ತದೆ. ಹೀಗಾಗಿ ಮೂರ್ತಿಶಿಲ್ಪವಿಲ್ಲದೆ ದೇವಾಲಯವಿಲ್ಲ, ದೇವಾಲಯ ವಿಲ್ಲದೆ ಮೂರ್ತಿಶಿಲ್ಪವಿಲ್ಲ ಎಂಬಂತೆ ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪಗಳೆರಡು ಒಂದೇ ನಾಣ್ಯದ ಎರಡು ಮುಖಗಳಂತಿವೆ. ವಾಸ್ತುಶಿಲ್ಪದೊಂದಿಗೆ ಬೆಳೆದು ಬಂದಿರುವ ಮೂರ್ತಿಶಿಲ್ಪವು ಭಾರತೀಯ ಶಿಲ್ಪಕಲಾ ಪರಂಪರೆಯಲ್ಲಿ ತನ್ನದೇ ಆದ ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ. ಇಲ್ಲಿನ ಮೂರ್ತಿಶಿಲ್ಪಗಳನ್ನು ತಿಳಿದುಕೊಳ್ಳುವ ಪೂರ್ವದಲ್ಲಿ ಮೂರ್ತಿಶಿಲ್ಪದ ಅರ್ಥ, ರಚನೆ, ಉಗಮ ಮತ್ತು ಬೆಳವಣಿಗೆಯನ್ನು ಕುರಿತಾಗಿ ಸಂಕ್ಷಿಪ್ತವಾಗಿಯಾದರೂ ಅರಿತುಕೊಳ್ಳುವುದು ಅಧ್ಯಯನದ ದೃಷ್ಟಿಯಿಂದ ಸೂಕ್ತವೆನಿಸುತ್ತದೆ.

ಮೂರ್ತಿಶಿಲ್ಪವೆಂದರೆ ಸಾಮಾನ್ಯವಾಗಿ ತಿಳಿದಿರುವಂತೆ ಶಿಲ್ಪ ಅಥವಾ ಮೂರ್ತಿಗಳ ಅಧ್ಯಯನವಾಗಿದೆ. ಶಿಲ್ಪ ಎಂಬ ಪದವು "ಶೀಲ ಸಮುದೌ" ಎಂಬ ಧಾತುವಿನಿಂದ ಉತ್ಪತ್ತಿಯಾಗಿದೆ. ಸಮಾಧಿ ಎಂಬ ಅರ್ಥವನ್ನುಳ್ಳ ಶಿಲ್ ಎಂಬ ಪದವು ಧ್ಯಾನ ಅಥವಾ ತಪಸ್ಸನ್ನು ಸೂಚಿಸುತ್ತದೆ.[೬೯] ಬಹುಶಃ ಈ ಅರ್ಥದ ಹಿನ್ನೆಲೆಯಲ್ಲೆನೋ ಶಿಲ್ಪಿಯಾದವನು ಮೂರ್ತಿಯನ್ನು ರಚಿಸುವ ಪೂರ್ವದಲ್ಲಿ ತಾನು ರಚಿಸಲೆಂದುಕೊಂಡಿರುವ ಮೂರ್ತಿಯ ರೂಪವನ್ನು ಮನನ ಮಾಡಿಕೊಳ್ಳಲು ಧ್ಯಾನ

ಅಥವಾ ದೇವರ ಶ್ಲೋಕಗಳನ್ನು ಜಪಿಸುತ್ತಾನೆ.[೨೦] ಹೀಗೆ ಶಿಲ್ಪಿಯೊರ್ವನ ಕರ್ಮದ ಫಲವಾಗಿ ರೂಪಗೊಳ್ಳುವ ಮೂರ್ತಿಶಿಲ್ಪಗಳು ನೋಡುಗರಲ್ಲಿ ಸೌಂದರ್ಯಾರಾಧನೆಯ ಪ್ರಜ್ಞೆಯನ್ನು ಉದ್ದೀಪನಗೊಳಿಸುತ್ತವೆ. ವಿಗ್ರಹ, ಪ್ರತಿಮಾ, ಶಿಲ್ಪ, ಮೂರ್ತಿ, ಬಿಂಬ, ಪ್ರತಿಕೃತಿ ಎಂಬ ಹಲವಾರು ಸಮಾನಾರ್ಥಕ ಪದಗಳಿಂದ ಗುರುತಿಸಿಕೊಂಡು ಶಿಲ್ಪಗಳನ್ನು ಶಾಸ್ತ್ರೀಯವಾಗಿ ಅಧ್ಯಯನಿಸುವ ಮೂರ್ತಿಶಿಲ್ಪವು ಶಿಲ್ಪಕಲಾ ಪ್ರಪಂಚದಲ್ಲಿ ಅದ್ವಿತಿಯವಾದುದಾಗಿದೆ.

ಭಾರತದಲ್ಲಿ ಮೂರ್ತಿಶಿಲ್ಪದ ರಚನೆ ಮತ್ತು ಆರಾಧನೆಯ ಪರಂಪರೆ ಪ್ರಾಗಿತಿಹಾಸ ಕಾಲದಿಂದಲೇ ಆರಂಭವಾಯಿತು. ಇಲ್ಲಿ ಕೈಗೊಂಡ ಹಲವಾರು ಪುರಾತತ್ವೀಯ ನೆಲೆಗಳಲ್ಲಿನ ಉತ್ಖನನ ಕಾರ್ಯದಲ್ಲಿ ದೊರೆತ ಪ್ರಾಚ್ಯ ಅವಶೇಷ ಆಕರಗಳಿಂದ ಮೂರ್ತಿಶಿಲ್ಪವು ವಾಸ್ತುಶಿಲ್ಪದಷ್ಟೆ ಪ್ರಾಚೀನವಾದುದೆಂದು ತಿಳಿದು ಬಂದಿದೆ. ಇದುವರೆಗೆ ಲಭ್ಯವಾಗಿರುವಂತೆ ಸಿಂಧೂ ನದಿಕೊಳ್ಳದ ಸಂಸ್ಕೃತಿಯಲ್ಲಿ ದೊರೆತಂತಹ ಶಿಲ್ಪಗಳನ್ನು ಭಾರತದ ಅತ್ಯಂತ ಪ್ರಾಚೀನ ಮೂರ್ತಿಶಿಲ್ಪಗಳೆಂದು ಪರಿಗಣಿಸಲಾಗಿದೆ.[೨೧] ಅದೇ ರೀತಿಯಾಗಿ ನಮ್ಮ ಕರ್ನಾಟಕಕ್ಕೆ ಸಂಬಂದಿಸಿದಂತೆ ನೋಡಿದರೆ ಇಲ್ಲಿನ ಶಿಲಾಯುಗದ ಮಾನವನು ತಾನು ವಾಸಿಸುತ್ತಿದ್ದ ಗುಹೆಗಳ, ಬಂಡೆಗಳ ಮೇಲೆ ಹಾಗೂ ಕಲ್ಲಾಸರೆಗಳಲ್ಲಿ ವರ್ಣರೇಖಾ ಚಿತ್ರಗಳನ್ನು ಬಿಡಿಸಿರುವುದು ಹಲವಾರು ನೆಲೆಗಳಲ್ಲಿ ಕಂಡು ಬಂದಿವೆ.[೨೨] ಹೀಗೆ ವಿವಿಧ ನೆಲೆಗಳಲ್ಲಿನ ಗವಿವರ್ಣ ಚಿತ್ರಗಳು, ಬಯಲು ಬಂಡೆ ಗೀರು ಚಿತ್ರಗಳಲ್ಲದೇ ಕುಮತಿ, ಹುಲಿಕುಂಟಿ, ಹಿರೇಬೆನಕಲ್ ಎಂಬ ಮೊದಲಾದ ನೆಲೆಗಳಲ್ಲಿ ದೊರೆತ ಮಾನವಾಕೃತಿಯ ಕಲ್ಗೊಂಬೆಗಳು ಇಲ್ಲಿನ ಮೂರ್ತಿಶಿಲ್ಪದ ಪೂರ್ವಬಾವಿಹಂತವನ್ನು ಸೂಚಿಸುತ್ತವೆ.[೨೩] ಹೀಗೆ ಪ್ರಾಗಿತಿಹಾಸದಲ್ಲಿ ಉಗಮಗೊಂಡ ಮೂರ್ತಿಶಿಲ್ಪಗಳು ನಂತರದ ಚಾರಿತ್ರಿಕ ಕಾಲಘಟ್ಟದಲ್ಲಿ ಉತ್ತಮವಾದ ಬೆಳವಣಿಗೆಯನ್ನು ಕಂಡು ಕೊಂಡವು.

ಚಾರಿತ್ರಿಕ ಕಾಲಕ್ಕೆ ಬಂದರೆ ಭಾರತದಲ್ಲಿ ಮೂರ್ತಿಶಿಲ್ಪಗಳು ದೊರೆಯುವುದು ಮೌರ್ಯರ ಕಾಲದಲ್ಲಿ. ಲೋಹಿಯಾನಂದನಘರ್, ಸಾರನಾಥ, ರಾಂಪೂರ್ವ, ಲೋಮಸ್‌ಋಷಿ ಮೊದಲಾದ ಕಡೆಗಳಲ್ಲಿನ ಇವರ ಕಾಲದ ಗುಹಾಲಯಗಳಲ್ಲಿ ಕಂಡು ಬಂದಿರುವ ಸಿಂಹ, ಗೂಳಿ, ಆನೆ ಮುಂತಾದ ಸುಂದರ ಶಿಲ್ಪಗಳ ರಚನಾಕಲೆಯನ್ನು ಭಾರತೀಯ ಶಿಲ್ಪಕಲೆಯ ಬೆಳವಣಿಗೆಯಲ್ಲಿನ ಆರಂಭಿಕ ಹಂತವೆನ್ನಬಹುದು. ನಂತರ ಅದು ಗುಪ್ತರ ಕಾಲದಲ್ಲಿ ಅಲ್ಲಿ ಬರುವ ರಾಜರುಗಳ ಪ್ರೋತ್ಸಾಹದೊಂದಿಗೆ ಭಾರತದಲ್ಲಿನ ಮೂರ್ತಿಶಿಲ್ಪ ಉನ್ನತವಾದ ಸ್ಥಾನ ಪಡೆದುಕೊಂಡಿತು.[೨೪] ಚಾರಿತ್ರಿಕವಾಗಿ ಕರ್ನಾಟಕಕ್ಕೆ ಸಂಬಂಧಿಸಿ ನೋಡಿದರೆ ಶಾತವಾಹನ ಕಾಲದಲ್ಲಿಯೇ ಇಲ್ಲಿ ಮೂರ್ತಿಶಿಲ್ಪಗಳು ಅಸ್ತಿತ್ವವನ್ನು ಕಂಡುಕೊಂಡಿದ್ದವೆಂಬುದಕ್ಕೆ ಬನವಾಸಿಯಲ್ಲಿನ ನಾಗಶಿಲ್ಪ, ಸನ್ನತಿಯ ಉತ್ಖನನದಲ್ಲಿ ದೊರೆತ ಮಣ್ಣಿನ ಮೂರ್ತಿಗಳೇ ಸಾಕ್ಷಿಯಾಗಿವೆ. ಇವರ ನಂತರದ ಕದಂಬರ ಕಾಲಕ್ಕೆ ಹೇರಳವಾಗಿದ್ದ ಮೂರ್ತಿಶಿಲ್ಪಗಳು ನಂತರದ ಬಾದಾಮಿ ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣ

ಚಾಲುಕ್ಯರ ಕಾಲಘಟ್ಟದಲ್ಲಿ ಉಚ್ಛ್ರಾಯ ಸ್ಥಿತಿಯನ್ನು ತಲುಪಿ ಹೊಯ್ಸಳರ ಕಾಲಕ್ಕೆ ಅತ್ಯಂತ ಸುಂದರ ಹಾಗೂ ಆಕರ್ಷಕವಾದ ರೂಪವನ್ನು ಪಡೆದುಕೊಂಡವು.[೭೫] ನಂತರದ ವಿಜಯನಗರ ಮತ್ತು ವಿಜಯನಗರೋತ್ತರ ಕಾಲದವರೆಗಿನ ರಾಜರುಗಳು ನೀಡಿದ ಪ್ರೋತ್ಸಾಹದಿಂದ ಕರ್ನಾಟಕವೂ ಸಹ ಮೂರ್ತಿಶಿಲ್ಪಗಳ ಬೆಳವಣಿಗೆಯಲ್ಲಿ ಪ್ರಮುಖಪಾತ್ರವಹಿಸಿದೆ. ಹೀಗೆ ಪ್ರಾಗಿತಿಹಾಸ ಕಾಲದಿಂದ ಚಾರಿತ್ರಿಕ ಕಾಲದವರೆಗೆ ಹಂತಹಂತವಾಗಿ ಬೆಳವಣಿಗೆಯನ್ನು ಹೊಂದುವುದರ ಮೂಲಕ ಕರ್ನಾಟಕದ ಶಿಲ್ಪ ಕಲಾ ಪರಂಪರೆಯ ಸಾಲಿನಲ್ಲಿ ಮೂರ್ತಿಶಿಲ್ಪಗಳು ತಮ್ಮದೇ ಆದಂತಹ ಸ್ಥಾನವನ್ನು ಹೊಂದಿವೆ.

ಅಧ್ಯಯನ ಪ್ರದೇಶದಲ್ಲಿ ಕೈಗೊಂಡ ಕ್ಷೇತ್ರಕಾರ್ಯದಲ್ಲಿ ಕಂಡು ಬಂದ ಶೈವ, ವೈಷ್ಣವ ಮತ್ತು ಶಾಕ್ತ ಎಂಬ ಎಲ್ಲಾ ಬಗೆಯ ದೇವಾಲಯಗಳಲ್ಲಿ ಕಂಡು ಬಂದಿರುವಂತಹ ಪ್ರಮುಖ ಮೂರ್ತಿ ಶಿಲ್ಪಗಳ ವಿವರ ಕೆಳಗಿನಂತಿದೆ.

**ಶಿವಲಿಂಗಗಳು**

ಶಿವನನ್ನು ಲಿಂಗದ ರೂಪದಲ್ಲಿ ಪೂಜಿಸುವ ಪರಂಪರೆ ಪ್ರಾರಂಭದಿಂದಲೂ ಇದೆ. ಶಿವನ ಆಯುಧಗಳಾದ ಶೂಲ, ತ್ರೀಶೂಲ, ಶಿವನ ಮೂರ್ತಿಯಾದ ಲಿಂಗ, ಇವುಗಳು ವೈದಿಕ ಸಂಸ್ಕೃತಿಯ ಯಜ್ಞಾಯಾಗಾದಿಗಳ ಸಂದರ್ಭದಲ್ಲಿ ಬಳಕೆಯಲ್ಲಿದ್ದವು.[೭೬] ಲಿಂಗಗಳಲ್ಲಿ ಸ್ಥಾವರ ಮತ್ತು ಜಂಗಮ ಲಿಂಗಗಳೆಂಬ ಎರಡು ಪ್ರಕಾರಗಳಿವೆ. ಸ್ಥಾವರವೆಂದರೆ ಬೃಹತ್ ಗಾತ್ರದ ಅಲುಗಾಡದೇ ಇರುವಂತಹವು. ಜಂಗಮವೆಂದರೆ ಸಣ್ಣ ಸಣ್ಣ ಕಲ್ಲುಗಳು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಒಯ್ಯುವಂತಹವುಗಳಾಗಿವೆ. ಪ್ರಾಚೀನ ಲಿಂಗಗಳಿಗೆ ಪೀಠವಿರುತ್ತಿರಲಿಲ್ಲ. ಆನಂತರದಲ್ಲಿ ಪೀಠದ ಮೇಲೆ ಲಿಂಗವನ್ನು ಪ್ರತಿಷ್ಠಾಪಿಸಲು ಆರಂಭಿಸಿದರು. ಸಾಮಾನ್ಯವಾಗಿ ಶಿವಲಿಂಗಗಳು ಪೀಠ, ಪಾಣಿವಟ್ಟಲು, ಜಲಾಹರಿ ಮತ್ತು ಬ್ರಹ್ಮಸೂತ್ರಗಳನ್ನು ಒಳಗೊಂಡಿರುತ್ತವೆ.[೭೭] ಅಧ್ಯಯನ ಪ್ರದೇಶದಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಂಡಾಗ ಇಲ್ಲಿನ ಬಹುತೇಕ ಶಿವಾಲಯಗಳಲ್ಲಿ ಮೇಲಿನ ಎರಡೂ ಬಗೆಯ ಶಿವಲಿಂಗಗಳು ಕಂಡು ಬಂದಿವೆ. ಅದರಲ್ಲಿಯೂ ಜಂಗಮ ಲಿಂಗಗಳಿಗಿಂತ ಸ್ಥಾವರ ಲಿಂಗಗಳೇ ಹೆಚ್ಚಾಗಿ ದೊರೆತಿವೆ. ಇಲ್ಲಿನ ಎನ್.ಎಮ್.ಎಸ್ ಬಡಾವಣೆಯ ಈಶ್ವರ ಗುಡಿಯಲ್ಲಿರುವ ಸಣ್ಣ ಪ್ರಮಾಣದ ಲಿಂಗಕ್ಕೆ ಯಾವುದೇ ರೀತಿಯ ಪೀಠವಿರುವುದಿಲ್ಲ ಹಾಗಾಗಿ ಇದೊಂದು ಪ್ರಾಚೀನ ಶಿವಲಿಂಗ ಎನಿಸಿಕೊಳ್ಳುತ್ತದೆ. ಉಳಿದಂತೆ ಇರುವ ಶಿವಾಲಯಗಳಲ್ಲಿನ ಲಿಂಗಗಳೆಲ್ಲವನ್ನು ಪೀಠದ ಮೇಲೆ ಪ್ರತಿಷ್ಠಾಪನೆಗೊಳಿಸಲಾಗಿದೆ. ಇಲ್ಲಿನ ಶಿವಲಿಂಗಗಳೆಲ್ಲವೂ ಸಹ ಸಾಮಾನ್ಯವಾಗಿ ಕಪ್ಪನೆಯ ಶಿಲೆಗಳಲ್ಲಿ ಕೆತ್ತಲ್ಪಟ್ಟಿವೆ. ಆದರೆ ಹಿರಣ್ಯೇಶ್ವರ ಗುಡಿ ಎಂದು ಕರೆಯಲ್ಪಡುವ ಬಸವಣ್ಣನ ಗುಡಿಯಲ್ಲಿ ಮಾತ್ರ ಪಾಚಿವರ್ಣದಿಂದ ಮಧ್ಯದಲ್ಲಿ ಉದ್ದನೆಯ ಗೆರೆಗಳನ್ನು ಹೊಂದಿದ ನಾಮಾಧಾರಿ ಶಿವಲಿಂಗವಿದೆ. ಹಾಗೂ ಮಾರ್ಕಂಡೇಯ ದೇವಾಲಯದಲ್ಲಿ ಅಮೃತ ಶಿಲೆಯಲ್ಲಿ ರಚಿತಗೊಂಡಂತಹ ಶಿವಲಿಂಗ ಕಂಡು ಬಂದಿದೆ. ಕೋಟೆಯ ಮೇಲಿನ ಕುಮಾರರಾಮನ ಹೊಂಡದ ಹತ್ತಿರವಿರು

ಶಿವಲಿಂಗ ಬಳಪದ ಕಲ್ಲಿನಿಂದ ರಚಿತಗೊಂಡಿದ್ದು, ಅದರ ಮಧ್ಯದ ರುದ್ರಭಾಗ ಕೊಳವೆಯಾಕಾರದಲ್ಲಿದೆ. ಕೆಳಗಿನ ಈಶ್ವರ, ಮೇಲಿನ ಈಶ್ವರ ಎನ್.ಎಮ್.ಎಸ್ ಬಡಾವಣೆಗಳಲ್ಲಿನ ಈಶ್ವರನ ಗುಡಿಗಳಲ್ಲಿ ಚಿಕ್ಕಚಿಕ್ಕಗಾತ್ರದ ಜಂಗಮಲಿಂಗಗಳು ಕಂಡುಬಂದಿವೆ.

**ನಂದಿಶಿಲ್ಪಗಳು**

ದೇವಾಲಯಗಳ ಸಭಾಮಂಟಪದ ಭಾಗದಲ್ಲಿ ಗರ್ಭಗೃಹಕ್ಕೆ ಎದುರಾಗಿ ನಂದಿಶಿಲ್ಪಗಳನ್ನು ಪ್ರತಿಷ್ಠಾಪಿಸಲಾಗಿದೆ. ಇಲ್ಲಿನ ನಂದಿಶಿಲ್ಪಗಳು ಶಯನ ಸ್ಥಿತಿಯಲ್ಲಿವೆ. ಸಾಮಾನ್ಯವಾಗಿ ನಂದಿಶಿಲ್ಪಗಳು ತಮ್ಮ ಎಡಗಾಲನ್ನು ಮುಂಚಾಚಿಕೊಂಡಿದ್ದು, ಕೊರಳಹಾರ, ಗಂಟೆ, ಗೆಜ್ಜೆಯನ್ನು ಹೊಂದಿವೆ. ಆದರೆ ಇಲ್ಲಿನ ನಂದಿಶಿಲ್ಪಗಳ ಆಕಾರ ಮತ್ತು ಗಾತ್ರದಲ್ಲಿ ಭಿನ್ನತೆಗಳಿರುವುದನ್ನು ಕಾಣಬಹುದು. ಅಲ್ಲದೆ ಇಲ್ಲಿನ ಕೆಳಗಿನ ಈಶ್ವರದ ಪ್ರಾಂಗಣದಲ್ಲಿರುವ ಹಳೆಯ ನಂದಿಶಿಲ್ಪ ಮತ್ತು ಮೇಲಿನ ಈಶ್ವರದ ಬಯಲಿನಲ್ಲಿರುವ ನಂದಿಶಿಲ್ಪಗಳೆರಡೂ ಸಹ ಶಿಥಿಲಗೊಂಡು ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳುವ ಹಂತದಲ್ಲಿವೆ.

**ಗಣೇಶ ಶಿಲ್ಪಗಳು**

ಮೊಳಕಾಲ್ಮೂರುವಿನ ಹಿರೇಮಠದ ಗರ್ಭಗುಡಿಯಲ್ಲಿ ಅಂಗೈನಷ್ಟು ಚಿಕ್ಕಗಾತ್ರದ ಗಣೇಶನ ಶಿಲ್ಪವಿದ್ದು. ಅದನ್ನು ಮರದಿಂದ ತಯಾರಿಸಿದ ಪೆಟ್ಟಿಗೆಯಲ್ಲಿಟ್ಟು ರಕ್ಷಿಸಿ ಪೂಜಿಸುತ್ತಿದ್ದಾರೆ. ಇಲ್ಲಿ ಕಂಡು ಬಂದಿರುವ ಗಣೇಶನ ಶಿಲ್ಪಗಳು ಕಪ್ಪುವರ್ಣದ ಶಿಲೆಯಲ್ಲಿ, ಬಳಪದಕಲ್ಲು ಹಾಗೂ ಸ್ಥಳೀಯ ಗ್ರಾನೈಟ್ ಶಿಲೆಗಳಲ್ಲಿ ರಚಿತಗೊಂಡಿವೆ. ಆದರೆ ಮಾರ್ಕಂಡೇಯ ದೇವಾಲಯದಲ್ಲಿನ ಶಿಲ್ಪಮಾತ್ರ ಅಮೃತ ಶಿಲೆಯಿಂದ ರಚಿಸಲ್ಪಟ್ಟಿದೆ. ಆದರೆ ಇತ್ತೀಚೆಗೆ ಕೆಳಗಿನ ಈಶ್ವರ ಗುಡಿಯನ್ನು ಜೀರ್ಣೋದ್ಧಾರಗೊಳಿಸಿ ಭಗ್ನಗೊಂಡ ಹಳೆಯ ಗಣೇಶನ ಶಿಲ್ಪವನ್ನು ಬಿಸಾಡಿ ಹೊಸದಾದಂತಹ ಬಲಮುರಿ ಗಣೇಶನ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಇಲ್ಲಿನ ಎಲ್ಲಾ ಗಣೇಶನ ಶಿಲ್ಪಗಳು ಸಾಮಾನ್ಯವಾಗಿ ಆಸಿನಭಂಗಿಯಲ್ಲಿದ್ದು. ನಾಲ್ಕು ಕೈಗಳಲ್ಲಿ ಕುಠಾರ, ಅಂಕುಶ, ಮೊದಕಗಳನ್ನು ಧರಿಸಿರುವುದರ ಜೊತೆಗೆ ಕಿರೀಟ, ಕೊರಳಹಾರ, ಕಾಲುಗಳಲ್ಲಿ ಕಡಗಗಳ ಅಲಂಕರಣವಿದೆ.

**ವೈಷ್ಣವ ಶಿಲ್ಪಗಳು**

ವೈಷ್ಣವ ಶಿಲ್ಪಗಳಲ್ಲಿ ಪ್ರಮುಖವಾಗಿ ಹನುಮಂತ, ಲಕ್ಷ್ಮೀನರಸಿಂಹ, ವಿಷ್ಣು, ಗರುಡಶಿಲ್ಪ ಪಾಂಡುರಂಗ ರುಕ್ಮಿಣಿಯ ಶಿಲ್ಪಗಳು ಕಂಡು ಬಂದಿವೆ.

**ಹನುಮಂತನ ಶಿಲ್ಪಗಳು**

ಮೊಳಕಾಲ್ಮೂರುವಿನ ಆಂಜನೇಯ ದೇವಾಲಯಗಳಲ್ಲಿನ ಗರ್ಭಗೃಹಗಳಲ್ಲಿರುವ ಹನುಮಂತನ ಶಿಲ್ಪಗಳ ರಚನೆಗೆ ಬಳಸಿದ ಶಿಲೆ, ಅವುಗಳ ಆಕಾರಗಳಲ್ಲಿ ವ್ಯತ್ಯಾಸಗಳಿವೆ. ಜನ್ನಿಗೆ ಪಾಲು ಆಂಜನೇಯ,

ಬಾಲಾಂಜಿನೇಯ ಮತ್ತು ಕೋಟೆ ಆಂಜಿನೇಯ ಶಿಲ್ಪಗಳನ್ನು ಕಪ್ಪು ಶಿಲೆಯಲ್ಲಿ ಕಂಡರಿಸಿದರೆ, ವೀರಾಂಜಿನೇಯ, ಬಯಲು ಆಂಜನೇಯ ಶಿಲ್ಪಗಳನ್ನು ಗ್ರಾನೈಟ್ ಶಿಲೆಯಲ್ಲಿ ಕಂಡರಿಸಲಾಗಿದೆ. ಜನ್ನಿಗೆ ಪಾಲು ಆಂಜಿನೇಯನ ಶಿಲ್ಪವು ಇಲ್ಲಿನ ದೊಡ್ಡ ಶಿಲ್ಪವಾದರೆ, ವೀರಾಂಜಿನೇಯನ ಶಿಲ್ಪ ಅತಿ ಚಿಕ್ಕದಾದ ಆಕಾರವನ್ನು ಹೊಂದಿದೆ. ಸಾಮಾನ್ಯವಾಗಿ ಆಂಜಿನೇಯನ ದೇವಾಲಯಗಳಲ್ಲಿನ ಶಿಲ್ಪಗಳು ಪೂರ್ವದ ಕಡೆಗೆ ಮುಖಮಾಡಿರುತ್ತವೆ. ಆದರೆ ಕೋಟೆ ಆಂಜಿನೇಯನ ಮಾತ್ರ ಪಶ್ಚಿಮದೆಡೆಗೆ ಮುಖ ಮಾಡಿದೆ. ಇಲ್ಲಿನ ಎಲ್ಲಾ ಶಿಲ್ಪಗಳನ್ನು ಗಮನಿಸಿದರೆ ಅವುಗಳೆಲ್ಲಾ ಸ್ಥಾನಿಕ ಬಂಗಿಗಳಲ್ಲಿವೆ. ಕೋಟೆ ಆಂಜಿನೇಯ ಶಿಲ್ಪದಲ್ಲಿನ ಹನುಮಂತನು ತನ್ನ ಬಲಗೈಯನ್ನು ಮೇಲಕ್ಕೆ ಎತ್ತಿ ಅಭಯ ಹಸ್ತವನ್ನು ನೀಡಿದರೆ, ಎಡಗೈಯಲ್ಲಿ ಬಿಲ್ಲಿನಾಕಾರ ಹೂವಿನ ದಳಗಳನ್ನು ಹಿಡಿದಿದ್ದಾನೆ. ಅಲ್ಲದೆ ಕೈ ಕಾಲುಗಳಲ್ಲಿ ಕಡಗಗಳನ್ನು, ಕೊರಳಲ್ಲಿ ಕೊರಳಸರ ಧರಿಸಿದ್ದಾನೆ. ಇತನ ತಲೆಯ ನೆತ್ತಿನ ಮೇಲಿನವರೆಗೆ ಸುತ್ತುವರಿದ ಬಾಲದ ಕೊನೆಯಲ್ಲಿ ಘಂಟೆ ಇದೆ. ಇದೇ ರೀತಿಯ ಲಕ್ಷಣಗಳನ್ನು ಹೊಂದಿದ ಮೂರ್ತಿಶಿಲ್ಪಗಳು ಜನ್ನಿಗೆ ಪಾಲು ಮತ್ತು ಬಾಲಾಂಜಿನೇಯ ಶಿಲ್ಪಗಳಲ್ಲಿವೆ. ಬಯಲು ಆಂಜಿನೇಯ ಗುಡಿಯಲ್ಲಿನ ಶಿಲ್ಪದಲ್ಲಿ ಮಾತ್ರ ಹನುಮಂತನು ಎಡಗೈಯಲ್ಲಿ ಬಾಳೆಹಣ್ಣಿನ ಗೊಂಚಲನ್ನು ಹಿಡಿದಿದ್ದಾನೆ. ವೈಷ್ಣವ ದೇವಾಲಯಗಳ ಬಳಿಯಿರುವ ಬಹುತೇಕ ದೀಪಸ್ತಂಭಗಳ ಕೆಳಭಾಗದಲ್ಲಿ ಹನುಮಂತನ ಉಬ್ಬುಶಿಲ್ಪಗಳಿವೆ.

### ಲಕ್ಷ್ಮಿನರಸಿಂಹ ಶಿಲ್ಪ

ಕುರಾಕಲ ಹಟ್ಟಿಯ ಪೆನ್ನೋಬಳಸ್ವಾಮಿ ದೇವಾಲಯದ ಗರ್ಭಗುಡಿಯಲ್ಲಿ ಪೂರ್ವಾಭಿಮುಖವಿರುವ ಲಕ್ಷ್ಮಿನರಸಿಂಹನ ಆಸಿನಭಂಗಿಯ ಮೂರ್ತಿಶಿಲ್ಪವಿದೆ. ಕಪ್ಪು ಕಣಶಿಲೆಯಲ್ಲಿ ರಚಿತಗೊಂಡಿರುವ ಈ ಶಿಲ್ಪದಲ್ಲಿ ನಾಲ್ಕು ಕೈಗಳನ್ನು ಹೊಂದಿರುವ ನರಸಿಂಹನು ತನ್ನ ಬಲಗಡೆಯ ಹಿಂಗೈಯಲ್ಲಿ ಚಕ್ರವನ್ನು, ಎಡಗೈನ ಹಿಂಗೈಯಲ್ಲಿ ಶಂಖವನ್ನು ಹಿಡಿದಿರುವುದರ ಜೊತೆಗೆ ಬಲಗಡೆಯ ಮುಂಗೈಯನ್ನು ಅಭಯ ಹಸ್ತವನ್ನು ನೀಡುತ್ತಾ ಎಡಗಡೆಯ ಮುಂಗೈನ ಸಹಾಯದಿಂದ ಲಕ್ಷ್ಮಿಯನ್ನು ತನ್ನ ಎಡಗಡೆಯ ತೊಡೆಯ ಮೇಲೆ ಕುಳಿತಿಸಿಕೊಂಡಿದ್ದಾನೆ. ಲಕ್ಷ್ಮಿನರಸಿಂಹ ಮೂರ್ತಿಗಳೆರಡೂ ಕಿವಿ, ಕೈ, ಕಾಲ, ಕೊರಳುಗಳಲ್ಲಿ ಆಭರಣಗಳನ್ನು ಧರಿಸಿರುವುದು ಕೊಂಡು ಬಂದಿದೆ.

### ಗರುಡಶಿಲ್ಪ

ವೈದಿಕ ಸಾಹಿತ್ಯದಲ್ಲಿ ಸುಂದರವಾದ ರೆಕ್ಕೆಗಳುಳ್ಳ ಗರುಡ ಪಕ್ಷಿಗೂ ವಿಷ್ಣುವಿಗೂ ಸಮೀಕರಿಸಲಾಗಿದೆ. ಹಾಗಾಗಿ ಗರುಡ ವಿಷ್ಣುವಿನ ಪಕ್ಷಿವಾಹನ, ಗರುಡಧ್ವಜನಾದವನು ಸಾಮಾನ್ಯವಾಗಿ ವಿಷ್ಣುವಿನ ದೇಗುಲದ ಮುಂದೆ ಇಲ್ಲವೇ ಭಿತ್ತಿಗಳ ಮೇಲೆ ಹಾಗೂ ವಿಷ್ಣುವಿನ ಶಿಲ್ಪಗಳ ಪಾರ್ಶ್ವಗಳಲ್ಲಿ ಗರುಡನನ್ನು ಚಿತ್ರಿಸಲಾಗಿರುತ್ತದೆ. ಕರ್ನಾಟಕದಲ್ಲಿ ಹೊಯ್ಸಳರ ಮನೆತನದ ಕಾಲಾವಧಿಯ ಉತ್ತರದಿಂದ ಈಚೆಗೆ ವಿಷ್ಣುವಿನ ದೇವಾಲಯದ ದೇವ ಕೋಷ್ಠಕದಲ್ಲಿ ಅಂಜಲಿ ಮುದ್ರಾಸಕ್ತನಾಗಿ ನಿಂತಿರುವ

ಗರುಡ ಶಿಲ್ಪವನ್ನು ರಚಿಸುವ ಪರಂಪರೆ ಬೆಳೆದು ಬಂದಿದೆ. ವೀರಾಸನದಲ್ಲಿ ಆಸೀನನಾಗಿ ಇಲ್ಲವೆ ಸ್ಥಾನಿಕ ಗರುಡ ಅಂಜಲಿ ಮುದ್ರಾಸಕ್ತನಾಗಿರುತ್ತಾನೆ. ದೇಹ ಮತ್ತು ಮುಖ ಮನುಷ್ಯನ ಆಕಾರ ಇರುತ್ತದೆ. ಬೆನ್ನ ಹಿಂದೆ ಜೋಡಿ ರೆಕ್ಕೆಗಳು ಇರುತ್ತವೆ.

ಅಧ್ಯಯನ ಪ್ರದೇಶದಲ್ಲಿ ವೆಂಕಟರಮಣ ದೇವಾಲಯದ ಪ್ರವೇಶದ್ವಾರದ ಮೇಲ್ಭಾವಣಿಯಲ್ಲಿ ಗರುಡಶಿಲ್ಪವಿದೆ. ಇದು ಸ್ಥಾನಿಕ ಭಂಗಿಯಲ್ಲಿದೆ. ಗರುಡನು ತನ್ನ ಬಲಗಾಲನ್ನು ಮೇಲಕ್ಕೆ ಎತ್ತಿದ್ದಾನೆ. ಇತನ ಬೆನ್ನ ಹಿಂದೆ ಗರುಡ ರೆಕ್ಕೆಗಳು ಕಂಡು ಬರುತ್ತವೆ. ಈ ಗಾರೆ ಶಿಲ್ಪಕ್ಕೆ ಸುಣ್ಣವನ್ನು ಹಚ್ಚಿರುವುದರಿಂದ ಆತನ ಕೈಗಳಲ್ಲಿ ಹಿಡಿದಿರುವ ಆಯುಧಗಳನ್ನು ಹಾಗೂ ಮೈಮೇಲೆ ಧರಿಸಿದ ಆಭರಣಗಳನ್ನು ಗುರುತಿಸುವುದು ಕಷ್ಟವಾಗಿದೆ.

**ಬಾಲಕೃಷ್ಣನ ಮೂರ್ತಿ**

ವಿಷ್ಣುವಿನ ದಶಾವತಾರಗಳಲ್ಲಿ ಪರಶುರಾಮಾವತಾರವು ಒಂದಾಗಿದೆ. ಇದರಲ್ಲಿ ವಿಷ್ಣು, ರಾಮ, ಕೃಷ್ಣನ ಅವತಾರಗಳಲ್ಲಿರುತ್ತಾನೆ. ಇಲ್ಲಿನ ಕೃಷ್ಣನ ಶಿಲ್ಪಗಳು ದ್ವಿಭುಜ ಅಥವಾ ಚತುರ್ಭುಜಗಳಲ್ಲಿರುತ್ತವೆ. ಈ ಶಿಲ್ಪಗಳು ಸ್ಥಾನಿಕ ಅಥವಾ ಆಸೀನ ಭಂಗಿಗಳಲ್ಲಿಯೂ ಇರಬಹುದು. ಇದರಲ್ಲಿನ ಹಲವಾರು ಪ್ರಕಾರಗಳಲ್ಲಿ ವಿಷ್ಣುವಿನ ಬಾಲಕೃಷ್ಣನ ಅವತಾರವೂ ಒಂದಾಗಿದೆ.[೭೮] ಅಧ್ಯಯನ ಪ್ರದೇಶದ ವೆಂಕಟರಮಣ ದೇವಾಲಯದ ಗರ್ಭಗುಡಿಯಲ್ಲಿ ಪೂರ್ವಾಭಿಮುಖವಾಗಿ ಸು. ೩ ಅಡಿ ಎತ್ತರದ ಕಪ್ಪು ಶಿಲೆಯಲ್ಲಿ ಬಾಲ ಕೃಷ್ಣನ ಮೂರ್ತಿಯನ್ನು ಕಂಡರಿಸಲಾಗಿದೆ. ಸ್ಥಾನಿಕ ಭಂಗಿಯಲ್ಲಿರುವ ಬಾಲಕೃಷ್ಣನು ಎರಡು ಕೈಗಳನ್ನು ಹೊಂದಿದ್ದಾನೆ. ಇತನು ಬಲಗೈಯಲ್ಲಿ ಬೆಣ್ಣೆಯನ್ನು ಹಿಡಿದು, ಎಡಗಾಯನ್ನು ಅಡ್ಡಲಾಗಿ ಚಾಚಿ ಎಡಗಾಲಿನ ಮೇಲೆ ನಿಂತಿದ್ದಾನೆ. ಈ ಶಿಲ್ಪವು ನೋಡಲು ಆಕರ್ಷಕವಾಗಿದೆ.

**ಪಾಂಡುರಂಗನ ಮೂರ್ತಿ**

ವಿಷ್ಣು ಕೃಷ್ಣನ ಅವತಾರದಲ್ಲಿರುವುದು ಸಾಮಾನ್ಯವಾಗಿದೆ. ಈ ನಿಟ್ಟಿನಲ್ಲಿ ಇಲ್ಲಿನ ಪಾಂಡುರಂಗ ದೇವಾಲಯದ ಗರ್ಭಗುಡಿಯಲ್ಲಿರುವ ವಿಷ್ಣುವಿನವತಾರವನ್ನು ಪಾಂಡುರಂಗ ಎಂದು ಗುರುತಿಸಲಾಗಿದೆ. ಪಾಂಡುರಂಗ ಮತ್ತು ಆತನ ಎಡಭಾಗದಲ್ಲಿ ರುಕ್ಮಿಣಿಯ ಮೂರ್ತಿಶಿಲ್ಪವೂ ಇದೆ. ಮುಕುಟಾಧಾರಿಗಳಾಗಿ, ಕಿವಿ, ಕೈಕಾಲುಗಳಲ್ಲಿ ಆಭರಣಗಳನ್ನು ಧರಿಸಿ ಸ್ಥಾನಿಕ ಭಂಗಿಯಲ್ಲಿರುವ ಈ ಮೂರ್ತಿ ಶಿಲ್ಪದಲ್ಲಿನ ಕೃಷ್ಣ ಮತ್ತು ರುಕ್ಮಿಣಿಯರಿಬ್ಬರೂ ಸಹ ತಮ್ಮ ಕೈಗಳಲ್ಲಿ ಯಾವುದೇ ರೀತಿಯ ಆಯುಧಗಳನ್ನು ಹಿಡಿದಿರುವುದಿಲ್ಲ. ಬದಲಾಗಿ ಈ ದೇವತೆಗಳಿಬ್ಬರೂ ತಮ್ಮ ಕೈಗಳನ್ನು ಸೊಂಟಕ್ಕೆ ತಾಕೀತು ಮಾಡಿಕೊಂಡು ಸ್ಥಾನಿಕ ಭಂಗಿಯಲ್ಲಿದ್ದಾರೆ. ಈ ಮೂರ್ತಿಶಿಲ್ಪವನ್ನು ಕಪ್ಪು ಶಿಲೆಯಲ್ಲಿ ಕಂಡರಿಸಲಾಗಿದೆ.

**ಶಾಕ್ತ ಶಿಲ್ಪಗಳು**

ಅಧ್ಯಯನ ಪ್ರದೇಶದಲ್ಲಿ ಕಂಡು ಬಂದಿರುವ ಪ್ರಮುಖ ಶಾಕ್ತ ಪಂಥಿಯ ಶಿಲ್ಪಗಳು ಕೆಳಗಿನಂತಿವೆ.

**ಲಕ್ಷ್ಮಿಯ ಶಿಲ್ಪ**

ಸಂಪತ್ತಿನ ಅಧಿದೇವತೆಯಾದ ಲಕ್ಷ್ಮಿಯನ್ನು ಆಕೆಯ ಪತಿಯಾದ ವಿಷ್ಣುವಿನೊಂದಿಗೆ ಅಥವಾ ಬಿಡಿಬಿಡಿಯಾಗಿಯೂ ಚಿತ್ರಿಸಿರುವುದು ಕಂಡು ಬರುತ್ತದೆ. ಇಲ್ಲಿನ ಜನ್ನಿಗೆ ಪಾಲು ಆಂಜನೇಯ ಗುಡಿಯ ಗರ್ಭಗುಡಿಯ ಮುಂಭಾಗದ ಸಭಾಮಂಟಪದಲ್ಲಿ ಗಜಲಕ್ಷ್ಮಿಯ ಶಿಲ್ಪವಿದೆ. ಸು.೨ ಅಡಿ ಉದ್ದಗಲದ ಕಪ್ಪುಶಿಲೆಯಲ್ಲಿ ಕಂಡರಿಸಿದ ಈ ಶಿಲ್ಪದಲ್ಲಿ ಲಕ್ಷ್ಮಿಯ ಪದ್ಮಾಸನದಲ್ಲಿ ಕುಳಿತಿರುವಂತಹ ಆಸೀನ ಭಂಗಿಯ ಶಿಲ್ಪವಿದೆ. ಈ ಶಿಲ್ಪದ ಎರಡೂ ಬದಿಗಳಲ್ಲಿ ಆನೆಗಳನ್ನು ಕಂಡರಿಸಿದ್ದು ಅವು ತಮ್ಮ ಸೊಂಡಿಲುಗಳಲ್ಲಿ ಪುಷ್ಪಮಾಲೆ ಹಿಡಿದು ಹಾಕುತ್ತಿರುವಂತಹ ದೃಶ್ಯವಳಿಯ ಕೆತ್ತನೆಯಿರುವ ಗಜಲಕ್ಷ್ಮಿಯ ಶಿಲ್ಪವಿದೆ.

**ಪಾರ್ವತಿ**

ಶಿವನ ಮಡದಿಯಾದ ಪಾರ್ವತಿಯು ಭಾರತೀಯ ಶಕ್ತಿ ದೇವತೆಗಳಲ್ಲಿ ಅಗ್ರಗಣ್ಯಳು. ಭವಾನಿ, ರುದ್ರಾಣಿ, ದ್ರಾಕ್ಷಾಯಿಣಿ, ಹೇಮಾವತಿ ಎಂಬ ಹಲವಾರು ಹೆಸರುಗಳಿಂದ ಪೂಜೆಗೊಳಪಡುವ ಪಾರ್ವತಿಯನ್ನು ಸಾಮಾನ್ಯವಾಗಿ ಶಿವನ ಜೊತೆಯಲ್ಲಿ ತೋರಿಸಲಾಗಿರುತ್ತದೆ. ಇಲ್ಲಿನ ಮಾರ್ಕಂಡೇಯ ದೇವಾಲಯದ ಗರ್ಭಗುಡಿಯಲ್ಲಿನ ಮುಖ್ಯದೇವರ ಮುಂಬಾಗದಲ್ಲಿರುವ ಕಟ್ಟೆಯ ಮೇಲೆ ಎಡಬದಿಯಲ್ಲಿ ಪದ್ಮಾಸನದಲ್ಲಿ ಆಸೀನಳಾಗಿರುವಂತಹ ಪಾರ್ವತಿಯ ಮೂರ್ತಿಶಿಲ್ಪವಿದೆ. ಸರ್ವಾಲಂಕಾರಭೂಷಿತಳಾಗಿರುವ ದೇವಿಯು ಎರಡು ಕೈಗಳನ್ನು ಹೊಂದಿದ್ದು, ಬಲಗೈಯನ್ನು ಅಭಯ ಹಸ್ತವನ್ನಾಗಿ ನೀಡಿದರೆ ಎಡಗೈಯನ್ನು ತನ್ನ ಎಡಗಡೆಯ ಕಾಲಿನ ಮಂಡಿಯ ಮೇಲಿಟ್ಟು ಆಸೀನಳಾಗಿದ್ದಾಳೆ. ಈ ಮೂರ್ತಿಶಿಲ್ಪವು ಅಮೃತ ಶಿಲೆಯಿಂದ ರಚಿಸಲ್ಪಟ್ಟಿದೆ.

ಈ ಮೇಲಿನ ಶಾಕ್ತ ಮೂರ್ತಿಗಳಲ್ಲಿವೇ ಸ್ಥಳೀಯ ಶೈಲಿಯ ಮಾರಿ, ದುರ್ಗಿ, ಚೌಡೇಶ್ವರಿ ಎಂಬಂತಹ ಹಲವಾರು ಮಣ್ಣಿನ ಮೂರ್ತಿಶಿಲ್ಪಗಳನ್ನು ಇತ್ತೀಚಿನ ದಿನಮಾನಗಳಲ್ಲಿ ನಿರ್ಮಿಸಿರುವುದು ಕಂಡು ಬಂದಿದೆ. ಅಷ್ಟೇ ಅಲ್ಲದೇ ಇಲ್ಲಿನ ಶೈವ, ವೈಷ್ಣವ ಮತ್ತು ಶಾಕ್ತೆಯ ಎಂಬ ಎಲ್ಲಾ ಪಂಥಗಳ ದೇವಾಲಯಗಳ ಬಳಿಯಲ್ಲಿ ಗ್ರಾನೈಟ್ ಮತ್ತು ಕಪ್ಪು ಶಿಲೆಯಲ್ಲಿ ನಿರ್ಮಿಸಿದಂತಹ ನಾಗರ ಶಿಲ್ಪಗಳು ಸಹ ಕಂಡು ಬಂದಿವೆ. ಆದರೆ ಇವುಗಳೆಲ್ಲವೂ ಸಹ ಆಧುನಿಕ ಕಾಲದಲ್ಲಿ ನಿರ್ಮಿತಗೊಂಡಿರುವುದರಿಂದ ಇವುಗಳೆಡೆಗೆ ಹೆಚ್ಚಿನ ಗಮನ ಹರಿಸುವ ಪ್ರಯತ್ನ ಮಾಡಿರುವುದಿಲ್ಲ.

## ೩.೩. ಶಾಸನ ಮತ್ತು ಶಾಸನ ಶಿಲ್ಪಗಳು

ಒಂದು ದೇಶದ ಅಥವಾ ಒಂದು ನಾಡಿನ ಇತಿಹಾಸವನ್ನು ರಚಿಸುವಲ್ಲಿ ಸಾಹಿತ್ಯ ಮತ್ತು ಇತರೆ ಆಕರಗಳು ಮೌನವನ್ನು ತಾಳಿದಾಗ ಶಾಸನಗಳು ಮೂಲ ಸಾಮಾಗ್ರಿಗಳಾಗಿ ಸಹಾಯಕವಾಗುತ್ತವೆ. ಭಾರತೀಯ ಇತಿಹಾಸದ ಜೀವನಾಡಿ[೭೯]ಗಳಾಗಿರುವ ಈ ಶಾಸನಗಳ ನೆರವಿನಿಂದ ಕೇವಲ ರಾಜಕೀಯ ಚರಿತ್ರೆಯಲ್ಲದೇ, ಸಾಮಾಜಿಕ, ಆರ್ಥಿಕ, ಧಾರ್ಮಿಕ ಎಂಬ ವಿವಿಧ ಕ್ಷೇತ್ರಗಳ ಚರಿತ್ರೆಯನ್ನು ರಚಿಸಬಹುದು. ಅಂದರೆ ಶಾಸನಗಳು ಕೇವಲ ಚರಿತ್ರೆಯ ರಾಜಕೀಯ ಮುಖವನ್ನು ಮಾತ್ರವಲ್ಲದೇ ಇತರೆ ಮುಖಗಳನ್ನು ರೂಪಿಸುತ್ತದೆ.  ಶಾಸನ ಎಂಬ ಪದವು ಸಂಸ್ಕೃತದ 'ಶಾಸ್' ಎಂಬ ಧಾತುವಿನಿಂದ ಬಂದಿದ್ದು, 'ಆಜ್ಞೆ' ಅಥವಾ 'ರಾಜಾಜ್ಞೆ'[೮೦] ಆಜ್ಞೆಮಾಡು', ಅಥವಾ 'ಘೋಷಣೆ ಹೊರಡಿಸು,'[೮೧] ಶಿಕ್ಷಿಸು 'ಆಜ್ಞಾಪಿಸು', 'ನಿಯಂತ್ರಿಸು', ಎಂಬ ಹಲವಾರು ಅರ್ಥಗಳಿವೆ. ಅಲ್ಲದೇ ಶಾಸನ ಎಂಬ ಪದಕ್ಕೆ ಈಗಲೂ 'ಕಾನೂನು' ಎಂಬ ಅರ್ಥ ಪ್ರಚಲಿತವಾಗಿರುವುದನ್ನು ಗಮನಿಸಬಹುದು.[೮೨] ಒಟ್ಟಾರೆಯಾಗಿ ಸಾಮಾನ್ಯ ಅರ್ಥದಲ್ಲಿ ಶಾಸನ ಎಂದರೆ ರಾಜರ ಅಪ್ಪಣೆ ಅಥವಾ ರಾಜಾಜ್ಞೆಯಾಗಿದೆ. ಗಟ್ಟಿಯಾದ ಕಲ್ಲಿನ ಮೇಲೆ ಕೆತ್ತಿರುವಂತಹ/ ಕೊರೆದಂತಹ ಲಿಪಿ (ಬರವಣಿಗೆ)ಯನ್ನು ಶಿಲಾಶಾಸನವೆಂದು ಕರೆಯಲಾಗುತ್ತದೆ. ಆರಂಭದಲ್ಲಿ ರಾಜರು ಮತ್ತು ಅವರ ಸಾಮಂತ ಅಧಿಕಾರಿ, ಮಂತ್ರಿವರ್ಗದವರು, ನಂತರದ ದಿನಗಳಲ್ಲಿ ಜನಸಾಮಾನ್ಯರೂ ಸಹ ಆಡಳಿತ ವಿಚಾರಗಳು, ಪ್ರಜೆಗಳು ಪಾಲಿಸಬೇಕಾದ ನೀತಿ-ನಿಯಮಗಳು, ದಾನದತ್ತಿ, ಪ್ರಶಸ್ತಿ, ವಾಣಿಜ್ಯ, ವ್ಯಾಪಾರ, ಧರ್ಮ, ಹರಕೆ, ಸಾಹಿತ್ಯ ಮುಂತಾದ ವಿಷಯಗಳ ಬಗ್ಗೆ ಶಾಸನಗಳನ್ನು ಹೊರಡಿಸುತ್ತಿದ್ದರು. ಶಿಲೆ, ಚಿನ್ನ, ಬೆಳ್ಳಿ, ಕಂಚು, ಹಿತ್ತಾಳೆ, ಕಬ್ಬಿಣ, ತಾಮ್ರಪಟ ಎಂಬ ಮೊದಲಾದ ಲೋಹದ ತಗಡುಗಳ ಮೇಲೆ, ನಾಣ್ಯ, ವಿಗ್ರಹ, ಶಂಖ, ದಂತ, ಮಣ್ಣಿನ ಮಡಕೆ, ಪ್ರಾಣಿಗಳ ಚರ್ಮ ಮುಂತಾದ ವಸ್ತುಗಳ ಮೇಲೆ ಶಾಸನಗಳನ್ನು ಬರೆಸಲಾಗುತ್ತಿತ್ತು. ಭಾರತದಲ್ಲಿ ಅತ್ಯಧಿಕ ಸಂಖ್ಯೆಯಲ್ಲಿ ದೊರೆತಿರುವ ಶಾಸನಗಳನ್ನು ಬ್ರಾಹ್ಮೀ, ಪಾಳಿ ಪ್ರಾಕೃತ, ಖರೋಷ್ಠಿ, ಸಂಸ್ಕೃತ, ತೆಲುಗು, ಕನ್ನಡ, ತಮಿಳು, ಮಲೆಯಾಳಂ ಎಂಬ ಮುಂತಾದ ಲಿಪಿ-ಭಾಷೆಗಳಲ್ಲಿ ರಚಿಸಲಾಗಿದೆ. ಅದರಲ್ಲೂ ಹೆಚ್ಚಿನ ಶಾಸನಗಳು ಬ್ರಾಹ್ಮೀಲಿಪಿಯಲ್ಲಿ, ಉಳಿದವುಗಳು ಖರೋಷ್ಠಿ ಮತ್ತು ಇತರೆ ಪ್ರಾಂತೀಯ ಲಿಫಿಗಳಲ್ಲಿ ರಚಿತಗೊಂಡಿವೆ.[೮೩] ಭಾರತದಲ್ಲಿ ದೊರೆತ ಹರಪ್ಪಾ ಸಂಸ್ಕೃತಿಯ ಮುದ್ರೆಗಳ ಮೇಲಿನ ಚಿತ್ರಲಿಪಿಯೇ ಅತ್ಯಂತ ಪ್ರಾಚೀನವಾದರೂ ಆ ಲಿಪಿಯನ್ನು ಇದುವರೆಗೂ ಓದಿ ಅರ್ಥೈಹಿಸಿ ಕೊಳ್ಳುವುದು ಸಾಧ್ಯವಾಗಿಲ್ಲ. ಉತ್ತರ ಪ್ರದೇಶದ 'ಪಿಪ್ರಾವ'ದಲ್ಲಿ ದೊರೆತ ಕರಂಡಕನ ಮೇಲಿನ ಕ್ರಿ.ಪೂ. ೪೫೦ರ ಕಾಲದ ಶಾಸನವು ಅತ್ಯಂತ ಪ್ರಾಚೀನವಾದುದಾಗಿದೆ.[೮೪] ಸೊಹ್ಗಾರ್ ಶಾಸನವು ಅತ್ಯಂತ ಪ್ರಾಚೀನವಾದುದೆಂದು ಹೇಳಿದರೂ ಈ ಕುರಿತಾಗಿ ವಿದ್ವಾಂಸರುಗಳಲ್ಲಿ ಏಕಾಭಿಪ್ರಾಯವಿಲ್ಲ.[೮೫] ಶ್ರೀಲಂಕಾದ ಪ್ರಾಚೀನ ರಾಜಧಾನಿಯಾಗಿದ್ದ ಅನುರಾಧಪುರ[೮೬]ದಲ್ಲಿ ನಡೆಸಿದ ಉತ್ಖನನದಲ್ಲಿ ದೊರೆತ

ಕ್ರಿ.ಪೂ.೬ ಮತ್ತು ೫ನೇ ಶತಮಾನದ ಕಾಲಾವಧಿಗೆ ಸೇರಿದಂತಹ ಮೃತ್ಪಾತ್ರೆಗಳ ಮೇಲಿನ ಶಾಸನಗಳು ಅತ್ಯಂತ ಪ್ರಾಚೀನವಾದವುಗಳೆಂದು ವಿದ್ವಾಂಸರುಗಳ ಅಬಿಪ್ರಾಯವಿದ್ದು. ಇದು ಖಚಿತವಾದರೆ ಈ ಶಾಸನಗಳೇ ಭಾರತದ ಅತೀ ಪ್ರಾಚೀನ ಶಾಸನಗಳಾಗುತ್ತವೆ.[೮೬] ಭಾರತದಲ್ಲಿ ಅಶೋಕನು ಮೊದಲ ಬಾರಿಗೆ ಪೂರ್ಣಪ್ರಮಾಣದ ಶಾಸನಗಳನ್ನು ಹೊರಡಿಸಿ ಭಾರತೀಯ ಶಾಸನಗಳ ಪಿತಾಮಹನೆಂದು ಹೆಸರಾಗಿದ್ದಾನೆ. ಅಶೋಕನ ಕಾಲದಿಂದ ಪಾಳೆಯಗಾರರ ಕಾಲದವರೆಗೆ ಹೊರಡಿಸಿದಂತಹ/ಕೆತ್ತಿಸಿದಂತಹ ಸಾವಿರಾರು ಶಾಸನಗಳು ಕರ್ನಾಟಕದಲ್ಲಿಯೂ ದೊರೆತಿವೆ. ಈ ವಿಷಯದಲ್ಲಿ ಚಿತ್ರದುರ್ಗ ಜಿಲ್ಲೆಯಲ್ಲಿ ಬರುವ ಮೊಳಕಾಲ್ಮೂರು ತಾಲೂಕಿನಲ್ಲಿ ಈ ಹಿಂದೆಯೇ ಕಂಡುಕೊಂಡತೆ ಬಿ.ಎಲ್.ರೈಸ್ ಅವರು ೪೭ ಶಾಸನಗಳನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ. ಅಷ್ಟೆ ಅಲ್ಲದೇ "ಮೈಸೂರು ಆರ್ಕಿಯಾಲಾಜಿಕಲ್ ರಿಪೋರ್ಟ್"ನಲ್ಲಿಯೂ ಕೆಲವೊಂದು ಶಾಸನ ಪತ್ರಗಳು ದಾಖಲಾಗಿವೆ. ಅಧ್ಯಯನ ಕ್ಷೇತ್ರವಾದ ಮೊಳಕಾಲ್ಮೂರು ಪಟ್ಟಣದಲ್ಲಿ ಶಿಲಾಶಾಸನಗಳಷ್ಟೆ ಅಲ್ಲದೇ ಕೆಲವೊಂದು ತಾಮ್ರಪಟ ಶಾಸನಗಳೂ ಸಹ ಕಂಡು ಬಂದಿವೆ.

**ಮೊಳಕಾಲ್ಮೂರು ಬೆಟ್ಟದ ಮೇಲಿನ ಕೆರೆಯ ಬಳಿಯಿರುವ ಬಂಡೆಯಲ್ಲಿನ ಶಾಸನ.[೮೭]**

೧. ಸಿದಾರ್ತಿಸಂವತ್ಸರದ ಮಾಗಬ ೧೦ ಶ್ರೀ ಮನ್ಮಹಾನಾ

೨. ಯಕಾಚಾರ್ಯದ ಹಟ ಕಸ್ತೂರಿ ಮಲ್ಲಪ್ಪ ನಾಯಕನವರಶಾ

೩. ಯಿ ಲಕ್ಷಂಮ ನಗತಿಹೆಸರಕೆರೆ

ಈ ಶಾಸನವು ಮೊಳಕಾಲ್ಮೂರು ಬೆಟ್ಟದ ಮೇಲಿರುವ ಕೋಟೆಯ ಪಶ್ಚಿಮಕ್ಕಿರುವ ಬೆಟ್ಟವನ್ನು ಸಂಧಿಸುವ ಸ್ಥಳದಲ್ಲಿ ಪಶ್ಚಿಮಾಭಿಮುಖವಾಗಿ ನಿರ್ಮಿಸಲಾಗಿರುವ ಕೋಟೆಯ ದ್ವಾರಬಾಗಿಲಿನ (ಬಸವನಬಾಗಿಲು) ಮುಂಬಾಗದಲ್ಲಿರುವ ವಿಶಾಲವಾದ ನಾಗತಿಕೆರೆಯ ನಿರ್ಮಾಣದ ಬಗ್ಗೆ ಬೆಳಕನ್ನು ಚೆಲ್ಲುತ್ತದೆ. ಅಂದರೆ ಈ ಕೆರೆಗೆ ಸಂಬಂಧಿಸಿದಂತೆ ಶ್ರೀಮನ್ ಮಹಾನಾಯಕಚಾರ್ಯನಾದ ನಾಯಕನ ಹಟ್ಟಿಯ ಪಾಳೆಗಾರನಾದ ಕಸ್ತೂರಿ ಮಲ್ಲಪ್ಪನಾಯಕನು ತನ್ನ ತಾಯಿಯಾದ ಲಕ್ಷ್ಮವ್ವನಾಗತಿಯ ಹೆಸರಿನಲ್ಲಿ ಕ್ರಿ.ಶ.೧೬೨೦ರಲ್ಲಿ ಮೊಳಕಾಲ್ಮೂರುವಿನ ಬೆಟ್ಟದ ಮೇಲೆ ಕೆರೆಯೊಂದನ್ನು ನಿರ್ಮಿಸಿರುವುದರ ವಿಚಾರವನ್ನು ಈ ಶಾಸನವು ಪ್ರಸ್ತಾಪಿಸುತ್ತದೆ.

***. ಮೊಳಕಾಲ್ಮೂರು ಬೆಟ್ಟದ ಬಾಗಿಲ ಬಳಿಯ ಹುಟ್ಟುಗುಂಡಿನ ಮೇಲಿನ ಮತ್ತೊಂದು ಶಾಸನ[೮೮]**

೧. ಯಿದುರ್ಗದ ಯಾವಕಾಲ

೨. ವಂರಳಗೆಯೇನು ಆಯಿಬುಬಂದ

೩. ಕಾದುಯಿಂದಂತಾವರ ಹೊಟ್ಟೆ ಬಗಸಿ

೪. ತಲೆಹೊಸಿ ಸೂಲಕ್ಕೆ ಹಾಕಸುತದೆ

ಇಲ್ಲಿನ ಬೆಟ್ಟದ ಮೇಲಿನ ಕೋಟೆಯ ದ್ವಾರಬಾಗಿಲಿನ(ಬಸವನ ಬಾಗಿಲು) ಬಳಿಯ ಹುಟ್ಟುಗುಂಡಿನ ಮೇಲಿರುವ ಶಾಸನವು ಇಲ್ಲಿನ ದುರ್ಗದೊಳಗೆ ಯಾರಾದರೂ ಯಾವ ಕಾಲದಲ್ಲಾದರೂ, ಅನುಮಾನಸ್ಪದ ಕಾರ್ಯವನ್ನು ನಡೆಸಿದರೆ ಅಥವಾ ಅಕ್ಕೃತ್ಯದಲ್ಲಿ ತೊಡಗಿದರೆ ಅಂತಹವರ ಹೊಟ್ಟೆಯನ್ನು ಬಗೆಸಿ ಅವರ ತಲೆಯನ್ನು ಶೂಲಕ್ಕೆ ಹಾಕಿಸಲಾಗುತ್ತದೆಂದು ವಿವರಿಸುತ್ತದೆ. ಆದರೆ ಈ ಶಾಸನದಲ್ಲಿ ಯಾವುದೇ ರೀತಿಯ ಕಾಲವನ್ನಾಗಲೀ, ಹೆಸರನ್ನಾಗಲೀ ಕೆತ್ತಿರುವುದಿಲ್ಲದರಿಂದ ಈ ಶಾಸನವನ್ನು ಯಾರು ಕೆತ್ತಿಸಿದರೆಂದು ನಿರ್ದಿಷ್ಟವಾಗಿ ತಿಳಿದುಬರುವುದಿಲ್ಲ. ಬಹುಶಃ ಇಲ್ಲಿನ ಬೆಟ್ಟ(ಪ್ರದೇಶದಲ್ಲಿ ಕೋಟೆಯನ್ನು ನಿರ್ಮಿಸಿಕೊಂಡು ಆಳ್ವಿಕೆಯನ್ನು ನಡೆಸಿದ ನಾಯಕನ ಹಟ್ಟಿಯ ಪಾಳೆಯಗಾರನಾದ ಕಸ್ತೂರಿಮಲ್ಲಪ್ಪನಾಯಕನು ಇಲ್ಲಿನ ದುರ್ಗದೊಳಗೆ ನುಸುಳುವ ಶತೃಗಳಿಗೆ ಈ ಕಟ್ಟಪ್ಪಣೆಯನ್ನು ಹೊರಡಿಸುವುದರ ಮೂಲಕ ಶಿಕ್ಷೆವಿಧಿಸುವುದಾಗೆಂದು ಈ ಶಾಸನವನ್ನು ಕೆತ್ತಿಸಿರಬಹುದೆಂದು ತಿಳಿಯಬಹುದಾಗಿದೆ.

***. ಅದೇ ಬೆಟ್ಟದ ಮೇಲಿನ ಕೆರೇವಳಗೆ ಇರುವ ಗುಂಡಿನಲ್ಲಿನ ಶಾಸನ**[೮೯]

ಈಗಾಗಲೇ ಈ ಮೇಲೆ ಕಂಡುಕೊಂಡಂತೆ ಹಟ್ಟಿಯ ಪಾಳೆಯಗಾರರಿಂದ ಇಲ್ಲಿನ ಬೆಟ್ಟದ ಮೇಲೆ ನಿರ್ಮಾಣಗೊಂಡಂತಹ ಲಕ್ಷ್ಮವ್ವನಾಗತಿಕೆರೆಯ ಮಧ್ಯದಲ್ಲಿರುವ ಹುಟ್ಟುಗುಂಡುವಿನ ಮೇಲೆ ಶಾಸನವೊಂದಿದೆ. ಈ ಶಾಸನವು ಕಾಳಿದಾಸ ಮತ್ತು ಹೇಮಚಂದ್ರ ಕವಿಗಳ ಬಗೆಗೆ ಉಲ್ಲೇಖಿಸುತ್ತದೆ. ಅಂದರೆ ಇಲ್ಲಿನ ಹುಟ್ಟುಗುಂಡುವಿನ ಮೇಲೆ ಒಂದು ಆನೆಯ ಚಿತ್ರವಿದೆ. ಆ ಆನೆಯ ಕಾಲಿನ ಮೇಲೆ ಕನ್ನಡ ಮತ್ತು ಸಂಸ್ಕೃತದಲ್ಲಿ ಬರೆದಿರುವಂತಹ ಕಾಳಿದಾಸನ ಒಂದು ಶಾಸನವಿದೆ.

ಕಂಜರಂ ಪುರತೇಂದ್ರಚಂ ಮಹೇಂದಾಳಿಸದಾಳಿಕಾ
ಕಾಳಿದಾಸಳಿದಾಂ ಹೇಮಚಂದ್ರಂ ತೇರ ಪುರಂಜಕಂ

ಈ ಶಾಸನಪಾಠವನ್ನು ಗಮನಿಸಿದರೆ ಇಲ್ಲಿನ ಶಾಸನಗಳಲ್ಲಷ್ಟೆ ಅಲ್ಲದೇ ಇಡೀ ತಾಲೂಕಿನ ಶಾಸನಗಳಲ್ಲಿಯೇ ಈ ಶಾಸನವು ವಿಶೇಷವಾದುದಾಗಿದೆ. ಕಾಳಿದಾಸಕವಿಯ ಈ ಒಂದು ಶಾಸನವು ಆರಂಭದಿಂದ ಕೊನೆಯವರೆಗೆ ಹಾಗೂ ಕೊನೆಯಿಂದ ಆರಂಭದವರೆಗೆ ಓದಿದರೆ ಒಂದೇ ಅರ್ಥಬರುತ್ತದೆ. ಅಂದರೆ ಶಾಸನದ ಆರಂಭದ ಅಕ್ಷರದಿಂದ ಅಂತ್ಯದ ಅಕ್ಷರದವರೆಗೆ ಮತ್ತು ಅಂತ್ಯದ ಅಕ್ಷರದಿಂದ ಆದಿ ಅಕ್ಷರದವರೆಗೆ ಓದಿದರೆ ಯಾವುದೇ ರೀತಿಯಲ್ಲಿ ಬದಲಾಗದೇ ಒಂದೇ ಅರ್ಥವನ್ನು ನೀಡುವುದರ ಮೂಲಕ ವಿಶೇಷವೆನಿಸಿಕೊಂಡಿದೆ. ಈ ಶಾಸನವನ್ನು ಗಮನಿಸಿದರೆ ಕಾಳಿದಾಸಕವಿಯು ಈ ಪರಿಸರದಲ್ಲಿದ್ದನೆ? ಈ ಬೆಟ್ಟಕ್ಕೆ ಬಂದಿದ್ದನೆ? ಎಂಬ ಪ್ರಶ್ನೆಗಳು ಸಂಶೋಧಕರಿಗೆ ಸಹಜವಾಗಿ ಮೂಡುತ್ತವೆ. ಈ ಪ್ರಶ್ನೆಗಳಿಗೆ ಸಂಬಂಧಿಸಿದಂತೆ ಇಲ್ಲಿನ ಶಾಸನವನ್ನು ಗಮನಿಸಿದ ಹುಲ್ಲೂರು ಶ್ರೀನಿವಾಸ ಜೋಯಿಸರು ಕವಿ ಕಾಳಿದಾಸನು ಇಲ್ಲಿನ ಜಟಂಗಿರಾಮೇಶ್ವರ ಬೆಟ್ಟಕ್ಕೆ ಭೇಟಿ ನೀಡಿ, ಒಂದು ವರ್ಷಕಾಲ ಇಲ್ಲಿಯೇ ವಾಸವಾಗಿದ್ದನೆಂದು ಅಭಿಪ್ರಾಯಪಟ್ಟಿದ್ದಾರೆ. ಕವಿ

ಕಾಳಿದಾಸನು ತನ್ನ 'ಮೇಘದೂತ' ಕಾವ್ಯದಲ್ಲಿ ಇಲ್ಲಿನ ಜಟಂಗಿ ರಾಮೇಶ್ವರ ಬೆಟ್ಟವನ್ನು "ಜನಕತನಯಾಸ್ನಾವ ಪುಣ್ಯೋದಕೇಷು: ಸಿಗ್ಧಚ್ಛಾಯಾತರಾಘು: ರಾಮಗಿರ್ಯಾಶ್ರಮೇಘು" ಎಂದು ವರ್ಣಿಸಿದ್ದಾರೆ.[೧೦] ಹಾಗೆಯೇ ಈ ಶಾಸನಪಾಠವನ್ನು ಗಮನಿಸಿದ ಸಂಶೋಧಕ ಮೈಲಾರಪ್ಪ ಅವರು "ಹೇ ಆನಂದದಾತನಾದ ಕಾಳಿದಾಸನೇ, ಮನಸ್ಸಂತೋಷವನ್ನುಂಟು ಮಾಡುವ ಈ ನಿನ್ನ ಶ್ಲೋಕ! ಶಾಸನವು, ಸುಖವನ್ನು ಜಯವನ್ನು ಮತ್ತು ಐಶ್ವರ್ಯವನ್ನು ಕೊಡುತ್ತದೆ. ಅಲ್ಲದೇ ಶತೃಗಳಿಗೂ ಕೂಡ ಸಂತೋಷವನ್ನಿಯುತ್ತದೆ. ಈ ಪುರದಲ್ಲಿ ನಿನ್ನ ಮಮತೆಯು ತೋರಲ್ಪಡುತ್ತದೆ. ನೀನು ಕವಿವೃಂದದಲ್ಲಿ ಅಮಿತವಾಗಿ ಗೌರವಿಸಲ್ಪಟ್ಟವನು" ಎಂಬ ಅರ್ಥವನ್ನು ನೀಡುತ್ತದೆಂದು ಅಭಿಪ್ರಾಯಪಟ್ಟಿದ್ದಾರೆ.[೧೧] ಬೆಟ್ಟದ ಮೇಲಿನ ಶಿಲಾ ಶಾಸನಗಳ ಜೊತೆಗೆ ಮೊಳಕಾಲ್ಮೂರು ಪಟ್ಟಣದಲ್ಲಿ ತಾಮ್ರಪಟ ಶಾಸನಗಳೂ ಸಹ ದೊರೆತಿವೆ.

* ಈ ಪಟ್ಟಣದಲ್ಲಿರುವ ತಾಮ್ರಪಟ ಶಾಸನವೊಂದು (ಶಾಲಿವಾಹನ ಶಕೆ ೩.೨೫, ತೆಲುಗು ಅಕ್ಷರ) ಶ್ರೀಮದ್ ರಾಜಾಧಿರಾಜ, ರಾಜಪರಮೇಶ್ವರನಾದ ವಿಜಯನಗರದ ಶ್ರೀ ಕೃಷ್ಣದೇವರಾಯನು ಅಧಿಕಾರದಲ್ಲಿದ್ದಾಗ ರಾಯದುರ್ಗಸೀಮೆಯ ವ್ಯಾಪ್ತಿಯಲ್ಲಿನ ಮೊಳಕಾಲ್ಮೂರು ಹೋಬಳಿಯ ಅಡವಿಭೂತಮುದ್ರಗ್ರಾಮ ೧೧, ಆಡುಚಿತ್ತನಹಾಳು, ಜಂನಾಪುರಗಳಲ್ಲದೇ ಅಗ್ರಹಾರದಲ್ಲಿನ ದೇವಾಲಯಗಳು ಬಿದ್ದುಹೋಗಿದ್ದರಿಂದ ಅವುಗಳ ದುರಸ್ಥಿಗೆ, ದೇವಾಲಯಗಳ ದೀಪಾರಾಧನೆಗೆ, ಹಾಗೂ ಪೂಜೆಗಾಗಿ ದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ. ಅಷ್ಟೆ ಅಲ್ಲದೇ ಬಿದ್ದುಹೋಗಿದ್ದ ದೇವಾಲಯಗಳನ್ನು ರಾಜನ ಸಮ್ಮುಖದಲ್ಲಿಯೇ ದುರಸ್ಥಿಗೊಳಿಸಿದ ರಾಯದುರ್ಗದ ಕರಣಿಕನಾದ ಲಕ್ಷ್ಮೀಪತಿ, ಮಳಸಜೆದೇವರು, ಸಿರುಮಣಜೋಯಿಸ, ಮಲ್ಲಿನಗೌಡ, ಅಕ್ಕಸಾಲಿಗರು, ತಳವಾರರು, ವಡ್ಡರು(ಭೋವಿಗಳು) ಎಂಬ ಮೊದಲಾದ ವರ್ಣದವರಿಗೆ, ಅವರ ಜೀವನದ ನಿರ್ವಾಹಣೆಗಾಗಿ ರಾಜನು ನೀಡಿದ ದಾನದಲ್ಲಿಯೇ ಸ್ವಲ್ಪ ಭಾಗವನ್ನು ನೀಡಲಾಯಿತೆಂದು ಪ್ರಸ್ತಾಪಿಸುತ್ತದೆ.[೧೨] ಈ ಶಾಸನದಲ್ಲಿ ಕಾಲಮಾನವನ್ನು ಕ್ರಿ.ಶ.೪೦೩ (ಶಾಲಿವಾಹನಶಕೆ ೩೨೫) ಎಂದು ನಮೂದಿಸಿರುವುದರಿಂದ ಇದೊಂದು ನಕಲಿ ಶಾಸನವಾಗಿದೆ ಎನ್ನಬಹುದು.

* ಮೊಳಕಾಲ್ಮೂರಿನ ಪಟೇಲನಾದ "ತಪ್ಪಸಾಮಪ್ಪ"ನಲ್ಲಿರುವ ತಾಮ್ರಶಾಸನವು ಕ್ರಿ.ಶ. ೧೦೭೮ರ ವಿಜಯನಗರದ ಸಂಗಮವಂಶದ ದೊರೆಯಾದ ಪ್ರೌಢದೇವರಾಯನ ಕಾಲದಲ್ಲಿ ರಚಿಸಲಾಯಿತೆಂದು ನಮೂದಿಸಲಾಗಿದೆ. ಈ ಶಾಸನವು ಗೋಲ್ಕಂಡದ ಭೂಮಾಲೀಕನಾದ ದಾಸನಾಯಕನ ಸಂಪ್ರದಾಯಕ್ಕೆ ಸೇರಿದ 'ತಿರುಮಲರಾಯ'ನು ಕುರುಗೋಡಿಗೆ ಬಂದಾಗ ಆತನಿಗೆ ದೊರೆಯು ಭೂಮಿಯನ್ನು ದಾನ ಮಾಡಿದನೆಂದು ಪ್ರಸ್ತಾಪಿಸುತ್ತದೆ.[೧೩] ಇದೂ ಸಹ ನಕಲಿಶಾಸನವಾಗಿದೆ.

ಒಟ್ಟಾರೆಯಾಗಿ ಒಂದು ನಾಡಿನ ಚರಿತ್ರೆಯನ್ನು ರಚಿಸುವಲ್ಲಿ ಮೂಲ ಸಾಮಾಗ್ರಿಗಳಾಗಿ ನೆರವಾಗುವ ಶಾಸನಗಳು ಮೊಳಕಾಲ್ಮೂರು ಪಟ್ಟಣದಲ್ಲಿಯೂ ಕಂಡುಬಂದಿವೆ. ಈ ಪಟ್ಟಣದಲ್ಲಿ

ಪಾಳೆಯಗಾರರ ಕಾಲದಲ್ಲಿ ಗಟ್ಟಿಯಾದ ಕಲ್ಲಿನ ಮೇಲೆ ಕೊರೆದ ಶಿಲಾ ಶಾಸನಗಳಷ್ಟೆ ಅಲ್ಲದೇ ಊರಿನ ಪ್ರಮುಖ ಗಣ್ಯವ್ಯಕ್ತಿಗಳ ಬಳಿಯಲ್ಲಿ ತಾಮ್ರಪಟಶಾಸನಗಳೂ ದೊರೆತಿವೆ. ಆದರೆ ಇದುವರೆಗೂ ನಾಡಿನಾದ್ಯಂತ ದೊರೆತ ತಾಮ್ರಪಟಶಾಸನಗಳು ಬಹುತೇಕ ನಕಲಿಶಾಸನಗಳಾಗಿದ್ದು, ನಂಬಲು ಅನರ್ಹವಾಗಿವೆ. ಹಾಗಾಗಿ ಈ ತಾಮ್ರಪಟಶಾಸನಗಳು ಶಿಲಾ ಶಾಸನಗಳಂತೆ ಐತಿಹಾಸಿಕ ಮಹತ್ವವನ್ನು ಪಡೆದಿರುವುದಿಲ್ಲ.

**ಶಾಸನಶಿಲ್ಪಗಳು**

ಒಂದು ಪ್ರದೇಶದ ಇತಿಹಾಸದ ಪುನರ್ರಚನೆಯ ಅಧ್ಯಯನದಲ್ಲಿ ಶಾಸನಗಳಷ್ಟೆ ಪ್ರಮುಖವಾಗಿ ಸಹಕಾರಿಯಾಗುವ ಚರಿತ್ರೆಯ ಮೂಲ ಸಾಮಾಗ್ರಿಗಳೆಂದರೇ ಶಾಸನಶಿಲ್ಪಗಳಾಗಿವೆ. 'ಶಾಸನ' ಎಂಬ ಪದಕ್ಕಿರುವ 'ರಾಜಾಜ್ಞೆ' ಎಂಬ ಮೂಲಾರ್ಥವು ಕಾಲಕ್ರಮೇಣವಾಗಿ ವಿಸ್ತೃತಗೊಂಡು, ವಿಶಾಲಾರ್ಥದಲ್ಲಿ ರಾಜಪ್ರಶಸ್ತಿ ಶಾಸನಗಳು, ವೀರಗಲ್ಲು, ಮಾಸ್ತಿಕಲ್ಲು, ನಿಸಿದಿಕಲ್ಲುಗಳೆಂಬ ಮುಂತಾದ ವುಗಳೂ ಸಹ ಶಾಸನಗಳೆನಿಸಿಕೊಂಡವು.[೯೪] ಇತಿಹಾಸದ ಬೆಳಕಿನಾಚೆಯ ಅಜ್ಞಾನದ ಕತ್ತಲೆಯೊಳಗೆ ಅವಿತುಕೊಂಡಿರುವ, ಅದರ ಗತಕಾಲದ ಅರಿವಿಗೆ ದಾರಿದೀವಿಗೆಯಾಗಿರುವ ಶಾಸನಶಿಲ್ಪಗಳು ಚರಿತ್ರೆಯ ಮೇಲೆ ಗಾಢವಾದ ಬೆಳಕನ್ನು ಚೆಲ್ಲುತ್ತವೆ. ಶಾಸನಶಿಲ್ಪಗಳಾದ ವೀರಗಲ್ಲು, ಮಹಾಸತಿಕಲ್ಲುಗಳಲ್ಲಿನ ಶಿಲ್ಪವನ್ನು ಪ್ರತಿನಿಧಿಸುವ ವೀರ, ವೀರಸ್ತ್ರೀಯರಿಬ್ಬರ ಹೋರಾಟ, ವೀರತ್ವ, ಶೂರತ್ವ, ಸ್ವಾಮಿನಿಷ್ಠೆ, ಸ್ವಾಭಿಮಾನ, ತ್ಯಾಗ ಮನೋಭಾವನೆ, ಪಾತಿವ್ರತ್ಯೆಯ ಬಗ್ಗೆ ಪರಿಚಯವಾಗಿ ಮಡಿದವರ ಮೌಲ್ಯಯುತ ಬದುಕನ್ನು ಅರಿಯಲು ಸಹಕಾರಿಯಾಗುತ್ತವೆ. ಅಧ್ಯಯನ ಕ್ಷೇತ್ರವಾದ ಮೊಳಕಾಲ್ಮೂರು ಪಟ್ಟಣದಲ್ಲಿಯೂ ಸಹ ವೀರಗಲ್ಲು, ಮಹಾಸತಿಕಲ್ಲುಗಳೆಂಬ ಶಾಸನಶಿಲ್ಪಗಳು ಕಂಡುಬಂದಿವೆ. ಆದರೆ ಇಲ್ಲಿ ದೊರೆತಂತಹ ಶಾಸನಶಿಲ್ಪಗಳಲ್ಲಿ ಯಾವುದೇ ರೀತಿಯಾದಂತಹ ಬರವಣಿಗೆಯಾಗಲೀ, ಲಿಪಿಯಾಗಲೀ, ಶಾಸನವಾಗಲೀ ಇಲ್ಲ. ಆದರೂ ಅವುಗಳ ಮೇಲೆ ಮೂಡಿಸಿರುವ ೧ ಕೆತ್ತಿದ ಚಿತ್ರಕಲೆ, ಶಿಲ್ಪಕಲೆ, ಆಯುಧೋಪಕರಣಗಳ ಕೆತ್ತನೆ ಹಾಗೂ ಹೋರಾಟದ ಸನ್ನಿವೇಶದ ದೃಶ್ಯವಳಿಯ ಕೆತ್ತನೆಗಳಿಂದ ಅವುಗಳ ಹಿಂದೆ ಸೂಪ್ತವಾಗಿ ಅಡಗಿರುವ ನಂಬಿಕೆ, ಆಚರಣೆ, ಶಕ್ತಿಸಾಮಾರ್ಥ್ಯ, ಎಂಬ ಮೊದಲಾದ ಸಂಗತಿಗಳನ್ನು ಅರಿತುಕೊಳ್ಳಬಹುದು.

***. ಕೋತಲಗೊಂದಿ ಕೆರೆಯ ಬಳಿಯಿರುವ ಮಾಸ್ತಿಕಲ್ಲುಗಳು**

ಪಟ್ಟಣದಿಂದ ಪಶ್ಚಿಮಭಾಗದಲ್ಲಿರುವ ಕೋತಲಗೊಂದಿ ಎಂಬ ನುಂಕೀಮಲೆಯ ಪರ್ವತಶ್ರೇಣಿಯಲ್ಲಿನ ಕೆರೆಗೆ ಹೋಗುವ ಕಾಲ್ದಾರಿಯ ಬಂಡಿನಾಗರಾಜಪ್ಪನ ಹೊಲದಲ್ಲಿ ಬರುವ ಬೃಹತ್ ಶಿಲಾಯುಗ ಸಂಸ್ಕೃತಿಯ ಸಮಾಧಿಯಿಂದ ಉತ್ತರಾಭಿಮುಖವಾಗಿರುವ ನುಂಕೀಮಲೆ ಮತ್ತು ಮೊಳಕಾಲ್ಮೂರು ಬೆಟ್ಟಗಳೆರಡರ ನಡುವಿನ ಸಂದು/ಗೊಂದಿಯಲ್ಲಿ ಸತಿಕಲ್ಲಿ/ಮಾಸ್ತಿ ಕಲ್ಲುಗಳು ಹಾಗೂ ಒಂದು ವೀರಗಲ್ಲಿದೆ. ಈ ಶಾಸನ ಶಿಲ್ಪಗಳಿರುವ ಸಂದುವಿಗೆ ಅಲ್ಲೀನ ಸ್ಥಳೀಯರು

'ತುರ್ಲಬ್ಬಸಂದು' ಎಂತಲೂ ಕರೆಯುವರು. ಇಲ್ಲಿನ ಬಯಲಿನಲ್ಲಿ ಸು. ೨ ಅಡಿ ಉದ್ದ ಹಾಗೂ ೨.೫ ಅಡಿ ಅಗಲದ ಗ್ರಾನೈಟ್ ಶಿಲೆಯಲ್ಲಿ ಮಾಸ್ತಿಯೋರ್ವಳನ್ನು ಕೆತ್ತಿದಂತಹ ಸತಿಗಲ್ಲಿದೆ. ಪೂರ್ವಾಭಿಮುಖವಾಗಿರುವ ಈ ಶಿಲೆಯಲ್ಲಿ ಇಬ್ಬರು ಸ್ತ್ರೀಯರ ಕೆತ್ತನೆಗಳಿವೆ. ಇವರುಗಳಲ್ಲಿ ಒಬ್ಬ ಸ್ತ್ರೀಯನ್ನು ಸ್ವಲ್ಪ ದೊಡ್ಡಗಾತ್ರದಲ್ಲಿ. ಮತ್ತೊರ್ವಳನ್ನು ಚಿಕ್ಕಗಾತ್ರದಲ್ಲಿ ಕೆತ್ತಲಾಗಿದೆ. ದೊಡ್ಡಗಾತ್ರದಲ್ಲಿ ಕೆತ್ತಿರುವ ಸ್ತ್ರೀಯು ಕೊರಳಿನಲ್ಲಿ ಕೊರಳಸರ, ಕಾಲುಗಳಲ್ಲಿ ಕಾಲ್ಕಡಗ ಧರಿಸಿ ನಿಂತಿರುವ ಈ ಸ್ತ್ರೀಯು ತನ್ನ ಬಲಗೈಯನ್ನು ಆಕೆಯ ಬಲಭುಜದವರೆಗೆ ಸ್ವಲ್ಪ ಮೇಲಕ್ಕೆ ಎತ್ತಿದ್ದು, ಕೈಯಲ್ಲಿ ನಿಂಬೆಹಣ್ಣನ್ನು ಹಿಡಿದಿದ್ದಾಳೆ. ಎಡಗೈಯನ್ನು ತನ್ನ ಸೊಂಟದ ಭಾಗದವರೆಗೆ ಕೆಳಗೆ ಇಳಿಯಬಿಟ್ಟು, ತನ್ನ ತಲೆಕೂದಲನ್ನು ಹಿಂದಕ್ಕೆ ಬಾಚಿ ತುರುಬನ್ನು ಕಟ್ಟಿಕೊಂಡು ದಕ್ಷಿಣ ದಿಕ್ಕಿನೆಡೆಗೆ ಮುಖಮಾಡಿ ನಿಂತಿದ್ದಾಳೆ ಈಕೆಯು ಉಟ್ಟಿರುವ ಸೀರೆಯ ನೆರಿಗೆಗಳು ಪಾದದವರೆಗೂ ಇಳಿಬಿಟ್ಟಿರುವಂತಿವೆ. ಹಾಗೂ ಸೀರೆಯ ಸೆರಗು ಈಕೆಯ ಬಲತೋಳಿನ ಕೆಳಗೆ ಬಂದು ಹರಡಿಕೊಂಡಿದೆ. ವಸ್ತ್ರಾಭರಣಗಳಿಂದ ಅಲಂಕೃತಗೊಂಡಿರುವ ಈ ಶಿಲ್ಪದಲ್ಲಿನ ಸ್ತ್ರೀಯ ಸೌಂದರ್ಯವನ್ನು ಗಮನಿಸಿದರೆ ಈಕೆಯು ಯಾವುದೋ ರಾಜನ ಅಥವಾ ಪುರದ ಪ್ರಮುಖನ ಮಡದಿಯಾಗಿರಬೇಕೆಂದು ತಿಳಿದು ಬರುತ್ತದೆ. ಈ ಶಿಲ್ಪದಲ್ಲಿಯೇ ಎಡಭಾಗದಲ್ಲಿ ಕೆತ್ತಿರುವ ಚಿಕ್ಕದಾದ ಸ್ತ್ರೀಯು ಯಾವುದೇ ರೀತಿಯ ಆಭರಣಗಳನ್ನು ಧರಿಸದೇ ತನ್ನೆರಡೂ ಕೈಗಳನ್ನು ಜೋಡಿಸಿ ಪ್ರಾರ್ಥಿಸುವಂತೆ ಕೆತ್ತಲಾಗಿದೆ. ಇದರಿಂದ ಈಕೆಯು ತನ್ನ ಬಲಬದಿಗೆರುವ ಅಲಂಕಾರ ಭೂಷಿತಳಾಗಿರುವ ಸ್ತ್ರೀಯ ಸೇವಕಿಯಾಗಿರಬಹುದೆನ್ನಲಾಗಿದೆ. ಈ ಸತಿಕಲ್ಲನ್ನು/ಮಾಸ್ತಿಕಲ್ಲನ್ನು ಎಲ್ಲಿಂದಲೋ ತಂದು ಇಲ್ಲಿರಿಸಿದ್ದಾರೆಂದು ಮರಿಕುಂಟ ತಿಪ್ಪೇಸ್ವಾಮಿಯವರು ಅಭಿಪ್ರಾಯಪಟ್ಟಿದ್ದಾರೆ.

ಈ ಕಲ್ಲಿನ ಪಕ್ಕದಲ್ಲಿಯೇ ಇರುವ ಮತ್ತೊಂದು ಚಿಕ್ಕ ಕಲ್ಲಿನಲ್ಲಿ ಉತ್ತರ ದಿಕ್ಕಿಗೆ ಮುಖ ಮಾಡಿನಿಂತಿರುವ ವೀರನೊಬ್ಬನ ಕೆತ್ತನೆಯನ್ನೊಳಗೊಂಡ ವೀರಗಲ್ಲಿದೆ. ಪೂರ್ವಾಭಿಮುಖವಾಗಿ ನೆಟ್ಟಿರುವಂತಹ ಈ ಶಾಸನಶಿಲ್ಪದಲ್ಲಿರುವ ವೀರನು ತನ್ನ ಎಡಗೈಯಲ್ಲಿ ಬಿಲ್ಲನ್ನು ಬಲಗೈಯಲ್ಲಿ ಕತ್ತಿಯನ್ನು ಹಿಡಿದು ನಿಂತಿದ್ದಾನೆ. ಅಷ್ಟೇ ಅಲ್ಲದೇ ಈತನು ತನ್ನ ಸೊಂಟಕ್ಕೆ ಸುತ್ತಿಕೊಂಡಿರುವ ವಸ್ತ್ರದಲ್ಲಿ ನಡುಗತ್ತಿಯೊಂದನ್ನು ಸಿಕ್ಕಿಸಿಕೊಂಡಿರುವುದನ್ನು ಕಾಣಬಹುದು. ಮೇಲಿನ ಮಾಸ್ತಿಕಲ್ಲು ಮತ್ತು ವೀರಗಲ್ಲು ಎರಡೂ ಸಹ ಒಟ್ಟಿಗೆ ಪಕ್ಕದಲ್ಲಿಯೇ ಇರುವುದು ಕಂಡುಬಂದಿದೆ.

ಇಲ್ಲಿರುವ ವೀರಗಲ್ಲು ಮತ್ತು ಮಾಸ್ತಿಕಲ್ಲುಗಳಿರುವ ಜಾಗದಿಂದ ಹಾಗೆಯೇ ಉತ್ತರದ ದಿಕ್ಕಿನೆಡೆಗೆ ಸ್ವಲ್ಪ ಮುಂದೆ ಸಾಗಿದರೆ ಅಲ್ಲಿನ ಒಂದು ಚಿಕ್ಕ ಹುಟ್ಟ ಗುಂಡುವಿನ ಮೇಲೆ ನಿಂತ ಸ್ತ್ರೀಯ ಕೆತ್ತನೆಯನ್ನೊಳಗೊಂಡ ಮತ್ತೊಂದು ಮಾಸ್ತಿಕಲ್ಲಿದೆ. ಒಂಟಿ ಮಾಸ್ತಿಯೋರ್ವಳ ಚಿತ್ರ ಕೆತ್ತನೆಯಿರುವ ಈ ಶಿಲ್ಪವೂ ಸಹ ಪೂರ್ವಾಭಿಮುಖವಾಗಿದೆ. ಇಲ್ಲಿನ ಶಿಲ್ಪದಲ್ಲಿನ ಸ್ತ್ರೀಯು ತನ್ನ ತಲೆಕೂದಲನ್ನು ಹಿಂದಕ್ಕೆ ಬಾಚಿ ತುರುಬುಕಟ್ಟಿ, ಕೈ, ಕಾಲು, ಕಿವಿಗಳಲ್ಲಿ ಆಭರಣಗಳನ್ನು ಧರಿಸಿ ಸರ್ವಾಲಂಕಾರ ಭೂಷಿತಳಾಗಿ, ಬಲಗೈಯನ್ನು ಸೊಂಟದ ಭಾಗದವರೆಗೆ ಮೇಲಕ್ಕೆತ್ತಿದ್ದು ಸ್ವಲ್ಪ

ಮುಂಚಾಚಿದ್ದು, ಎಡಗೈಯನ್ನು ಆಕೆಯ ಸೊಂಟಕ್ಕೆ ತಾಕುವಂತೆ ಕೆಳಗೆ ಇಳಿಯಬಿಟ್ಟು ಉತ್ತರದೆಡೆಗೆ ಮುಖಮಾಡಿ ನಿಂತಿದ್ದಾಳೆ. ಆದರೆ ಸ್ಥಳೀಯರು ಈ ಶಿಲ್ಪಗಳ ಕೆತ್ತನೆಯ ಹಿಂದಿನ ಚರಿತ್ರೆಯ ಸಾರವನ್ನು ತಿಳಿಯದೇ ನಿಧಿಯ ಆಸೆಗಾಗಿ ಇತ್ತಿಚ್ಚಿಗೆ ಈ ಸ್ಮಾರಕದ ಮುಂಭಾಗದಲ್ಲಿ ಸು. ೫ ಅಡಿ ಆಳದವರೆಗೆ ಕುಣಿಯನ್ನು ತೆಗೆದಿದ್ದಾರೆ. ಆದರೆ ಸ್ಮಾರಕಕ್ಕೆ ಯಾವುದೇ ರೀತಿಯಲ್ಲಿ ಧಕ್ಕೆ ಮಾಡಿಲ್ಲದಿರುವುದು ನಿಜಕ್ಕೂ ಮೆಚ್ಚಬಹುದಾಗಿದೆ. ಇದನ್ನೆಲ್ಲಾ ಗಮನಿಸಿದರೆ ಈ ಸ್ಮಾರಕಾವಶೇಷಗಳನ್ನು ಸಂರಕ್ಷಿಸುವ ಅವಶ್ಯಕತೆ ಇದೆ ಎನ್ನಲಾಗಿದೆ.

***. ಹಿರೇಮಠದ ಆವರಣದಲ್ಲಿರುವ ವೀರಗಲ್ಲು**

ಪಟ್ಟಣದ ದವಳಪ್ಪನ ಬೀದಿಯಲ್ಲಿ ಬರುವ ಪಾಳೆಯಗಾರರ ಕಾಲದ ಹಿರೇಮಠದ ಆವರಣದೊಳಗೆ ಮಠಕ್ಕೆ ಸುತ್ತಲೂ ಇರುವ ಪಾಕಾರ ಗೋಡೆಗೆ ಸು. ೫ ಅಡಿ ಉದ್ದ. ಮತ್ತು ೨.೫ ಅಡಿ ಅಗಲದ ವೀರಗಲ್ಲೊಂದಿದೆ. ಬಿಳಿಕಣ ಶಿಲೆಯಿಂದ ಕೂಡಿದ ಈ ವೀರಗಲ್ಲನ್ನು ಪಶ್ಚಿಮಾಭಿಮುಖವಾಗಿ ನಿಲ್ಲಿಸಲಾಗಿದೆ. ಸಾಮಾನ್ಯವಾಗಿ ವೀರಗಲ್ಲುಗಳನ್ನು ಪೂರ್ವಾಭಿಮುಖ ವಾಗಿಯೇ ಹೆಚ್ಚಾಗಿ ನಿಲ್ಲಿಸಿರುವುದು ಕಂಡುಬರುತ್ತದೆ. ಆದರೆ ಇಲ್ಲಿನ ವೀರಗಲ್ಲನ್ನು ವಿಶೇಷವಾಗಿ ಪಶ್ಚಿಮಾಭಿಮುಖವಾಗಿ ಅಂದರೆ ಪೂರ್ವಾಭಿಮುಖವಾಗಿರುವ ಮಠಕ್ಕೆ ಎದುರಾಗಿ ನಿಲ್ಲಿಸಲಾಗಿದೆ. ಸಾಮಾನ್ಯವಾಗಿ ಇಲ್ಲಿನ ವೀರಗಲ್ಲು ಮೂರು ಹಂತಗಳಿಂದ ಕೂಡಿದೆ. ಆರಂಭಿಕ ಹಂತವಾದ ವೀರಗಲ್ಲಿನ ಕೆಳಭಾಗದಲ್ಲಿ ರಾಜಪೋಷಾಕುವಿನಲ್ಲಿರುವ ವೀರನೊಬ್ಬನು ತನ್ನ ಬಲಗೈಯಲ್ಲಿ ಕತ್ತಿಯೊಂದನ್ನು ಹಿಡಿದು ಕೈಯನ್ನು ತನ್ನ ಎದೆಯ ಭಾಗದವರೆಗೆ ಎತ್ತಿ, ಕೈಯಲ್ಲಿಡಿದ ಕತ್ತಿಯನ್ನು ತನ್ನ ಬಲಭುಜದವರೆಗೆ ಎತ್ತಿ ಹಿಡಿದಿದ್ದಾನೆ. ಎಡಗೈಯಲ್ಲಿ ಕೊಡಲಿಯನ್ನು ಹಿಡಿದು ಕೈಯನ್ನು ಕೆಳಗಿಳಿಸಿ ನಿಂತಿದ್ದಾನೆ. ಇಲ್ಲಿನ ಸ್ಥಳೀಯರು ಇತನನ್ನು ವೀರಭದ್ರನೆಂದು, ಭರಮಪ್ಪನೆಂದು ಕರೆಯುವರು. ಅಂದರೆ ಸ್ಥಳೀಯರಲ್ಲಿ ವೀರಗಲ್ಲಿನಲ್ಲಿರುವ ವೀರಭದ್ರನು ಈ ಮಠವನ್ನು ಕಾವಲು ಕಾಯುವನೆಂಬ ನಂಬಿಕೆಯಿದೆ. ಹಾಗೆಯೇ ಇತನು ಧರಿಸಿರುವ ವಸ್ತ್ರ, ಆಭರಣಗಳನ್ನು ಗಮನಿಸಿದರೆ ಇತನ್ಯಾರೋ ರಾಜವರ್ಗಕ್ಕೆ ಸೇರಿದವನಿರಬೇಕೆನಿಸುತ್ತದೆ. ಎರಡನೆಯ ಹಂತವಾದ ಮಧ್ಯದ ಹಂತದಲ್ಲಿನ ಮಧ್ಯಭಾಗದಲ್ಲಿ ಶಿವಲಿಂಗವಿದ್ದು, ಅದರ ಎಡ ಮತ್ತು ಬಲಭಾಗದಲ್ಲಿ ನಂದಿಗಳ ಕೆತ್ತನೆಯಿರುವುದು ಕಂಡುಬರುತ್ತದೆ. ಕೊನೆಯ ಹಂತವಾದ ಮೇಲಿನ ಅಂಕಣದಲ್ಲಿ ಸೂರ್ಯ, ಚಂದ್ರ ಹಾಗೂ ಕೀರ್ತಿಮುಖದ ಅಲಂಕರಣೆಯ ಕೆತ್ತನೆ ಇದೆ. ಈ ಶಿಲ್ಪದಲ್ಲಿ ಯಾವುದೇ ರೀತಿಯ ಶಾಸನವಿಲ್ಲದರಿಂದ ಇದರಲ್ಲಿರುವ ವೀರನನ್ನು ಗುರುತಿಸಲಾಗದು. ಆದರೂ ಈ ಶಾಸನ ಶಿಲ್ಪವನ್ನು ಗಮನಿಸಿದ ಮರಿಕುಂಟೆ ತಿಪ್ಪೇಸ್ವಾಮಿಯವರು ಈ ಸ್ಮಾರಕಶಿಲ್ಪದಲ್ಲಿರುವ ವೀರನು ಉಟ್ಟಂತಹ ಉಡುಗೆಯಿಂದ ಇತನು ರಾಜಪರಿವಾರದವನೋ ಅಥವಾ ಈ ಮಠವನ್ನು ಕಟ್ಟಿಸಿದವನೋ ಅಥವಾ ಈ ಭಾಗವನ್ನಾಳಿದ ಪಾಳೆಯಗಾರನೋ ಇರಬಹುದೆಂದು ಅಭಿಪ್ರಾಯಪಟ್ಟಿದ್ದಾರೆ.[೬]

*** ರಾಯದುರ್ಗದ ರಸ್ತೆಯಲ್ಲಿರುವ ವೀರಗಲ್ಲು**

ಪಟ್ಟಣದಿಂದ ಪೂರ್ವಕ್ಕೆ ಸಾಗುವ ರಾಯದುರ್ಗ ಮತ್ತು ಮೊಳಕಾಲ್ಮೂರು ಮುಖ್ಯರಸ್ತೆಯ ಬಲಬದಿಗಿರುವ ಹುಣಸೇಮರದ ಕೆಳಗೆ ವೀರಗಲ್ಲೊಂದಿದೆ. ಇಲ್ಲಿನ ಐಯ್ಯಣ್ಣನ ಕುಂಟೆಗೆ ಸಮೀಪದಲ್ಲಿರುವ ಈ ಶಾಸನಶಿಲ್ಪವನ್ನು ಪೂರ್ವಾಭಿಮುಖವಾಗಿ ನಿಲ್ಲಿಸಲಾಗಿದೆ. ಪಟ್ಟಣದಿಂದ ಸು. ಒಂದೆರಡು ಕಿ.ಮೀ. ದೂರದಲ್ಲಿರುವ ಈ ಶಾಸನಶಿಲ್ಪವೂ ಸಹ ಬಿಳಿಕಣ ಶಿಲೆಯಿಂದ ಕೂಡಿದಂತಹ ಒಂದು ಸಣ್ಣದಾದ ಶಿಲ್ಪವಾಗಿದೆ. ಈ ಶಿಲ್ಪವನ್ನು ಗಮನಿಸಿದ ಪಟ್ಟಣದ ಪ್ರಮುಖ ಸ್ವಾತಂತ್ರ್ಯ ಹೋರಾಟಗಾರರಾದ ಅನ್ನದಾನಿ ವೀರಭದ್ರಪ್ಪನವರು ಇಲ್ಲಿಂದ 'ನೇರ್ಲೂಟು'ವಿನ ಮೂಲಕ ಹಿರ‍್ಯಾನಗುಡ್ಡಕ್ಕೆ (ನುಂಕಪ್ಪನಗುಡ್ಡಕ್ಕೆ) ಹೋಗಲು ದಾರಿಯನ್ನು ಸೂಚಿಸುತ್ತದೆಂದು ಭಾವಿಸಿ ಇದನ್ನು "ಮಾರ್ಗಸೂಚಿಸುವಕಲ್ಲು" ಎಂದು ಕರೆದರು.[೯೨] ಈ ಶಿಲ್ಪದಲ್ಲಿ ವೀರನು ತನ್ನ ಕೈಯಲ್ಲಿ ಬಿಲ್ಲನ್ನು ಹಿಡಿದು ಬಾಣವನ್ನು ಹೂಡುವ ಸಿದ್ಧತೆಯಲ್ಲಿದ್ದು, ತನ್ನ ಸೊಂಟಕ್ಕೆ ಸುತ್ತಿಕೊಂಡಿರುವ ಧೋತಿಯಲ್ಲಿ ನಡುಗತ್ತಿಯನ್ನು ಸಿಕ್ಕಿಸಿಕೊಂಡು, ಉತ್ತರ ದಿಕ್ಕಿನೆಡೆಗೆ ಬಿಲ್ಲನ್ನು ಹೂಡಿ ನಿಂತಿದ್ದಾನೆ. ಈ ಸನ್ನಿವೇಶವನ್ನು ಗಮನಿಸಿದರೆ ಬೇಟೆಯನ್ನು ಸೂಚಿಸುತ್ತದೆ. ಈ ವೀರನ ಬಲಭಾಗದಲ್ಲಿ ಸ್ತ್ರೀಯೊರ್ವಳು ತನ್ನೆರಡು ಕೈಗಳನ್ನೇ ಜೋಡಿಸಿ ಸಮಭಂಗಿಯಲ್ಲಿ ನಿಂತಿದ್ದಾಳೆ. ಈಕೆಯನ್ನು ಇಲ್ಲಿನ ವೀರನ ಮಡದಿ ಎಂದು ಗುರುತಿಸಬಹುದಾಗಿದೆ. ಈ ಹಿನ್ನೆಲೆಯಲ್ಲಿ ಶಾಸನಶಿಲ್ಪದಲ್ಲಿರುವ ಇವರಿಬ್ಬರನ್ನು ಬೇಟೆಯ ದಂಪತಿಗಳೆಂತಲೂ ಸ್ಥಳೀಯರು ಕರೆಯುವರು. ಇದನ್ನು ಗಮನಿಸಿದರೆ ವಿರೂಪಾಕ್ಷಿ ಪೂಜಾರಹಳ್ಳಿಯವರು ಈ ಶಾಸನ ಶಿಲ್ಪವನ್ನು ಬೇಡ-ಬೇಡತಿಯರ ವೀರಗಲ್ಲೆಂದು ಗುರುತಿಸಿದರು. ಒಟ್ಟಾರೆಯಾಗಿ ವೀರಮರಣವನ್ನಪ್ಪಿದ ವೀರ ಮತ್ತು ಮಾಸ್ತಿಯಾದ ಸ್ತ್ರೀ ಇವರಿಬ್ಬರ ರಚನೆಗಳನ್ನು ಈ ಶಾಸನ ಶಿಲ್ಪದಲ್ಲಿ ಬಿಡಿಸಿರುವುದರಿಂದ, ಕೆತ್ತಿರುವುದರಿಂದ ಈ ಶಾಸನ ಶಿಲ್ಪವನ್ನು 'ವೀರಮಾಸ್ತಿಕಲ್ಲು' ಎಂದು ಕರೆಯಲಾಗಿದೆ.

ಹೀಗೆ ಈ ಪಟ್ಟಣ ಪ್ರದೇಶದಲ್ಲಿ ದೊರೆತ ವೀರಗಲ್ಲು, ಮಾಸ್ತಿಕಲ್ಲು ಹಾಗೂ ವೀರಮಾಸ್ತಿಕಲ್ಲುಗಳೆಲ್ಲವೂ ಶಾಸನ ರಹಿತವಾದಂತಹ ಸ್ಮಾರಕಶಿಲ್ಪಗಳಾಗಿವೆ. ಹಾಗಾಗಿ ಇವುಗಳ ನಿರ್ಮಾಣ, ನಿರ್ಮಾಣದ ಉದ್ದೇಶ ಹಾಗೂ ಸನ್ನಿವೇಶವನ್ನು ಖಚಿತವಾಗಿ ತಿಳಿಯಲಾಗದು. ಆದರೂ ಈ ಶಿಲ್ಪಗಳ ಕೆತ್ತನೆಗೆ ಬಳಸಿದ ಶಿಲೆಯನ್ನು ಗಮನಿಸಿದರೆ ಇವೆಲ್ಲವುಗಳು ವಿಜಯನಗರೋತ್ತರ ಕಾಲದಲ್ಲಿ ನಿರ್ಮಾಣಗೊಂಡಂತಹ ಶಿಲ್ಪಗಳಾಗಿವೆ. ಈ ಶಾಸನಶಿಲ್ಪಗಳಲ್ಲಿನ ವೀರರ ಸಾಹಸ, ಪರಾಕ್ರಮ, ಸ್ವಾಮಿನಿಷ್ಠೆ ಹಾಗೂ ಮಾಸ್ತಿಯಾದವರ ಯಾವುದೋ ನಂಬಿಕೆ, ಆದರ್ಶ ಹಾಗೂ ತ್ಯಾಗದ ಪ್ರತೀಕವಾಗಿರುವ ಇವುಗಳು ಒಂದು ಪ್ರದೇಶದ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಪರಂಪರೆಯ ಜನಜೀವನವನ್ನು ಪ್ರತಿನಿಧಿಸುವುದರ ಮೂಲಕ ಆ ಪ್ರದೇಶದ ವೀರ ಪರಂಪರೆಯನ್ನು ಲೋಕಕ್ಕೆ ಸಾರುತ್ತವೆ. ಅಜ್ಞಾತವಾಗಿ ಚರಿತ್ರೆಯ ಪುಟಗಳಿಂದ ಮರೆಯಾಗಿ, ನಿಧಿಹಾವಳಿಗಾರರ ಕೃತ್ಯಗಳಿಗೆ ಬಲಿಯಾಗಿ ನಶಿಸಿ ಹೋಗುತ್ತಿರುವ ವೀರಗಲ್ಲು-ಮಾಸ್ತಿಕಲ್ಲುಗಳ ಹಿಂದೆ ಇರುವ ಚರಿತ್ರೆಯ

ಸಾರವನ್ನು ಜನಸಾಮಾನ್ಯರಿಗೆ ತಿಳಿಸುವುದರ ಮೂಲಕ ಮುಂದಿನ ಪೀಳಿಗೆಯವರಿಗೆ ಇವುಗಳನ್ನು ಸಂರಕ್ಷಿಸುವ ಕೆಲಸ ಆಗಬೇಕಾಗಿದೆ. ಹಾಗಾಗೀ ಈ ಕುರಿತಾಗಿ ಜನಸಾಮಾನ್ಯರೂ ಹಾಗೂ ಸರ್ಕಾರಗಳು ಮತ್ತು ಸರ್ಕಾರದ ಪ್ರತಿನಿಧಿಗಳು ಎಚ್ಚೆತ್ತುಕೊಳ್ಳಬೇಕಿದೆ. ಕೇವಲ ರಾಜನು ನೀಡಿದ ಅನ್ನವನ್ನುಂಡ ಮಾತ್ರಕ್ಕೆ ರಾಜನಿಗಿಂತ ಮೊದಲೇ ಯುದ್ಧ ಭೂಮಿಗೆ ನುಗ್ಗಿ ಆತನಿಗಿಂತ ಮೊದಲೇ ವೀರಾವೇಶದಿಂದ ಹೋರಾಡಿ ಸಾವನ್ನಪ್ಪುತ್ತಿದ್ದರು. ವ್ಯಕ್ತಿಗಳು ತಮ್ಮ ಬಳಿಯಿರುವ ಐಶ್ವರ್ಯವನ್ನು ಯಾವುದೋ ಒಂದು ಉದ್ದೇಶಕ್ಕಾಗಿ ತ್ಯಾಗ ಮಾಡುವುದನ್ನು ಶಾಸನಗಳು ತಿಳಿಸುತ್ತವೆ. ಆದರೆ ತಮ್ಮ ಐಶ್ವರ್ಯಕ್ಕಿಂತ ದೇಹ ಮತ್ತು ಪ್ರಾಣಗಳನ್ನು ಸ್ವ-ಸಂತೋಷದಿಂದ ತ್ಯಾಗ ಮಾಡಿದ ವಿಷಯವನ್ನು ಸಾರುವ ಶಾಸನಶಿಲ್ಪಗಳು, ಶಾಸನಗಳಿಗಿಂತಲೂ ಹೆಚ್ಚಿನದಾದ ಪ್ರಾಶಸ್ತ್ಯವನ್ನು ಪಡೆದುಕೊಂಡಿವೆ ಎನ್ನಲಾಗಿದೆ.

**ಅಡಿಟಿಪ್ಪಣಿಗಳು**

೧. ಅಂಬಳಿಕೆ ಹಿರಿಯಣ್ಣ(ಸಂ), **ಕನ್ನಡ ವಿಷಯ ವಿಶ್ವಕೋಶ,** ಪು.೯೧೧

೨. ಮಹದೇವ ಸಿ., ವಾಸುದೇವನ್ ಸಿ.ಎಸ್., ರಮೇಶನಾಯಕ(ಸಂ), **ಕರ್ನಾಟಕ ದೇವಾಲಯ ಕೋಶ: ಹಾವೇರಿ ಜಿಲ್ಲೆ,** ಪು.x

೩. ಬ್ರೂನೋಡಗೆನ್ಸ್, **ಮಯಮತ,** ಪು.೩೫

೪. ಗೋಪಾಲ ಬಾ.ರಾ., **ವಾಸ್ತು,** ಪು.೧

೬. ತಿಪ್ಪೇರುದ್ರಸ್ವಾಮಿ ಎಚ್., **ಕರ್ನಾಟಕ ಸಂಸ್ಕೃತಿ ಸಮೀಕ್ಷೆ,** ಪು.೫೨೩

೭ ಗೋಪಾಲ ಬಾ.ರಾ., **ಪೂರ್ವೋಕ್ತ,** ಪು.೧

೮. ಪ್ರಭಾಕರ ಎಂ.ಎನ್., **ದೇವಾಲಯ ವಾಸ್ತುಚಂದ್ರಿಕೆ,** ಪು.೧೩

೯. ತಿಪ್ಪೇರುದ್ರಸ್ವಾಮಿ ಎಚ್., **ಪೂರ್ವೋಕ್ತ,** ಪು.೫೨೩

೧೦. ಅದೇ, ಪು.೫೨೫

೧೧. ಅದೇ, ಪು.೫೨೪

೧೨. ಅಪರ್ಣ ಕೂ.ಸ., **ದೇವಾಲಯ ವಾಸ್ತುಶಿಲ್ಪ ಪರಿಚಯ,** ಪು.೧೧

೧೩. ವಸು ಎಂ.ವಿ., **ಕರ್ನಾಟಕ ಚರಿತ್ರೆ ಆಯ್ದ ವಿಷಯಗಳು,** ಪು.೯೩

೧೪. ತಿಪ್ಪೇರುದ್ರಸ್ವಾಮಿ ಎಚ್., **ಪೂರ್ವೋಕ್ತ,** ಪು.೫೨೬

೧೫. ಅಪರ್ಣ ಕೂ.ಸ., **ಪೂರ್ವೋಕ್ತ,** ಪು.೩

೧೬ ಅಂಬಳಿಕೆ ಹಿರಿಯಣ್ಣ(ಸಂ), **ಪೂರ್ವೋಕ್ತ**, ಪು.೯೪೧-೪೨

೧೭ ಸುರೇಶ ಬಿ., **ಚಿತ್ರದುರ್ಗ-ದಾವಣಗೆರೆ ಜಿಲ್ಲೆಗಳ ದೇವಾಲಯಗಳು**, ಪು.೨೩೫

೧೮. ಅದೇ, ಪು.೨೫೬

೧೯. ತಿಪ್ಪೇರುದ್ರಸ್ವಾಮಿ ಎಚ್., **ಪೂರ್ವೋಕ್ತ**, ಪು.೫೩೩

೨೦. ಪ್ರಭಾಕರ ಎಂ.ಎನ್., ೨೦೧೧, **ದೇವಾಲಯವಾಸ್ತು**, ಪು.೧೮

೨೧. ತಿಪ್ಪೇರುದ್ರಸ್ವಾಮಿ ಎಚ್., **ಪೂರ್ವೋಕ್ತ**, ಪು.೫೩೪

೨೨. ಮನೋಜ್ ಜಿ., **ದೇವಾಲಯ ವಾಸ್ತುವಿಜ್ಞಾನ**, ಪು.೧

೨೩. ಪ್ರಭಾಕರ ಎಂ.ಎನ್., **ಪೂರ್ವೋಕ್ತ**, ಪು.೧೮

೨೪. ಅದೇ, ಪು.೧೮

೨೫. ಅದೇ, ಪು.೧೯

೨೬ ತಿಪ್ಪೇರುದ್ರಸ್ವಾಮಿ ಎಚ್., **ಪೂರ್ವೋಕ್ತ**, ಪು.೫೩೫

೨೭ ಸುರೇಶ ಬಿ., **ಪೂರ್ವೋಕ್ತ**, ಪು.೨೧೩-೨೧೪

೨೮. ಪದ್ಮ ಸಿಂಚನ, **ಸ್ಮರಣ ಸಂಚಿಕೆ**, ಪು.೧೯-೨೨

೨೯. ಅದೇ, ಪು.೩೯-೪೦

೩೦. ಸುರೇಶ ಬಿ., **ಪೂರ್ವೋಕ್ತ**, ಪು.೨೧೯-೨೨೦

೩೧. ರಾಮಶೇಷನ್ ನೀ.ಕೃ., **ಕರ್ನಾಟಕ ಕೋಟೆ-ಕೊತ್ತಲಗಳು**, ಪು.೪

೩೨. ಜಯಣ್ಣ ಯು., **ಮೊಳಕಾಲ್ಮೂರು ತಾಲೂಕಿನ ಪುರಾತತ್ವೀಯ ಪರಿಸರ**(ಅಪ್ರಕಟಿತ ಪಿಎಚ್.ಡಿ.ಮಹಾಪ್ರಬಂಧ), ಪು.೨೨೬

೩೩. ಕೊಟ್ರೇಶ್ ಎಂ., ಬಳ್ಳಾರಿ ಜಿಲ್ಲೆಯ ಕೋಟೆಗಳು, ಪು.೧೩

೩೪. ರಾಮಶೇಷನ್ ನೀ.ಕೃ., **ಪೂರ್ವೋಕ್ತ**, ಪು.೧೦

೩೫. ಕೊಟ್ರೇಶ್ ಎಂ., **ಪೂರ್ವೋಕ್ತ**, ಪು.೧೭

೩೬ ರಾಮಶೇಷನ್ ನೀ.ಕೃ., **ಪೂರ್ವೋಕ್ತ**, ಪು.೧೧-೧೨

೩೭ ಜಯಣ್ಣ ಯು., **ಪೂರ್ವೋಕ್ತ**, ಪು.೧೨೮

೩೮. ಅದೇ, ಪು.೧೨೮

೩೯. ಕೊಟ್ರೇಶ್ ಎಂ., **ಪೂರ್ವೋಕ್ತ**, ಪು.೧೩-೧೪

೪೦. ರಾಮಶೇಷನ್ ನೀ.ಕೃ., **ಪೂರ್ವೋಕ್ತ**, ಪು.೯

೪೧. ಜಯಣ್ಣ ಯು., **ಪೂರ್ವೋಕ್ತ**, ಪು.೨೬

೪೨. ತಿಪ್ಪೇಸ್ವಾಮಿ ಎಸ್., **ರಕ್ಷಣಾ ವಾಸ್ತುಶಿಲ್ಪ: ಚಿತ್ರದುರ್ಗ**(ಅಪ್ರಕಟಿತ ಪಿಎಚ್.ಡಿ.ಮಹಾಪ್ರಬಂಧ), ಪು.೯೯

೪೩. **ಕನ್ನಡ ವಿಷಯ ವಿಶ್ವಕೋಶ**, ಪು.೨೮೧

೪೪. ತಿಪ್ಪೇಸ್ವಾಮಿ ಎಸ್., **ಪೂರ್ವೋಕ್ತ**, ಪು.೧೪೧-೧೪೪

೪೫. ಜೋಶಿ ಎಸ್.ಕೆ., **ಕರ್ನಾಟಕದ ಕೋಟೆ-ಕೊತ್ತಲಗಳು**, ಭಾಗ ೧, ಪು.೧

೪೬ ಚಿದಾನಂದಮೂರ್ತಿ ಎಂ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ಪು.೨೪೫

೪೭ ಸೋಮಶೇಖರ್ ಎಸ್.ವೈ.(ಸಂ), **ಬ್ರಹ್ಮಗಿರಿ**, ಪು.೧೧೮

೪೮. ಕೊಟ್ರೇಶ್ ಎಂ., **ಪೂರ್ವೋಕ್ತ**, ಪು.೧೫-೧೬

೪೯. ರಾಮಶೇಷನ್ ನೀ.ಕೃ., **ಪೂರ್ವೋಕ್ತ**, ಪು.೨೮

೫೦. ಸೋಮಶೇಖರ್ ಎಸ್.ವೈ.(ಸಂ), **ಪೂರ್ವೋಕ್ತ**, ಪು.೧೧೮

೫೧. ಅದೇ, ಪು.೧೨೪

೫೨. ಜೋಶಿ ಎಸ್.ಕೆ., **ಪೂರ್ವೋಕ್ತ**, ಪು.೧೪೦

೫೩. ಕೊಟ್ರೇಶ್ ಎಂ., **ಪೂರ್ವೋಕ್ತ**, ಪು.೨೮

೫೪. ಗಿರಿಜಾ ಟಿ., **ಚಿತ್ರದುರ್ಗ ಜಿಲ್ಲಾದರ್ಶನ**, ಪು.೨೪೪

೫೫. ಸೋಮಶೇಖರ್ ಎಸ್.ವೈ.(ಸಂ), **ಪೂರ್ವೋಕ್ತ**, ಪು.I

೫೬ ಜಯಣ್ಣ ಯು., **ಪೂರ್ವೋಕ್ತ**, ಪು.೨೩೧

೫೭ ಸೋಮಶೇಖರ್ ಎಸ್.ವೈ.(ಸಂ), **ಪೂರ್ವೋಕ್ತ**, ಪು.೩೩

೫೮. ಅದೇ, ಪು.೧೨೫

೫೯. ಜೋಶಿ ಎಸ್.ಕೆ., **ಪೂರ್ವೋಕ್ತ**, ಪು.೨೯

೬೦. ಸೋಮಶೇಖರ್ ಎಸ್.ವೈ.(ಸಂ), **ಪೂರ್ವೋಕ್ತ**, ಪು.೧೨೫

೬೧. ತಿಪ್ಪೇಸ್ವಾಮಿ ಎಸ್., **ಪೂರ್ವೋಕ್ತ**, ಪು.೨೦೧

೬೨. ಅದೇ, ಪು.೨೦೨

೬೩. ಅದೇ, ಪು.೨೦೩

೬೪. ಸೋಮಶೇಖರ್ ಎಸ್.ವೈ.(ಸಂ), **ಪೂರ್ವೋಕ್ತ**, ಪು.೧೨೬

೬೫. ತಿಪ್ಪೇಸ್ವಾಮಿ ಎಸ್., **ಪೂರ್ವೋಕ್ತ**, ಪು.೨೦೩-೨೦೪

೬೬. ಅದೇ, ಪು.೨೦೫

೬೭. ಅದೇ, ಪು.೨೦೮-೨೦೯

೬೮. ಪದ್ಮಸಿಂಚನ, **ಸ್ಮರಣ ಸಂಚಿಕೆ**, ಪು.೩೧

೬೯. ಜ್ಞಾನಾನಂದ, **ಶಿಲ್ಪದರ್ಶಿ**, ಪು.೧

೭೦. ಅಂಬಳಿಕೆ ಹಿರಿಯಣ್ಣ(ಸಂ), **ಪೂರ್ವೋಕ್ತ**, ಪು.೮೦೧

೭೧. ತಿಪ್ಪೇರುದ್ರಸ್ವಾಮಿ ಎಚ್., **ಪೂರ್ವೋಕ್ತ**, ಪು.೬೨೭

೭೨. ಸುರೇಶ ಬಿ., **ಪೂರ್ವೋಕ್ತ**, ಪು.೨೩೭

೭೩. ಸುಂದರ ಅ.(ಸಂ), **ಚರಿತ್ರೆ ಸಂಪುಟಗಳು**, ಪು.೧೪೧-೨೧೪

೭೪. ಸುರೇಶ ಬಿ., **ಪೂರ್ವೋಕ್ತ**, ಪು.೨೩೬-೨೩೭

೭೫. ಅದೇ, ಪು.೨೩೭

೭೬. ಅದೇ, ಪು.೨೧೪

೭೭. ಅದೇ, ಪು.೨೧೪

೭೮. ಅದೇ, ಪು.೨೨೪-೨೨೫

೭೯. ಕೃಷ್ಣಕುಮಾರ್ ಸಿ.ಪಿ., **ಶಾಸನಶಾಸ್ತ್ರ ಪ್ರವೇಶ**, ಪು.೨೧

೮೦. ಅದೇ, ಪು.೨೫

೮೧. ನರಸಿಂಹಮೂರ್ತಿ ಎ.ವಿ., **ಕರ್ನಾಟಕ ಶಾಸನ ಸಂಪತ್ತು**, ಪು.೧

೮೨. ಕೃಷ್ಣಕುಮಾರ್ ಸಿ.ಪಿ., **ಪೂರ್ವೋಕ್ತ**, ಪು.೨೫

೮೩. ಶಿವರುದ್ರಸ್ವಾಮಿ ಎಸ್.ಎನ್., ಭಾರತದ ಇತಿಹಾಸ, ಪು.೨೩

೮೪. ಅದೇ, ಪು.೨೪

೮೫. ಅಂಬಳಿಕೆ ಹಿರಿಯಣ್ಣ(ಸಂ), **ಪೂರ್ವೋಕ್ತ**, ಪು.೨೦

೮೬. ವೆಂಕಟಸುಬ್ಬಯ್ಯ ಜಿ., **ಕನ್ನಡ ಶಾಸನ ಪರಿಚಯ**, ಪು.viii

೮೭. **ಎಪಿಗ್ರಫಿ ಕರ್ನಾಟಿಕ**, ಸಂ.೧೧, ಶಾಸನ ಸಂಖ್ಯೆ ೩೭

೮೮. ಅದೇ, ಶಾ.ಸಂ.೩೮

೮೯. ಅದೇ, ಶಾಸಂ.೩೯

೯೦. ಲಕ್ಷ್ಮಣ್ ತೆಲಗಾವಿ(ಸಂ), **ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು**, ಪು.೪೬೬

೯೧. ಮೈಲಾರಪ್ಪ ಬಿ., **ಮೊಳಕಾಲ್ಮೂರು ತಾಲೂಕಿನ ಸ್ಥಳನಾಮಗಳು(ಅಪ್ರಕಟಿತ ಎಂ.ಫಿಲ್.ಪ್ರೌಢ ಪ್ರಬಂಧ)**, ಪು.

೯೨. **ಮೈಸೂರು ಆರ್ಕಿಯಾಲಾಜಿಕಲ್ ರಿಪೋರ್ಟ್**, ಶಾ.ಸಂ.೨೩

೯೩. ಅದೇ, ಶಾ.ಸಂ.೨೪

೯೪. ಕೃಷ್ಣಕುಮಾರ್ ಸಿ.ಪಿ., **ಪೂರ್ವೋಕ್ತ**, ಪು.೨೮

೯೫. ಮರುಕುಂಟೆ ತಿಪ್ಪೇಸ್ವಾಮಿ, **ಮೊಳಕಾಲ್ಮೂರು ದರ್ಶನ**, ಪು.೧೧೮

೯೬. ಅದೇ, ಪು.೧೧೩

೯೭. ಅದೇ, ಪು.೧೨೩

೯೮. ಸೋಮಶೇಖರ್ ಎಸ್.ವೈ.(ಸಂ), **ಪೂರ್ವೋಕ್ತ**, ಪು.೨೭

# ಅಧ್ಯಾಯ ನಾಲ್ಕು

# ಮೌಖಿಕ ಮತ್ತು ಸಾಂಸ್ಕೃತಿಕ ಪರಂಪರೆ

ಒಂದು ಪ್ರದೇಶದ ಚರಿತ್ರೆಯ ರಚನೆಯಲ್ಲಿ ಲಿಖಿತ ಆಧಾರಗಳಷ್ಟೆ ಪ್ರಮುಖವಾದ ಪಾತ್ರವನ್ನು ಆ ಪ್ರದೇಶದ ಮೌಖಿಕ ಸಂಪ್ರದಾಯದಲ್ಲಿ ಉಳಿದು ಬಂದಿರುವಂತಹ ಪುರಾಣ, ಐತಿಹ್ಯಗಳು, ದಂತಕಥೆಗಳು, ಕಥನಕಾವ್ಯಗಳು, ಜನಪದ ಹಾಡುಗಳು, ಹಬ್ಬ ಹರಿದಿನಗಳು, ಜಾತ್ರೆ ಉತ್ಸವಗಳು, ನಂಬಿಕೆ, ಆಚರಣೆಗಳು ಎಂಬ ಮುಂತಾದವುಗಳ ಪಾತ್ರ ಅತಿಮುಖ್ಯವಾಗಿರುತ್ತದೆ. ಜನಪದೀಯವಾಗಿ ಮೌಖಿಕ ಸಾಂಪ್ರಾದಾಯಿಕ ರೂಪದಲ್ಲಿ ಉಳಿದು ಬಂದಿರುವ ಇವುಗಳಿಂದ ಚರಿತ್ರೆಯನ್ನು ಹಾಗೂ ಅಲ್ಲಿನ ಸಾಂಸ್ಕೃತಿಕ ಚಹರೆಯನ್ನು ನಿಖರವಾಗಿ ರೂಪಿಸಲಾಗದಿದ್ದರೂ ಈ ಮೌಖಿಕ ಕಥನಗಳು ತಕ್ಕ ಮಟ್ಟಿಗಾದರೂ ನಿರೂಪಿಸುತ್ತದೆ. ಕೆಲವೊಮ್ಮೆ ಮೌಖಿಕ ಪರಂಪರೆಯು ಚರಿತ್ರೆಗೆ ಸತ್ಯವಾದಂತಹ ಅಂಶಗಳನ್ನೂ ನಿರೂಪಿಸುತ್ತವೆ. ಈ ನಿಟ್ಟಿನಲ್ಲಿ ಮೊಳಕಾಲ್ಮೂರು ಪಟ್ಟಣದ ಚರಿತ್ರೆ ಮತ್ತು ಸಂಸ್ಕೃತಿಯ ಮೇಲೆ ಬೆಳಕು ಚೆಲ್ಲುವಂತಹ ಮೌಖಿಕ ಪರಂಪರೆಯ ಐತಿಹ್ಯಗಳು, ನಂಬಿಕೆ-ಆಚರಣೆಗಳು ಹಾಗೂ ಜಾತ್ರೆ ಹಬ್ಬಹರಿದಿನಗಳೆಂಬ ಅಂಶಗಳನ್ನು ಈ ಅಧ್ಯಾಯದಲ್ಲಿ ತಕ್ಕ ಮಟ್ಟಿಗೆ ವಿವರಿಸುವ ಪ್ರಯತ್ನ ಮಾಡಿದೆ.

## ೪.೧. ಐತಿಹ್ಯಗಳು(Legends)

ಐತಿಹ್ಯವೆಂದರೆ ಮೌಖಿಕ ಸಂಪ್ರದಾಯದಲ್ಲಿ ಉಳಿದುಕೊಂಡು ಬಂದಿರುವ ಜಾನಪದ ಪುರಾಣವಾಗಿದೆ. ಅಂದರೆ ಹಿಂದೆ ನಡೆದಿರಬಹುದಾದ ಘಟನೆಯೊಂದಕ್ಕೆ ಕಲಾತ್ಮಕತೆಯ ಬಣ್ಣವನ್ನು ಕೊಟ್ಟು ಹೆಣೆದಿರಬಹುದಾದ ಜನಪದ ಸಾಹಿತ್ಯದ ಒಂದು ಪ್ರಕಾರವಾಗಿದೆ. ಈ ಐತಿಹ್ಯಗಳ ಹುಟ್ಟಿಗೆ ಯಾವುದೇ ರೀತಿಯ ಆಧಾರಗಳಿಲ್ಲ. ಇವುಗಳನ್ನು ನಮ್ಮ ಜನಪದರು ಕಟ್ಟಿ ಜನರ ಬಾಯಿಂದ ಬಾಯಿಗೆ ಸಾಂಪ್ರಾದಾಯಿಕವಾಗಿ, ರೂಡಿಗತವಾಗಿ ಹರಿದುಬಿಟ್ಟಿದ್ದಾರೆ. ಒಂದು ದೃಷ್ಟಿಯಿಂದ ಈ ಐತಿಹ್ಯಗಳನ್ನು ಗಮನಿಸಿದರೆ ಕಥೆ, ಪುರಾಣ, ಗಾದೆ, ನುಡಿಗಟ್ಟುಗಳಂತೆ ಜನಪದದ ಒಳಪ್ರಬೇಧಗಳಾದ

ಇವು ಆಧಾರಗಳಿಲ್ಲದೇ ಹುಟ್ಟಿರಲಾರವು ಎನಿಸುತ್ತದೆ. ಐತಿಹ್ಯ ಎಂಬ ಪದದ ಮೂಲಾರ್ಥ ಒಂದೇ ರೀತಿಯಾಗಿರದೇ ಕಾಲದಿಂದ ಕಾಲಕ್ಕೆ ಬದಲಾಗುತ್ತಾ ಸಾಗಿ ಇಂದು ಚರಿತ್ರೆಯ ಸ್ವರೂಪಕ್ಕೆ ತಿರುಗಿರುವುದನ್ನು ಕಾಣುತ್ತೇವೆ. ಆದ್ದರಿಂದಲೇ ಚರಿತ್ರೆಯ ಬರವಣಿಗೆಯಲ್ಲಿ ಐತಿಹ್ಯಗಳ ಪಾತ್ರವಿದೆ ಎಂಬುದನ್ನು ಪರಿಗಣಿಸಬೇಕಾಗುತ್ತದೆ.[೧] ಈ ನಿಟ್ಟಿನಲ್ಲಿ ಐತಿಹ್ಯಗಳ ವ್ಯಾಪ್ತಿಗೆ ವಸ್ತು, ವ್ಯಕ್ತಿ, ಘಟನೆ, ಸ್ಥಳ, ಬೆಟ್ಟಗುಡ್ಡ, ಕೆರೆ-ಕಟ್ಟೆ, ನದಿ, ಹಳ್ಳ-ಕೊಳ್ಳ, ಉಡುಗೆ-ತೊಡಿಗೆ, ಪ್ರಾಣಿ-ಪಕ್ಷಿಗಳು, ದೈವ-ದೆವ್ವ-ಭೂತಗಳು, ಅವಶೇಷ-ಪಳೆಯುಳಿಕೆಗಳು ಸೇರಿದಂತೆ ಮುಂತಾದ ಯಾವುದು ಬೇಕಾದರೂ ಒಳಗಾಗಬಹುದು.[೨] ಅಂದರೆ ಒಂದು ನಿರ್ದಿಷ್ಟ ಸ್ಥಳ, ಘಟನೆ, ವ್ಯಕ್ತಿ, ಸಮಾಜ, ಸಂಸ್ಕೃತಿಯ ಹಿನ್ನೆಲೆಯಲ್ಲಿ ಹುಟ್ಟಿಕೊಂಡಂತಹ ಕಥೆಗಳೇ ಐತಿಹ್ಯಗಳಾಗಿವೆ. ಇತಿಹಾಸದ ಸ್ಪರ್ಶದಿಂದ ಕೂಡಿರುವ ಈ ಐತಿಹ್ಯಗಳನ್ನು ನಮ್ಮ ಜನಪದರು ಕಟ್ಟಿ, ನಿರೂಪಿಸುತ್ತಾ ಬಂದಿರುವ ಕಥನಗಳೆನ್ನಬಹುದು.[೩] ಮೇಲೆ ಸೂಚಿಸಿದ ಹಲವಾರು ಪ್ರಾಕೃತಿಕ ಹಾಗೂ ಭೌತಿಕ ಆಧಾರಗಳ ಅನೇಕ ವಿಷಯಗಳನ್ನು ಆಧರಿಸಿ, ಆಯಾ ಪರಿಸರದ ಸಂಸ್ಕೃತಿಗನುಸಾರವಾಗಿ ಉಗಮಗೊಂಡಿರುವ ಐತಿಹ್ಯಗಳು, ಅವುಗಳನ್ನು ನಿರೂಪಿಸುವ ನಿರೂಪಕನ ದೃಷ್ಠಿಯನ್ನು ಒಳಗೊಂಡಿರುತ್ತವೆ. ಈ ಹಿನ್ನೆಲೆಯಲ್ಲಿ ಐತಿಹ್ಯಗಳನ್ನು ಪ್ರಮುಖವಾಗಿ ಮೂರು ವಿಧಗಳನ್ನಾಗಿ ವಿಂಗಡಿಸಲಾಗಿದೆ.

**೧. ವಿವರಣಾತ್ಮಕ ಐತಿಹ್ಯಗಳು**(Etiological Leagends)

ಯಾವುದಾದರೊಂದು ನಂಬಿಕೆ, ಪದ್ಧತಿ, ವಸ್ತು, ವೈಶಿಷ್ಟ್ಯ ಅಥವಾ ವಿಶೇಷ ಗುಣದ ಹುಟ್ಟಿಗೆ ಕಾರಣವನ್ನು ವಿವರಿಸುವಂತಹ ಐತಿಹ್ಯಗಳು ವಿವರಣಾತ್ಮಕ ಐತಿಹ್ಯಗಳು ಎನಿಸಿಕೊಂಡಿವೆ.[೪]

**೨. ಅತಿ ಮಾನುಷ ಜೀವಿಗಳ ಕುರಿತಾದ ಐತಿಹ್ಯಗಳು**

ದೆವ್ವ, ಭೂತ, ಪಿಶಾಚಿ, ಮೋಹಿನಿ ಎಂಬ ಮುಂತಾದ ಅತಿಮಾನುಷ ಜೀವಿಗಳು ಇಲ್ಲದಿದ್ದರೂ, ಇದ್ದೇ ಇರುವವು ಎಂಬ ನಂಬಿಕೆಯ ಮೇಲೆ ಹುಟ್ಟಿಕೊಂಡಿರುವಂತಹ ಕಾಲ್ಪನಿಕ ಐತಿಹ್ಯಗಳಾಗಿವೆ. ಇವುಗಳನ್ನು ಪೌರಾಣಿಕ ಐತಿಹ್ಯಗಳೆಂತಲೂ ಕರೆಯುವರು.

**೩. ಚಾರಿತ್ರಿಕ ಅಥವಾ ವ್ಯಕ್ತಿಗಳ ಘಟನೆಗಳನ್ನು ಕುರಿತ ಐತಿಹ್ಯಗಳು**(Historical Leagends)

ವ್ಯಕ್ತಿ ಜೀವನದ ಸಾಧನೆಗಳು, ಸ್ವಾರಸ್ಯಕರ ಸಂಗತಿಗಳು, ಪ್ರವಾಹ, ಭೂಕಂಪ, ಸಿಡಿಲು, ಅಪಘಾತ ಎಂಬ ಮುಂತಾದ ಭೌಗೋಳಿಕ ವೈಪರಿತ್ಯಗಳಿಗೆ ಸಂಬಂಧಿಸಿದ ಘಟನೆಗಳ ಕುರಿತಾಗಿಯೂ ಐತಿಹ್ಯಗಳಿವೆ.[೫] ಇಂತಹ ಐತಿಹ್ಯಗಳ ವಿಷಯದ ಬಗ್ಗೆ ಜನರಿಗೆ ನೇರ ಪರಿಚಯವಿರುವುದಿಲ್ಲ. ಏಕೆಂದರೆ ಈ ರೀತಿಯ ಐತಿಹ್ಯಗಳು ತೀರ ಪ್ರಾಚೀನವೂ ಆಗಿರುವುದಿಲ್ಲ ಹಾಗೂ ತೀರ ಸಮಕಾಲೀನವೂ ಆಗಿರುವುದಿಲ್ಲ. ಹಾಗಾಗಿಯೇ ಇಂತಹ ಐತಿಹ್ಯಗಳ ಗುಂಪಿಗೆ ರಾಜ, ರಾಜಕಾರಣಿ, ಸಾದು ಸಂತರು, ವಿದ್ವಾಂಸರು, ದಾರ್ಶನಿಕರು, ಕಲಾವಿದರು ಹಾಗೂ ವಿಜ್ಞಾನಿಗಳೆಂಬ ಮುಂತಾದ

ಪ್ರಸಿದ್ಧ ವ್ಯಕ್ತಿಗಳ ಸಾಧನೆ, ಹಿರಿಮೆ-ಗರಿಮೆಗಳ ಬಗ್ಗೆ ಹುಟ್ಟಿಕೊಂಡಿರುವಂತಹ ಕಥೆಗಳನ್ನು ಸೇರಿಸಬಹುದಾಗಿದೆ.[೬]

ಪ್ರಸ್ತುತ ಅಧ್ಯಯನ ಕ್ಷೇತ್ರವಾದ ಮೊಳಕಾಲ್ಮೂರುವಿನ ಸ್ಥಳನಾಮ, ಇಲ್ಲಿನ ಕೋಟೆ-ಕೊತ್ತಲ, ವೀರಗಲ್ಲು-ಮಾಸ್ತಿಕಲ್ಲು, ದೇವರು-ದೇವಾಲಯ, ಹಬ್ಬ-ಹರಿದಿನಗಳಷ್ಟೇ ಅಲ್ಲದೇ, ಇಲ್ಲಿನ ಜನರ ನಂಬಿಕೆ ಆಚರಣೆಗಳಿಗೆ ಸಂಬಂಧಿಸಿದಂತೆ ಹುಟ್ಟಿಕೊಂಡಿರುವ ಹಲವಾರು ಐತಿಹ್ಯಗಳನ್ನು ಈ ಕೆಳಗಿನಂತೆ ದಾಖಲಿಸಲಾಗಿದೆ.

## ಸ್ಥಳನಾಮದ ಕುರಿತಾಗಿರುವ ಐತಿಹ್ಯ

ಮೊಳಕಾಲ್ಮೂರು ಎಂಬ ಸ್ಥಳನಾಮಕ್ಕೆ ಸಂಬಂಧಿಸಿದಂತಿರುವ ಐತಿಹ್ಯಗಳನ್ನು ತಿಳಿಯುವುದಾದರೇ ಈ ಊರಿನ ಉತ್ತರಕ್ಕಿರುವ ಬೆಟ್ಟವನ್ನು ಹಿಂದೆ ರಾಜ ಮಹಾರಾಜರುಗಳ ಕಾಲದಲ್ಲಿ ಶತೃರಾಜ್ಯದ ರಾಜರಾಗಲೀ ಇಲ್ಲವೇ ಸೈನಿಕರುಗಳಾಗಲೀ ಆಕ್ರಮಿಸದಂತೆ ಈ ಬೆಟ್ಟದ ಮೇಲಿರುವ ಮೂರನೇ ಸಾಲಿನ ಕೋಟೆಯ ಕೆಳಭಾಗದಲ್ಲಿರುವ ವಿಶಾಲವಾದ ಹಾಗೂ ಇಳಿಜಾರಾದ ಬಂಡೆಗೆ ಎಣ್ಣೆಯನ್ನು ಸುರಿದು ಅದರ ಮೇಲೆ ರಾಗಿಯನ್ನು ಹಾಕುತ್ತಿದ್ದರಂತೆ. ಆಗ ಕೋಟೆಯನ್ನು ಮುತ್ತಿಗೆ ಹಾಕಲು ಬೆಟ್ಟವನ್ನು ಹತ್ತಿ ಬರುವಂತಹ ಶತೃಗಳು ಕಾಲು ಜಾರಿ ತಮ್ಮ ಮೊಣಕಾಲುಗಳು ಮುರಿಯುವಂತೆ ಬೀಳುತ್ತಿದ್ದರಂತೆ. ಹೀಗಾಗಿ ಈ ಊರಿಗೆ ಮೊಣಕಾಲುಮುರಿ ಎಂಬ ಹೆಸರು ಬಂದಿತೆಂಬ ಐತಿಹ್ಯವಿದೆ.[೭] ಈ ಮೊಣಕಾಲುಮುರಿ ಎಂಬ ಹೆಸರು ಕಾಲಾನಂತರದಲ್ಲಿ ಮಣಕಾಲುರುವು>ಮೊಣಕಾಲುಮುರುವು> ಮೊಣಕಾಲ್ಮುರಿ> ಮೊಳಕಾಲ್ಮೂರು ಎಂದು ರೂಪಾಂತರಗೊಂಡಿರಬಹುದೆನಿಸುತ್ತದೆ. ಮತ್ತೊಂದು ದಂತಕತೆಯೊಂದರ ಐತಿಹ್ಯದ ಪ್ರಕಾರವಾಗಿ ಹಿಂದೆ ಈ ಪ್ರಾಂತವನ್ನಾಳಿದ ರಾಜನೊಬ್ಬ ಒಂದು ದಿನ ತುಂಬುಗರ್ಭಿಣಿಯಾದ ತನ್ನ ರಾಣಿಯೊಂದಿಗೆ ಈ ಪ್ರದೇಶಕ್ಕೆ ವನವಿಹಾರಕ್ಕೆ ಹೋದಂತಹ ಸಂದರ್ಭದಲ್ಲಿ ರಾಣಿಯು ಇಲ್ಲಿಯೇ ಇದ್ದ ಮರವೊಂದರ ಕೆಳಗೆ ಗಂಡು ಮಗನೊಬ್ಬನಿಗೆ ಜನ್ಮ ನೀಡಿದಳಂತೆ. ಆದರೆ ಆ ಮಗುವಿಗೆ ಹಣೆಯ ಮೇಲೊಂದು ಕಣ್ಣು ಇತ್ತಂತೆ. ಇದರಿಂದ ಮುಂದೆ ಮಗು ವಯಸ್ಸಿಗೆ ಬಂದಾಗ ಅಂದರೆ ಆ ಮಗುವಿಗೆ ಪಟ್ಟವನ್ನು ಕಟ್ಟುವಾಗ ಬಾಸಿಂಗವನ್ನು ಹಣೆಯ ಬದಲಿಗೆ ಆತನ ಮೊಣಕಾಲಿಗೆ ಕಟ್ಟಿದರಂತೆ ಈ ಪ್ರಸಂಗದಿಂದಾಗಿ ಈ ಊರಿಗೆ ಮೊಣಕಾಲ್ಮೂರು ಎಂಬ ಹೆಸರು ಬಂದಿತೆಂಬ ಐತಿಹ್ಯವಿದೆ.[೮] ಈ ಮೊಳಕಾಲ್ಮೂರು ತದನಂತರದ ದಿನಗಳಲ್ಲಿ ಮೊಳಕಾಲ್ಮೂರು ಎಂದಾಯಿತು. ಆದರೆ ಈ ಮೇಲಿನ ಪ್ರಸಂಗವನ್ನು ಗಮನಿಸಿದರೆ ಪ್ರಾಯಶಃ ಈ ಮಾತು ತ್ರಿನೇತ್ರ ಕದಂಬನಿಗೆ ಅನ್ವಯಿಸುತ್ತದೆ ಎನ್ನಲಾಗಿದೆ. ಏಕೆಂದರೆ ಈತನ ಹೆಸರು ಮೈಸೂರು ಗೆಸೆಟಿಯರ್‌ನಲ್ಲಿ ಉಲ್ಲೇಖಿಸಲ್ಪಟ್ಟಿದೆ.[೯]

ಹಾಗೆಯ ಇಲ್ಲಿನ ಸ್ಥಳನಾಮಕ್ಕೆ ಅಂಟಿಕೊಂಡಿರುವ ಮತ್ತೊಂದು ಐತಿಹ್ಯದಂತೆ ಊರಿನ ಉತ್ತರದಿಂದ ಈಶಾನ್ಯ ದಿಕ್ಕಿನವರೆಗೆ ಗೋಡೆಯಂತೆ ಹಬ್ಬಿಕೊಂಡಿರುವ ಬೆಟ್ಟದ ಸಾಲು ಹಾಗೂ

ಬೆಟ್ಟ ಇದೆ. ಬೆಟ್ಟದ ಮೇಲಿರುವ ಕೋಟೆಗೆ ಹತ್ತಿ ಹೋಗುವಾಗ ಸಿಗುವ ಕೆರೆಯೊಂದನ್ನು ದಾಟಿ ಸ್ವಲ್ಪ ಮುಂದೆ ಹೋದರೆ ಕೂಗುವ ಕಲ್ಲು ಎಂದು ಹೆಸರಾದ ಕೂಗುವ ಬೆಟ್ಟವಿದೆ. (ಈ ಕೂಗುವ ಬೆಟ್ಟವನ್ನು ಕೂಗುವ ಕಲ್ಲು, ಕೂಗೊಬೆಟ್ಟ, ಕೂಗೋ ಬಂಡೆ, ಮೊಳಗುವ ಕಲ್ಲು,[೧೦] ಜೋಗಪ್ಪನ ಗುಡ್ಡ[೧೧] ಎಂಬ ಹಲವಾರು ಹೆಸರುಗಳಿಂದ ಕರೆಯಲಾಗಿದೆ). ಈ ಕೂಗುವ ಕಲ್ಲು ಅಥವಾ ಮೊಳಗುವ ಕಲ್ಲಿನ ಬಳಿ ನಿಂತು ಕೂಗಿದರೆ, ನಾವು ಕೂಗಿದ ಶಬ್ದವು ಎದುರಿಗಿರುವ ಬೆಟ್ಟಕ್ಕೆ ತಾಗಿ ಪ್ರತಿಫಲನವಾಗಿ/ಪ್ರತಿಧ್ವನಿಯಾಗಿ ಮಾರ್ಮೊಳಗುತ್ತದೆ. ಆದ್ದರಿಂದ ಶಬ್ದ/ಪ್ರತಿಧ್ವನಿ ಮೊಳಗುವ ಕಲ್ಲಿನ ಊರು ಮೊಳಗಲ್ಲೂರು>ಮೊಳಕಲ್ಲೂರು[೧೨] ಎಂದಾಗಿ ಕೊನೆಗೆ ಪ್ರಸ್ತುತ ಇಂದಿರುವ ಮೊಳಕಾಲ್ಮೂರು ಎಂಬ ಹೆಸರಾಗಿ ಪರಿವರ್ತನೆಗೊಂಡಿದೆ. ಈ ಐತಿಹ್ಯವನ್ನು ಗಮನಿಸಿ ನೋಡಿದರೆ ಇಂದಿಗೂ ಆ ಸ್ಥಳದಲ್ಲಿ ನಿಂತು ಕೂಗಿದರೆ, ಕೂಗಿದ ಶಬ್ದ/ಮಾತು ಮಾರ್ಮೊಳಗುವುದು ಪ್ರಸ್ತುತ ದಿನಮಾನಗಳಲ್ಲಿಯೂ ಕೇಳಿಬರುತ್ತಿದೆ. ಹಾಗಾಗಿ ಬೆಂದಕಾಳೂರು ಎಂಬ ಊರು ನಂತರದಲ್ಲಿ ಬೆಂಗಳೂರು ಎಂದು ರೂಪಾಂತರಗೊಂಡಂತೆ, ಮೊಳಗುವಕಲ್ಲಿನ ಊರು-ಮೊಳಕಾಲ್ಮೂರು ಎಂದು ಪರಿವರ್ತನೆಗೊಂಡಿರುವುದರಲ್ಲಿ ಯಾವುದೇ ರೀತಿಯ ಅನುಮಾನವಿಲ್ಲ ಹಾಗಾಗಿ ಈ ಐತಿಹ್ಯವೇ ಇಲ್ಲಿನ ಸ್ಥಳಮಾನಕ್ಕೆ ಹೆಚ್ಚು ಸೂಕ್ತವಾದುದೆನಿಸುತ್ತದೆ.

**ತುಪ್ಪದಮ್ಮನ ಬಾವಿಯ ಕುರಿತಾದ ಐತಿಹ್ಯ**

ಬೆಟ್ಟದ ಮೇಲಿನ ನಾಗತಿಕೆರೆ ಮತ್ತು ಕೂಗೋ ಬೆಟ್ಟದ ನಡುವೆಯಿರುವ ತುಪ್ಪದಮ್ಮನ ಬಾವಿಯ ಕುರಿತಾದ ಐತಿಹ್ಯವೆಂದರೇ ನುಂಕೀಮಲೆ ಬೆಟ್ಟದಲ್ಲಿನ ಹೊಂಡದಿಂದ ಮೊಳಕಾಲ್ಮೂರುವಿನ ಬೆಟ್ಟದಲ್ಲಿರುವ ತುಪ್ಪದಮ್ಮನ ಬಾವಿಯವರೆಗೆ ಸುರಂಗ ಮಾರ್ಗವಿದೆಯಂತೆ. ಹಾಗಾಗಿ ನುಂಕಪ್ಪನ ಬೆಟ್ಟದ ಹೊಂಡದಲ್ಲಿ ಹಾಕಿದ ನಿಂಬೆ ಹಣ್ಣು ತುಪ್ಪದಮ್ಮನ ಬಾವಿಯೊಳಗೆ ಬಂದು ತೇಲುತ್ತದೆ ಎಂಬ ಐತಿಹ್ಯವಿದೆ.[೧೩]

**ಬಯಲು ಆಂಜನೇಯ ದೇವರ ಕುರಿತ ಐತಿಹ್ಯ**

ಪ್ರಸ್ತುತ ಈಗ ಇರುವ ಬಡಾವಣೆಯು ಒಂದು ಕಾಲದಲ್ಲಿ ದಟ್ಟವಾದ ಕಾಡಿನಿಂದ ಕೂಡಿತು. ಹಾಗಾಗಿ ಇಲ್ಲಿಗೆ ಬರಲು ಎಂತಹ ಧೈರ್ಯವಂತರೂ ಸಹ ಹೆದರುತ್ತಿದ್ದರಂತೆ. ಈ ದಟ್ಟವಾದ ಅರಣ್ಯ ಪ್ರದೇಶದಲ್ಲಿ ಯಾರ ಕಣ್ಣಿಗೂ ಬೀಳದಂತೆ ದೊಡ್ಡದಾದ ಗುಂಡುವಿನ ಮೇಲೆ ಆಂಜಿನೇಯ ಇದ್ದನಂತೆ ಆದರೆ ಒಂದು ದಿನ ಪಾವಗಡದ ವದ್ದಿವಂಶಸ್ಥರಿಂದ ಇಲ್ಲಿನ ಆಂಜಿನೇಯ ಶೋಧನೆಗೊಂಡನೆಂಬ ಐತಿಹ್ಯವಿದೆ.[೧೪] ಈ ರೀತಿಯಲ್ಲಿ ಬೆಳಕಿಗೆ ಬಂದಾಗ ಕಾಲಾನಂತರದಲ್ಲಿ ಅರಣ್ಯ ನಾಶವಾಗಿ ವಿಶಾಲವಾದ ಬಯಲು ಪ್ರದೇಶ ಆವರಿಸಿದರಿಂದ ಇಲ್ಲಿನ ಆಂಜಿನೇಯನು ಜನರಿಂದ ಬಯಲು ಆಂಜನೇಯ ಎಂಬ ಹೆಸರಿನಿಂದ ಗುರುತಿಸಿಕೊಂಡನೆಂದು ಹೇಳಲಾಗಿದೆ.

**ಹುಲಿಮರಿತಿಪ್ಪೆ ಮಲಿಯಮ್ಮ ದೇವಿಯ ಹುಟ್ಟು ಕುರಿತ ಐತಿಹ್ಯ**

ಮೊಳಕಾಲ್ಮೂರುವಿನ ಕೋಟೆಯ ಹುಲಿಮರಿ ತಿಪ್ಪೆ ಬತೇರಿಯಿರುವ ಗುಡ್ಡದಲ್ಲಿ ಹುಲಿಗಿಡದ ಹುಲಿಪೆಳೆಯೆಂಬ ಸಸ್ಯದ ಪೊದೆಗಳಿಂದ ಕೂಡಿತ್ತು. ಈ ಬತೇರಿ ಗುಡ್ಡಕ್ಕೆ ಹೊಂದಿಕೊಂಡಂತೆ ಪೂರ್ವ ದಿಕ್ಕಿನಲ್ಲಿ ಒಂದು ಬೃಹತ್ ಗಾತ್ರದ ಹುಣಸೆಮರವಿದ್ದು ಅದರ ಕೆಳಗೆ ಬೆಳೆದಿದ್ದ ಹುತ್ತದಲ್ಲಿ ಮೃತ್ತಿಕೆಯ ರೂಪದಲ್ಲಿ ಸ್ತ್ರೀ ದೇವತೆಯಾದ ಮಲಿಯಮ್ಮ ಹುಟ್ಟಿ ಬಂದಳು ಎಂಬ ಐತಿಹ್ಯವಿದೆ.[೧೫]

**ಕೋಟೆ ಆಂಜನೇಯನ ಕುರಿತಾದ ಐತಿಹ್ಯ**

ಕೋಟೆ ಮೇಲಿನ ಏಣಿಮಾರಮ್ಮ ಬುರುಜುವಿನ ಬಳಿಯಿರುವ ಹಾಳಾದ ದೇವಾಲಯ ಒಂದಿದೆ. (ಅಧಿಷ್ಠಾನ ಭಾಗ ಮಾತ್ರ ಕಾಣುತ್ತದೆ) ಅದು ಹೊನ್ನೂರು ಸ್ವಾಮಿಯ ಗುಡಿಯಾಗಿದ್ದು. ಇದರ ಮುಂದಿರುವ ದೇವಾಲಯದ ಕಂಬಗಳಿಂದ ಊರೊಳಗೆ ಹೊನ್ನೂರ ಸ್ವಾಮಿಯ ಗುಡಿಯನ್ನು ಕಟ್ಟಬೇಕೆಂದು ನಿಶ್ಚಯಿಸಿ ಕಂಬಗಳನ್ನು ಹೊತ್ತು ಕೆಳಗಿಳಿಯುವಾಗ ಕೋಟೆಯಲ್ಲಿನ ಬಟ್ಟೆಗುಂಡುವಿನ ಬಳಿ ಮೇಲಿನ ಆಂಜಿನೇಯನು ಬಂದು ತಡೆದು ನನ್ನ ಅಣ್ಣನಾದ ಹೊನ್ನೂರ ಸ್ವಾಮಿಯನ್ನು ನನ್ನೊಂದಿಗೆ ಇಲ್ಲಿಯೇ ಇರಲು ಅವಕಾಶ ಮಾಡಿಕೊಡಿ ಎಂದು ಕೇಳಿಕೊಂಡನಂತೆ. ಹಾಗಾಗಿ ಊರೊಳಗೆ ಹೊತ್ತು ತರುತ್ತಿದ್ದ ದೇವಾಲಯದ ಅವಶೇಷಗಳನ್ನು ಪುನಃ ಅವುಗಳಿದ್ದ ಮೂಲ ನೆಲೆಯಲ್ಲಿಯೇ ಹಾಕಲಾಯಿತೆಂಬ ಐತಿಹ್ಯವಿದೆ.[೧೬]

**ವೆಂಕಟರಮಣ ದೇವಾಲಯದ ನಿರ್ಮಾಣ ಮತ್ತು ವಿಗ್ರಹ ಪ್ರತಿಷ್ಠಾಪನೆ ಕುರಿತಾದ ಐತಿಹ್ಯ**

ಇಲ್ಲಿನ ಸ್ಮಾರ್ಥ ಬ್ರಾಹ್ಮಣರಾದ ದೊಡ್ಡಪುಟ್ಟಪ್ಪನ ಧರ್ಮಪತ್ನಿಯಾದ ರಂಗಮ್ಮ ಶ್ರೀ ವೆಂಕಟರಮಣನ ಪರಮ ಭಕ್ತೆಯಾಗಿದ್ದಳು. ಈಕೆ ನಿರ್ವಹಿಸುತ್ತಿದ್ದ ಮನೆಯ ದೈನಂದಿನ ಕೆಲಸಗಳಲ್ಲಿ ಮೊಸರು ಕಡೆಯುವುದೂ ಒಂದಾಗಿತ್ತು. ಇದರಿಂದ ಈಕೆಗೆ ಮೊಸರಿನ ರಂಗಮ್ಮ ಎಂಬುದು ಮತ್ತೊಂದು ರೂಢನಾಮವಾಗಿ ಬಂದಿತ್ತು. ಈಕೆಯ ಪ್ರತಿನಿತ್ಯವೂ ಚಾಚು ತಪ್ಪದೇ ವೆಂಕಟರಮಣವನನ್ನು ಆರಾಧಿಸಿ ನಂತರ ಒಂದು ಕತ್ತಲಿನ ಕೋಣೆಯೊಳಗೆ ಮೊಸರನ್ನು ಕಡೆಯುತ್ತಿದ್ದಳು. ಹೀಗಿರುವಾಗ ಒಂದು ದಿನ ಈಕೆಯ ಭಕ್ತಿಗೆ ಮೆಚ್ಚಿದ ವೆಂಕಟರಮಣ/ಬಾಲಕೃಷ್ಣನು ಮೊಸರು ಕಡೆಯುವಾಗ ಪ್ರತ್ಯಕ್ಷನಾಗಿ ದರ್ಶನವನ್ನು ಕೊಟ್ಟನು. ಇದರಿಂದ ಸಂತೋಷಭರಿತಳಾದ ರಂಗಮ್ಮ ಬಾಲಕೃಷ್ಣನಿಗೆ ಬೆಣ್ಣೆಯನ್ನು ಕೊಟ್ಟಳು. ಈ ರೀತಿಯ ಚಟುವಟಿಕೆ ರಂಗಮ್ಮ ಮತ್ತು ಬಾಲಕೃಷ್ಣನ ನಡುವೆ ಸುಮಾರು ದಿನಗಳವರೆಗೆ ಹಾಗೆಯೇ ನಿರಂತರವಾಗಿ ಸಾಗಿ ಬಂದಿತು. ಜೀವನದಲ್ಲಿ ಒಮ್ಮೆಯಾದರೂ ವಿಜಯ ದಶಮಿಯ ದಿನದಂದು ತಿರುಪತಿಯಲ್ಲಿ ನಡೆಯುವ ಸ್ವಾಮಿಯ ಬ್ರಹ್ಮರಥೋತ್ಸವವನ್ನು ನೋಡಬೇಕೆಂಬುದು ಈಕೆಯ ಬಹುದಿನದ ಬಯಕೆಯಾಗಿರುತ್ತದೆ. ಹೀಗಿರುವಾಗ ಒಂದು ದಿನ ರಂಗಮ್ಮನ ಅತ್ತೆ ಮಾವಂದಿರು (ಬಾಲಕೃಷ್ಣಪ್ಪ/ಬಾಲಪ್ಪ ಮತ್ತು

ತಿಮ್ಮಾಜಮ್ಮ) ತಿರುಪತಿಯ ಬ್ರಹ್ಮರಥೋತ್ಸವಕ್ಕೆ ಹೊರಟಾಗ ಅವರೊಂದಿಗೆ ತಾನು ಹೋಗಬೇಕು ಎಂದು ಅನ್ನಿಸುತ್ತದೆ ಆದರೆ ಅದು ಸಾಧ್ಯವಾಗಲಿಲ್ಲ. ಇದರಿಂದ ಮತ್ತಷ್ಟು ದುಃಖತಪ್ತಳಾಗಿ ಕೊರಗುತ್ತಿರುವಾಗ ಬಾಲಕೃಷ್ಣ ದರ್ಶನ ನೀಡಿ ಭಕ್ತೆಯಾದ ರಂಗಮ್ಮನ ಬಯಕೆಯಂತೆ ಆಕೆಯನ್ನು ತಿರುಪತಿಯ ರಥೋತ್ಸವಕ್ಕೆ ಕರೆದೊಯ್ದು ತನ್ನೊಡನೆಯೇ ರಥದಲ್ಲಿ ಕೂರಿಸಿಕೊಂಡು ತಿರುಪತಿಯ ದಿವ್ಯದರ್ಶನವನ್ನು ಕರುಣಿಸಿದನು. ಅಂದಿನಿಂದ ರಂಗಮ್ಮ ಇನ್ನು ಮುಂದೆ ಸ್ವಾಮಿಯನ್ನು ತಿರುಪತಿಯಲ್ಲಿಯೇ ದರ್ಶನ ಮಾಡಬೇಕೆಂದುಕೊಂಡು ಪ್ರತಿವರ್ಷವೂ ತಿರುಪತಿಯಲ್ಲಿ ನಡೆಯುವ ರಥೋತ್ಸವಕ್ಕೆ ಹೋಗಿ ಸ್ವಾಮಿಯ ದಿವ್ಯದರ್ಶನವನ್ನು ಪಡೆಯುವ ಶಕ್ತಿ ನನಗಿಲ್ಲ. ನನಗೆ ವಯಸ್ಸಾಗಿದೆ, ನಾನು ಅಶಕ್ತಳೆಂದು ಮರುಗುತ್ತಿರುವಾಗ ಸ್ವಾಮಿಯು ಪ್ರತ್ಯಕ್ಷನಾದನು. ಆಗ ರಂಗಮ್ಮ ನಾನು ಮುಪ್ಪಿನ ವಯಸ್ಸಿನಲ್ಲಿರುವೆ ನೀವಿರುವಲ್ಲಿಗೆ ಬಂದು ನಿನ್ನ ದರ್ಶನ ಪಡೆಯಲಾಗದು ಹಾಗಾಗಿ ನೀನೇ ನಾನಿರುವಲ್ಲಿಗೆ ಬಂದುದರ್ಶನ ನೀಡು ಎಂದು ಕೇಳಿಕೊಂಡಾಗ, ವೆಂಕಟರಮಣನು ಬಾಲಕೃಷ್ಣನು ನೀನಿರುವಲ್ಲಿಯೇ ಬಂದು ನಾನು ನೆಲೆಸುವೆ ನನಗಾಗಿ ಒಂದು ಆಲಯವನ್ನು ನಿರ್ಮಿಸಿ ಅದರಲ್ಲಿ ನನ್ನ ವಿಗ್ರಹವನ್ನು ಪ್ರತಿಷ್ಠಾಪಿಸು. ಇನ್ನು ಮುಂದೆ ನೀನೇ ಅಲ್ಲ ನಿನ್ನ ವಂಶದವರು ಯಾರೂ ಸಹ ನನ್ನ ದರ್ಶನಕ್ಕೆ ಅಷ್ಟು ದೂರಬರುವುದುಬೇಡ. ನಾನು ಇಲ್ಲಿಯೇ ಇದ್ದು ನಿನ್ನ ಇಷ್ಟಾರ್ಥಗಳನ್ನು ಈಡೇರಿಸಿಕೊಂಡು ಬರುತ್ತೇನೆ ಎಂದು ಸ್ವಾಮಿಯಿಂದ ಅಪ್ಪಣೆಯಾಗುತ್ತದೆ. ಇದೇ ಸಮಯದಲ್ಲಿಯೇ ಮೊಳಕಾಲ್ಮೂರುವಿನ ಶ್ಯಾನುಭೋಗರಾದ ವೆಂಕಟರಾಮಯ್ಯ ಮತ್ತು ಸುಬ್ಬಮ್ಮ ಎಂಬ ದಂಪತಿಗಳ ಮಗನ ದೃಷ್ಟಿಮಂದವಾಗುತ್ತಾ ಕುರುಡನಾಗಿದ್ದ. ಆಗ ರಂಗಮ್ಮ ಆ ಮಗುವಿಗೆ ದೇವರ ಕಾಡಿಗೆಯನ್ನು ನೀಡಿ ಕಣ್ಣುಕೊಟ್ಟು ಅಪಾರ ಜನರ ಪ್ರೀತಿಗೆ ಪಾತ್ರಳಾಗಿ 'ದೇವರರಂಗಮ್ಮ' ಎಂದೇ ಹೆಸರಾದಳು. ಇದರಿಂದ ರಂಗಮ್ಮನ ಮಾತಿಗೆ ಊರಿನ ಜನರೆಲ್ಲಾ ಸೇರಿ ದೇವಾಲಯವನ್ನು ನಿರ್ಮಿಸಿದರು. ನಂತರ ವಿಗ್ರಹವನ್ನು ತಯಾರಿಸಲು ಒಳ್ಳೆಯ ಶಿಲ್ಪಿಯನ್ನು ಹುಡುಕುವ ಸಮಯದಲ್ಲಿದ್ದಾಗ ಒಂದು ದಿನ ರಾತ್ರಿ ರಂಗಮ್ಮನಿಗೆ ಸ್ವಾಮಿಯು ಸ್ವಪ್ನದರ್ಶನವಾಗಿ ಇಲ್ಲಿಂದ ೧೫ ಕಿ.ಮೀ. ದೂರದ ಊರಿನ ಕೆರೆಯೊಂದರಲ್ಲಿ ಜನರು ಬಟ್ಟೆ ಒಗೆಯಲು ಮಾಡಿಕೊಂಡ ಬಂಡೆಯೊಂದರಲ್ಲಿ ನಾನಿರುವೆ ನನ್ನನ್ನು ತಂದು ಗುಡಿಯಲ್ಲಿ ಪ್ರತಿಷ್ಠಾಪಿಸು ಎಂಬ ದಿವ್ಯವಾಣಿ ಕೇಳಿಸಿತು. ಅದರಂತೆ ಮರುದಿನ ಹಾಲುಗನ್ನಿಟ್ಟು ಹುಡುಕಿಸಿ ಆ ವಿಗ್ರಹವನ್ನು ತಂದು ಗುಡಿಯಲ್ಲಿ ಪ್ರತಿಷ್ಠಾಪಿಸಲಾಯಿತು. ಮುಂದೆ ರಂಗಮ್ಮ ಹರಿನಾಮಸ್ಮರಣೆ ಮಾಡುತ್ತಾ ಕೊನೆಗೆ ಸ್ವಾಮಿಯಲ್ಲಿಯೇ ಐಕ್ಯಳಾಗುತ್ತಾಳೆ.[೧೭]

## ೪.೨. ನಂಬಿಕೆ ಆಚರಣೆಗಳು

ಸಾವಿರಾರು ವರ್ಷಗಳ ಹಿಂದೆ ಭೂಮಿಯ ಮೇಲಾದ ಮಾನವನ ಉಗಮ ಮತ್ತು ಬೆಳವಣಿಗೆಯನ್ನು ಗಮನಿಸಿದರೆ, ಆತನ ಬೆನ್ನ ಹಿಂದೆ ನೂರಾರು ಏಳು–ಬೀಳುಗಳ, ಸೋಲು–

ಗೆಲುವುಗಳ ಪ್ರಯತ್ನಗಳಿವೆ. ಇವುಗಳ ನಡುವೆಯೂ ಈತನು ತನಗೆ ಹಾಗೂ ತನ್ನ ಜೀವನಕ್ಕೆ ಅವಶ್ಯಕವಾದಂತಹ ಹಲವಾರು ರೂಢಿ ಸಂಪ್ರದಾಯ, ರೀತಿ-ನೀತಿ, ವಿಧಿ-ವಿಧಾನಗಳೆಂಬ ನಂಬಿಕೆ-ಆಚರಣೆಗಳನ್ನು ಕಂಡುಕೊಂಡು "ಹುಟ್ಟು ಉಚಿತ ಸಾವು ಖಚಿತ" ಎಂಬುದನ್ನು ಅರಿತು, ಅವುಗಳಿಗೆ ತನ್ನದೇ ಆದಂತಹ ನಾಮಕರಣ, ವಿವಾಹ, ಸಂಸ್ಕಾರ ಎಂಬ ಮೊದಲಾದ ಹೆಸರುಗಳನ್ನಿಟ್ಟು, ಒಂದು ನಿಯಮಿತವಾದ ಚೌಕಟ್ಟಿನೊಳಗೆ, ಯಾವುದೇ ರೀತಿಯ ದೋಷಗಳಿಲ್ಲದಂತೆ, ಚಾಚೂ ತಪ್ಪದೇ, ತನ್ನ ಜೀವಿತಾವಧಿಯುದ್ದಕ್ಕೂ ರೂಢಿಸಿಕೊಂಡು ಬಂದಿದ್ದಾನೆ. ಹೀಗೆ ಪ್ರಾಚೀನ ಕಾಲದಿಂದ ಇಂದಿನ ಕಾಲದವರೆಗೆ ತಲೆತಲೆಮಾರುಗಳಿಂದ, ಪರಂಪರಾನುರಾಗತವಾಗಿ, ಸಾಂಪ್ರದಾಯಬದ್ಧವಾಗಿ, ಮಾನವನೊಡನೆ ಬೆಳೆದು ಬಂದಿರುವ ನಂಬಿಕೆ ಆಚರಣೆಗಳು ನಿಜವಾದ ಸಂಸ್ಕೃತಿಯ ಪ್ರತೀಕಗಳಾಗಿವೆ. ಆದರೆ ಪ್ರಸ್ತುತ ದಿನಮಾನಗಳಲ್ಲಿ ಆಧುನೀಕರಣದ ಪ್ರಭಾವದಿಂದ ನಂಬಿಕೆ-ಆಚರಣೆಗಳಲ್ಲಿ ಕೆಲವೊಂದು ಬದಲಾವಣೆಗಳು ಕಂಡುಬಂದರೂ, ಅವುಗಳು ತಮ್ಮ ಮೂಲ ಸಂಸ್ಕೃತಿಯಿಂದ ಸಂಪೂರ್ಣವಾಗಿ ಹೊರಬರದೇ ಇರುವುದೊಂದು ಗಮನಾರ್ಹ ಸಂಗತಿಯಾಗಿದೆ. ಹೀಗಾಗಿ ಯಾವುದೇ ಒಂದು ನಾಡಿನ ಅಥವಾ ಯಾವುದೇ ಒಂದು ಪ್ರದೇಶದ ಹಾಗೂ ಅಲ್ಲಿನ ಮನುಕುಲದ ಸಾಂಸ್ಕೃತಿಕ ಪರಂಪರೆಯನ್ನು ಅರಿಯುವಲ್ಲಿ ಅಲ್ಲಿನ ನಂಬಿಕೆ-ಆಚರಣೆಗಳ ಅಧ್ಯಯನ ಪ್ರಮುಖ ಪಾತ್ರವಹಿಸುತ್ತದೆ. ಸಾಮಾಜಿಕವಾಗಿ ಹಾಗೂ ಧಾರ್ಮಿಕವಾಗಿ ಮಹತ್ವದ ಸ್ಥಾನವನ್ನು ಪಡೆದು ಸಂಸ್ಕೃತಿಯ ಭವ್ಯತೆಯನ್ನು ಲೋಕಕ್ಕೆ ಸಾರುವುದರ ಮೂಲಕ ಎತ್ತಿ ಹಿಡಿಯುವಂತಹ ಹಲವಾರು ನಂಬಿಕೆ-ಆಚರಣೆಗಳು ಅಧ್ಯಯನ ಕ್ಷೇತ್ರದಲ್ಲಿಯೂ ಬೆಳೆದು ಬಂದಿವೆ.

**ನಂಬಿಕೆಗಳು**

ವಿವಿಧ ಜಾತಿ, ಮತ, ಧರ್ಮ, ವರ್ಗದ ಜನರನ್ನೊಳಗೊಂಡಿರುವ ಈ ಪ್ರದೇಶದಲ್ಲಿ ಪ್ರಾಚೀನ ಕಾಲದಿಂದಲೂ ಹಲವಾರು ನಂಬಿಕೆಗಳು ಬೆಳೆದು ಬಂದಿವೆ. ಇಲ್ಲಿನ ಜನರು ತಮ್ಮ ತಮ್ಮ ಮತಧರ್ಮದಲ್ಲಿನ ಸಾಂಪ್ರದಾಯಗಳಿಗನುಸಾರವಾಗಿ ಆಚರಿಸಿಕೊಂಡು ಬರುವಂತಹ ಹಬ್ಬ-ಹರಿದಿನ, ಜಾತ್ರೆ-ಉತ್ಸವ, ಮಠ-ಮಂದಿರ, ಗುಡಿಗೋಪುರ, ಕೋಟೆ-ಕೊತ್ತಲ, ಕೆರೆ-ಕಟ್ಟೆ-ಬಾವಿ, ಭಕ್ತಿಯಿಂದ ಆರಾಧಿಸುವ ದೇವ-ದೇವತೆಗಳ ಮೇಲಷ್ಟೇ ಅಲ್ಲದೇ ಶಾಸನ ಮತ್ತು ಶಾಸನ ಶಿಲ್ಪಗಳೆಂಬ ಹತ್ತು ಹಲವಾರು ವಿಷಯಗಳ ಬಗ್ಗೆ ಇರುವಂತಹ ನಂಬಿಕೆಗಳನ್ನು ತಮ್ಮ ಪೂರ್ವಜರಿಂದ ಅರಿತು, ತಲೆ-ತಲೆಮಾರುಗಳಿಂದ ತಮ್ಮ ಮನೆ-ಮನಗಳಲ್ಲಿ ಇಂದಿಗೂ ಉಳಿಸಿ, ಬೆಳೆಸಿಕೊಂಡು ಬರುತ್ತಿದ್ದಾರೆ.

**ದೇವ-ದೇವತೆಗಳ ಬಗ್ಗೆ ಇರುವ ನಂಬಿಕೆಗಳು**

ಭಕ್ತಿ ಪೂರ್ವಕವಾಗಿ ಆರಾಧಿಸುವ ಇಲ್ಲಿನ ಕೆಲವೊಂದು ದೇವ-ದೇವತೆಗಳ ಬಗ್ಗೆ ಹಲವಾರು ರೀತಿಯ ನಂಬಿಕೆಗಳು ಜನರಲ್ಲಿ/ಸ್ಥಳೀಯರಲ್ಲಿ ಬೆಳೆದು ಬಂದಿವೆ.

ಊರಿನಿಂದ ಕೆಲವೇ ಕಿ.ಮೀ.ಗಳ ದೂರದಲ್ಲಿನ ನುಂಕೀಮಲೆಯಲ್ಲಿ ನೆಲೆನಿಂತಿರುವ ಶ್ರೀ ಭೈರವೇಶ್ವರ/ನುಂಕಪ್ಪ/ಸಿದ್ದೇಶ್ವರ ದೇವರ ಬಗ್ಗೆ "ನುಂಕಪ್ಪ ದೇವರು ನಮ್ಮ ಊರಿನ ಪ್ರಮುಖ ಹಾಗೂ ದೊಡ್ಡ ದೇವರು, ಬೆಟ್ಟದ ಮೇಲಿರುವ ಶ್ರೀ ಭೈರವೇಶ್ವರನು ಊರೊಳಗೆ ಬಂದೋದರೆ ಊರಿಗೆ ಒಳ್ಳೆಯದಾಗುತ್ತದೆ. ಈತನು ಎಂತಹದ್ದೇ ಸಂಕಷ್ಟದಲ್ಲಿದ್ದರೂ ಈತನನ್ನು ನಂಬಿದ ಈ ಊರಿನ ಜನರನ್ನು ಹಾಗೂ ಈ ಊರನ್ನು ಎಂದಿಗೂ ಕೈಬಿಡದೇ ರಕ್ಷಿಸುತ್ತಾನೆ ಎಂಬ ನಂಬಿಕೆಗಳಿವೆ. ಈ ನಂಬಿಕೆಗಳನ್ನು ಕುರಿತು ಒಂದು ಕ್ಷಣ ಯೋಚಿಸಿದರೆ/ನೋಡಿದರೆ ಇಲ್ಲಿನ ಜನರು ಮೇಲು-ಕೀಳು, ಗಂಡು-ಹೆಣ್ಣು ಎಂಬ ಯಾವುದೇ ರೀತಿಯ ಲಿಂಗತಾರತಮ್ಯವಿಲ್ಲದೇ ತಾವು ಹಾಗೂ ತಮ್ಮ ಮಕ್ಕಳಿಗೆ ನುಂಕಪ್ಪ, ನುಂಕೇಶ, ನುಂಕವ್ವ, ಸಿದ್ದಪ್ಪ, ಸಿದ್ದೇಶ, ಸಿದ್ದಮ್ಮ, ಭೈರಣ್ಣ, ಭೈರವಿ ಎಂಬ ಮುಂತಾದ ಸ್ವಾಮಿಯ ಹೆಸರನ್ನು ಹೋಲುವ ನಾಮಕರಣಗಳನ್ನಿಟ್ಟು ಕರೆಯುತ್ತಿರುವುದು ಇಂದಿಗೂ ಹೆಚ್ಚಾಗಿ ಕಂಡು ಬರುತ್ತದೆ.

ಆಂಧ್ರ-ಕರ್ನಾಟಕದ ಗಡಿಯಂಚಿನಲ್ಲಿ ನೆಲೆಸಿರುವ ಗಾಳಿ ಮಾರಮ್ಮ ಇಲ್ಲಿನ ಮುಖ್ಯ ದೇವರಾದ ನುಂಕಪ್ಪನ ತಂಗಿ ಎಂದೂ, ಈ ದೇವಿಯ ಗಂಡನ ಮನೆ ಆಂಧ್ರ ಪ್ರದೇಶವಾದರೂ, ತವರುಮನೆ ಮಾತ್ರ ಮೊಳಕಾಲ್ಮೂರು ಆಗಿದೆ. ಈ ಊರಿನ ಹೆಣ್ಣು ಮಗಳಾದ ದೇವಿಯು ಹಗಲಿರುಳನ್ನದೆ ಸದಾಕಾಲ ತನ್ನ ತವರೂರನ್ನು ಕಾಯುತ್ತಾಳೆ/ತ್ತಿರುವಳು ಎಂಬ ನಂಬಿಕೆಗಳು ಇಲ್ಲಿನ ಜನತೆಯಲ್ಲಿವೆ.[೧೯] ಹಾಗಾಗಿ ಈ ದೇವತೆಯನ್ನು ಊರಿನ ಗ್ರಾಮ ದೇವತೆ' ಎಂದು ಪರಿಗಣಿಸಲಾಗಿದೆ. ಹಾಗೆಯೇ ಊರಿನಲ್ಲಿರುವ ದುರ್ಗಾ ದೇವಿಯು ಇಲ್ಲಿನ 'ನಗರದೇವತೆ' ಯಾಗಿದ್ದಾಳೆಂಬ ನಂಬಿಕೆಗಳಿವೆ.

**ಶೈವ ದೇವಾಲಯಗಳಿಗೆ ಸಂಬಂಧಿಸಿದ ನಂಬಿಕೆಗಳು**

ಈ ಊರಿನಲ್ಲಿ ಒಂದೆರಡು ವರ್ಷಗಳ ಕಾಲ ಮಳೆ ಬಾರದೇ ಹೋದರೆ, ಇಲ್ಲಿನ ಶ್ರೀ ಮಾರ್ಕಂಡೇಯನ ಗುಡಿಯಲ್ಲಿ ಮಹಾಭಾರತದ ವಿರಾಟ ಪರ್ವವನ್ನು ಓದಿಸಿದರೆ/ಪಟಿಸಿದರೆ ಮಳೆ ಬರುತ್ತದೆ ಎಂಬ ನಂಬಿಕೆ[೨೦] ಊರಿನ ಸಮಸ್ತ ನಾಗರೀಕರಲ್ಲಿ ಅದರಲ್ಲೂ ವಿಶೇಷವಾಗಿ ಇಲ್ಲಿನ ಪದ್ಮಶಾಲೀಯ ಜನಾಂಗದವರಲ್ಲಿದೆ. ಅಲ್ಲದೇ ಇಲ್ಲಿನ ಪ್ರಮುಖ ದೇವರೆಂದು ಕರೆಯಲ್ಪಡುವ ಬೆಟ್ಟದ ಮೇಲಿನ ಶ್ರೀ ಭೈರವೇಶ್ವರ ಬಳಿ ಹೋಗಿ ಭಕ್ತಿಯಿಂದ ನಮಸ್ಕರಿಸಿ ಮನದಲ್ಲಿ ನಮ್ಮ ಬೇಕು-ಬೇಡಿಕೆಯ ವರಗಳ ಕುರಿತಾಗಿ ಪ್ರಾರ್ಥಿಸಿದರೆ ದೇವರು ಹೂವನ್ನು ಕರುಣಿಸುವನು. ಹೀಗೆ ಇತನನ್ನು ಊರಿಗೆ ಕರೆತರುವಾಗ ಸಂಬಂಧ ಪಟ್ಟ ಸಮಸ್ತ ಭಕ್ತಾದಿಗಳೆಲ್ಲಾ ಬೆಟ್ಟಕ್ಕೆ ಹೋಗಿ ವಿಶೇಷ ಪೂಜೆ ಕೈಗೊಂಡು ಹೂವನ್ನು ಬೇಡುವರು. ಆಗ ದೇವರು ಹೂವನ್ನು ಬಲಗಡೆಯಿಂದ ಕರುಣಿಸಿದರೆ ಅದು "ಶುಭ ಸಂಕೇತ" ವೆಂದೂ, ಎಡಗಡೆಯಿಂದ ನೀಡಿದರೆ ಅದು "ಅಶುಭದ

ಸಂಕೇತ್" ಎಂಬ ನಂಬಿಕೆಯಿದೆ. ಹೀಗೆ ಶೈವ ದೇವರು, ಶಿವಾಲಯಗಳ ಕುರಿತಾಗಿ ನಂಬಿಕೆಗಳು ಬೇರೂರಿವೆ.

## ವೈಷ್ಣವ ದೇವಾಲಯಗಳಿಗೆ ಸಂಬಂಧಿಸಿದ ನಂಬಿಕೆಗಳು

ಶೈವ ಪಂಥಕ್ಕಷ್ಟೇ ಅಲ್ಲದೇ ವೈಷ್ಣವಕ್ಕೆ ಸಂಬಂದಿಸಿದಂತಹ ನಂಬಿಕೆಗಳೂ ಸಹ ಇಲ್ಲಿನ ಜನರಲ್ಲಿವೆ. ಇಲ್ಲಿನ ಪಾಂಡುರಂಗ ದೇವಾಲಯದಲ್ಲಿ ತೊಟ್ಟಿಲು ಸೇವೆಯನ್ನು ಕೈಗೊಂಡರೇ ವಿವಾಹಿತ ಮಹಿಳೆಯರಿಗೆ, ಬಹುಕಾಲ ಮಕ್ಕಳಾಗದಂತಹ ವಿವಾಹಿತ ದಂಪತಿಗಳಿಗೆ ಸಂತಾನ ಫಲ ದೊರೆಯುತ್ತದೆಂಬ ನಂಬಿಕೆಯಿದೆ.[೨೧] ಹಾಗೆಯೇ ಇಲ್ಲಿನ ಬಯಲು ಆಂಜನೇಯ ದೇವಾಲಯದಲ್ಲಿ ನಡೆಯುವ ದೀಪೋತ್ಸವದಲ್ಲಿ ದೀಪಗಳನ್ನು ಬೆಳಗಿಸಿದರೆ ಹದಿಹರೆಯದ ಕನ್ಯೆಯರಿಗೆ ಕಂಕಣಫಲ, ಮಕ್ಕಳಾಗದ ವಿವಾಹಿತ ದಂಪತಿಗಳಿಗೆ ಸಂತಾನಫಲಗಳು ಲಬಿಸುತ್ತವೆ. ಅಷ್ಟೇ ಅಲ್ಲದೇ ಭಕ್ತಾದಿಗಳು ತಮ್ಮ ಕಷ್ಟಕಾರ್ಪಣ್ಯಗಳನ್ನು ಪ್ರಾರ್ಥಿಸುವುದರ ಮೂಲಕ ಹೇಳಿಕೊಂಡರೆ ಅವುಗಳ ಪರಿಹಾರಕ್ಕೆ ಹೂವನ್ನೂ ಸಹ ನೀಡುತ್ತಾನೆ ಎಂಬ ನಂಬಿಕೆಯಿದೆ.[೨೨] ಹಾಗೆಯೇ ಇಲ್ಲಿನ ಜನ್ನಿಗೆ ಪಾಲು ಆಂಜನೇಯನು ಸಹ ಭಕ್ತಾದಿಗಳಿಗೆ ಹೂವನ್ನು ಕರುಣಿಸುವುದರ ಜೊತೆಗೆ ಸಂತಾನಫಲ, ಕಂಕಣಫಲ, ಉದ್ಯೋಗ ಹಾಗೂ ಉತ್ತಮ ಆರೋಗ್ಯವನ್ನು ಕರುಣಿಸುತ್ತಾನೆಂಬ ನಂಬಿಕೆಗಳಿವೆ. ಇಲ್ಲಿನ ವೀರಾಂಜಿನೇಯನೂ ಸಹ ಭಕ್ತಾದಿಗಳ ಹರಕೆಗಳನ್ನು ಈಡೇರಿಸುತ್ತಾನೆಂಬ ನಂಬಿಕೆಗಳು ಇವೆ. ಇಲ್ಲಿನ ಬ್ರಾಹ್ಮಣ ವರ್ಗದವರಿಗಾಗಿ ತಿರುಪತಿಯ ವೆಂಕಟರಮಣನು ಅಲ್ಲಿಂದ ಬಂದು ಇಲ್ಲಿಯೇ ನೆಲೆಸಿದ್ದಾನೆಂಬ ನಂಬಿಕೆ ಈ ವರ್ಗದವರಲ್ಲಿದೆ.[೨೩] ಹೀಗೆ ವೈಷ್ಣವಕ್ಕೆ ಸಂಬಂದಿಸಿದಂತೆಯೂ ಇಲ್ಲಿನ ಜನರಲ್ಲಿ ಇಂದಿಗೂ ಸಾಕಷ್ಟು ನಂಬಿಕೆಗಳು ಉಳಿದು ಬಂದಿವೆ.

## ಶಾಕ್ತೆಯ ದೇವಾಲಯಗಳಿಗೆ ಸಂಬಂಧಿಸಿದಂತಿರುವ ನಂಬಿಕೆಗಳು.

ಶೈವ, ವೈಷ್ಣವ ಮತಧರ್ಮಕ್ಕಷ್ಟೇ ಅಲ್ಲದೇ ಶಾಕ್ತ ಪರಂಪರೆಗೆ ಸಂಬಂಧಿಸಿದಂತೆಯೂ ಹಲವಾರು ನಂಬಿಕೆಗಳು ಬೆಳೆದು ಬಂದಿವೆ. ಇಲ್ಲಿನ ಗಾಳಿ ಮಾರಮ್ಮನ ಗುಡಿಯ ಹಿಂಬಂದಿಗಿರುವ ಸಣ್ಣದಾದ ಎಕ್ಕೆ ಗಿಡಕ್ಕೆ ದಾರ, ಅರಿಶಿಣದ ಕೊಂಬನ್ನು ಕಟ್ಟಿದರೆ ಭಕ್ತಾದಿಗಳು ಅಂದುಕೊಂಡಂತಹ ಸಮಸ್ಯೆಗಳು, ಪರಿಹಾರವಾಗಿ ಅವರ ಹರಕೆಗಳು ಈಡೇರುತ್ತವೆಂಬ ನಂಬಿಕೆಯಿದೆ. ಹಾಗೆಯೇ ಊರಿನಲ್ಲಿ ಬಹುಕಾಲದವರೆಗೆ ಮಳೆಯಾಗದೆ ಬರಗಾಲ ಆವರಿಸಿದರೆ, ಹಾಗೂ ಇಲ್ಲಿನ ಜನರಿಗೆ ಅಥವಾ ಜಾನುವಾರುಗಳಿಗೆ ಸಾಂಕ್ರಾಮಿಕ ರೋಗ-ರುಜಿನುಗಳು ಕಾಣಿಸಿಕೊಂಡರೇ ನಗರ ದೇವತೆಯಾದ ದುರ್ಗಾದೇವಿಗೆ ವಿಶೇಷ ಪೂಜೆ ಸಲ್ಲಿಸಿ ಕುರುಹು ಕೇಳಿಸಿದರೆ ಪರಿಹಾರವಾಗುತ್ತದೆ. ಹಾಗೂ ಇಲ್ಲಿನ ಶಮೀವೃಕ್ಷಕ್ಕೆ ದಾರ, ಅರಿಶಿಣದ ಕೊಂಬನ್ನು ಕಟ್ಟಿದರೆ ಬೇಡಿಕೊಂಡಂತಹ ಹರಕೆಗಳು ಈಡೇರುತ್ತವೆಂಬ ನಂಬಿಕೆಗಳೂ ಇವೆ. ಇಲ್ಲಿನ ತೊಣಪೇ ಮಾರಮ್ಮ ದೇವಿಯ ಬಳಿ

ಕಷ್ಟ ದುಃಖಗಳ ಬಗ್ಗೆ ಭಕ್ತಿಯಿಂದ ತೋಡಿಕೊಂಡರೆ ದೇವಿಯು ಭಕ್ತಾದಿಗಳಿಗೆ ಹೂವನ್ನು ಕರುಣಿಸುವಳೆಂದು ಹೂ ಬೇಡುವ/ಕೇಳುವ ನಂಬಿಕೆಯಿದೆ.

**ಶಾಸನ ಶಿಲ್ಪಗಳ ಕುರಿತಾಗಿರುವ ನಂಬಿಕೆ**

ಕೇವಲ ದೇವರು, ದೇವಾಲಯಗಳ ಮೇಲಷ್ಟೇ ಅಲ್ಲದೇ ದೇವಾಲಯಗಳಲ್ಲಿರುವ ಶಿಲ್ಪಗಳು ಹಾಗೂ ಇಲ್ಲಿನ ಶಾಸನ ಶಿಲ್ಪಗಳ ಕುರಿತಾಗಿಯೂ ಕೆಲವೊಂದು ನಂಬಿಕೆಗಳಿವೆ. ಇಲ್ಲಿನ ದನಕರುಗಳಿಗೆ ಉಣ್ಣೆಯಾದರೆ ಹರಕೆ ಮಾಡಿಕೊಂಡು ಕೋತಲಗೊಂದಿಯ ಬಳಿಯಿರುವ ಮೂಗು ಬಸಪ್ಪನಿಗೆ ಹೋಳಿಗೆ ಹಚ್ಚಡ ಹೊದಿಸಿ ಪೂಜೆ ಮಾಡಿದರೆ, ಉಣ್ಣೆ ಕಡಿಮೆಯಾಗುತ್ತದೆಂಬ ನಂಬಿಕೆಯಿದೆ.[೨೪] ಆದರೆ ಪ್ರಸ್ತುತ ಇಲ್ಲಿ ಯಾವುದೇ ರೀತಿಯ ಬಸಪ್ಪನ ಗುಡಿಯಾಗಲೀ ಅಥವಾ ವಿಗ್ರಹವಾಗಲೀ ಇಲ್ಲ. ಬದಲಾಗಿ ಇಲ್ಲಿ ನಾಲ್ಕಾರು ಗುಂಡು ಕಲ್ಲುಗಳು ಮತ್ತು ದೊಡ್ಡದಾದ ತಲೆಯಾಕಾರದ ಕಲ್ಲುಗಳಿರುವುದು ಕಂಡು ಬಂದಿದೆ. ಹಾಗೆಯೇ ಪ್ರಸವ ವೇದನೆಯಿಂದ ನರಳುತ್ತಿರುವ ಗರ್ಭಿಣಿ ಸ್ತ್ರೀಯರು ಬೆಟ್ಟದ ಮೇಲಿನ ಶಿವಾಲಯದ ಬಳಿಯಿರುವ ನಂದಿಯನ್ನು ಪೂಜಿಸಿ ಪೂರ್ವಾಭಿಮುಖವಾಗಿ ತಿರುಗಿಸಿದರೆ, ಸುಸೂತ್ರವಾಗಿ ಹೆರಿಗೆಯಾಗುತ್ತದೆ. ಆನಂತರ ನಂದಿಗೆ ಪೂಜೆ ಸಲ್ಲಿಸಿ ಮೂಲ ದಿಕ್ಕಿಗೆ ತಿರುಗಿಸಬೇಕೆಂಬ ನಂಬಿಕೆ ಇಲ್ಲಿನವರಲ್ಲಿ ಇಂದಿಗೂ ಜೀವಂತವಾಗಿದೆ. ಊರಿನ ನಗರ ದೇವತೆಯಾದ ಶ್ರೀದುರ್ಗಾದೇವಿಯು ಮೊಸರಿನ ಗಡಿಗೆಯಲ್ಲಿ ಒಡಮೂಡಿದವಳೆಂಬ ನಂಬಿಕೆ ಜನಪದೀಯವಾಗಿ ಉಳಿದು ಬಂದಿದೆ.[೨೫] ಇಲ್ಲಿನ ಹೊರಮಠದಲ್ಲಿರುವ ವೀರಗಲ್ಲಿನ ವೀರನು ಮಳೆ, ಗಾಳಿ, ಬಿಸಿಲು ಎನ್ನದೇ ಹಗಲಿರುಳು ಮಠವನ್ನು ಕಾಯುತ್ತಿರುತ್ತಾನೆಂಬ ನಂಬಿಕೆಯಿದೆ.[೨೬]

**ಜಾತ್ರೆ–ಹಬ್ಬಹರಿದಿನಗಳ ಕುರಿತಾದ ನಂಬಿಕೆಗಳು**

ಇಲ್ಲಿ ಆಚರಣೆಯಲ್ಲಿರುವ ಜಾತ್ರೆ ಹಬ್ಬ–ಹರಿದಿನಗಳ ಬಗ್ಗೆಯೂ ಸಾಕಷ್ಟು ನಂಬಿಕೆಗಳಿರುವುದು ಕಂಡು ಬಂದಿವೆ. ಪ್ರತಿ ಮೂರು ವರ್ಷಗಳಿಗೊಮ್ಮೆ ಆಚರಿಸುವ ಸಣ್ಣ ಜಾತ್ರೆಗೆ ಸಂಬಂಧಿಸಿದಂತೆ ಬೆಟ್ಟದ ಮೇಲಿರುವ ಬೈರವೇಶ್ವರನು ಬಲಗಡೆಯಿಂದ ಹೂವನ್ನು ನೀಡಿದರೆ ಊರಿಗೆ ಬರಲು ಒಪ್ಪಿದ್ದಾನೆಂದು ಎಡಗಡೆಯಿಂದ ಹೂವನ್ನು ಕರುಣಿಸಿದರೆ ಊರಿಗೆ ಬರಲು ಇತನಿಗೆ ಇಷ್ಟವಿಲ್ಲ ಎಂಬ ಸೂಚನೆಯನ್ನು ನೀಡುವನೆಂಬ ನಂಬಿಕೆಯಿದೆ. ಹಾಗೆಯೇ ಇಲ್ಲಿ ಆಚರಿಸುವ ಮೊಹರಂ ಹಬ್ಬಕ್ಕೆ ಸಂಬಂಧಿಸಿದಂತೆ ಮೊಹರಂ ತಿಂಗಳು ಕೆಟ್ಟದೆಂದು, ಈ ತಿಂಗಳಲ್ಲಿ ಮದುವೆ, ನಾಮಕರಣದಂತಹ, ಯಾವುದೇ ಶುಭಕಾರ್ಯಗಳನ್ನು ಮಾಡಬಾರದೆಂಬ ನಂಬಿಕೆಗಳಿವೆ. ಹಾಗೆಯೇ ಪ್ರತಿವರ್ಷ ಬರುವ ನವರಾತ್ರಿಯಲ್ಲಿ ಬನ್ನಿ ಮರದ ಪೂಜೆಯನ್ನು ಮಾಡಿದ ಸ್ತ್ರೀಯರಿಗೆ ಕಂಕಣಫಲ ಕೂಡಿಬರುತ್ತದೆ. ಜೊತೆಗೆ ಸಂತಾನ ಭಾಗ್ಯವು ದೊರೆತು ಉತ್ತಮ ಆರೋಗ್ಯ, ಸುಖ–ಸಂತೋಷದ ಜೀವನ ಲಭಿಸಿ ಒಳ್ಳೆಯದಾಗುತ್ತದೆಂಬ ನಂಬಿಕೆ ಇದೆ. ಇಲ್ಲಿ ಆಚರಿಸುವ ಕಾರ ಹುಣ್ಣಿವೆಯ

ಹಬ್ಬದಲ್ಲಿ ಎತ್ತುಗಳಿಗಾಗಿ ಏರ್ಪಡಿಸುವ ಓಟದ ಸ್ಪರ್ಧೆಯ ಕೊನೆಯಲ್ಲಿ ಕರಿ ಹರಿಯುವಾಗ ಸ್ಪರ್ಧೆಯಲ್ಲಿ ಜಯಗಳಿಸಿದ ಎತ್ತುಗಳ ಓಟದಿಂದ ವರ್ಷದ ಹಿಂಗಾರು ಮುಂಗಾರಿನ ಮಳೆ-ಬೆಳೆಗಳ ಭವಿಷ್ಯವನ್ನು ಲೆಕ್ಕ ಹಾಕುವಂತಹ ನಂಬಿಕೆ ರೈತಾಪಿ ವರ್ಗದವರಲ್ಲಿದೆ.

ಒಟ್ಟಾರೆಯಾಗಿ ಇಲ್ಲಿನ ನಂಬಿಕೆಗಳು ಯಾವುದೋ ಒಂದು ವಿಷಯಕ್ಕೆ ಸಂಬಂದಿಸಿರದೇ ದೇವರು, ಮಳೆ-ಬೆಳೆ ಆರೋಗ್ಯ, ಉದ್ಯೋಗ, ಕಂಕಣಫಲ, ಸಂತಾನಫಲ, ಹಬ್ಬ-ಜಾತ್ರೆ, ಉತ್ಸವ ಮೂರ್ತಿಶಿಲ್ಪ ಎಂಬ ಮೊದಲಾದ ಹತ್ತಾರು ವಿಷಯಗಳಿಗೆ ಸಂಬಂಧಿಸಿದಂತೆ ಕಂಡು ಬಂದಿವೆ. ಇಲ್ಲಿನ ನಂಬಿಕೆಗಳು ಶೈವ, ವೈಷ್ಣವ ಮತ್ತು ಶಾಕ್ತೆಯ ಪರಂಪರೆಗಳಲ್ಲಿ ಕಂಡು ಬಂದರೂ ವೈಷ್ಣವ ಮತಧರ್ಮಕ್ಕೆ ಸಂಬಂಧಿಸಿದಂತಹ ದೇವಾಲಯಗಳ ಮೇಲೆಯೇ ಹೆಚ್ಚಾಗಿ ಬೆಳೆದು ಬಂದಿವೆ ಎನ್ನಲಾಗಿದೆ.

**ಆಚರಣೆಗಳು**

ಮಾನವನ ಜೀವನದಲ್ಲಿ ನಂಬಿಕೆಗಳಷ್ಟೇ ಪ್ರಮುಖವಾದವುಗಳೆಂದರೆ ಆಚರಣೆಗಳಾಗಿವೆ. ನಂಬಿಕೆಗಳು ಹುಟ್ಟಿಕೊಂಡಿದಂದಿನಿಂದಲೇ ಅವುಗಳ ಜೊತೆಜೊತೆಯಲ್ಲಿಯೇ ಆಚರಣೆಗಳೂ ಸಹ ರೂಢಿಗತವಾಗಿ, ಸಾಂಪ್ರದಾಯಿಕವಾಗಿ ಬೆಳೆದು ಬಂದಿವೆ. ಪ್ರಾಚೀನ ಕಾಲದಿಂದಲೂ ಪರಂಪರಾನುಗತವಾಗಿ ಬೆಳೆದು ಬಂದ ಆಚರಣೆಗಳು ಇಲ್ಲಿನ ಶೈವ, ವೈಷ್ಣವ, ಶಾಕ್ತೇಯ ದೇವಾಲಯಗಳ ಮಠ-ಮಂದಿರ, ಜಾತ್ರೆ-ಹಬ್ಬ-ಹರಿದಿನ, ಅಮಾವಾಸ್ಯೆ, ಹುಣ್ಣಿಮೆ ಎಂಬ ಮೊದಲಾದ ವಿಚಾರಗಳಿಗೆ ಸಂಬಂಧಿಸಿದಂತೆ ರೂಢಿಯಲ್ಲಿವೆ.

**ಶೈವ ದೇವಾಲಯಗಳಲ್ಲಿನ ಆಚರಣೆಗಳು.**

ಶೈವಮತಕ್ಕೆ ಸಂಬಂಧಿಸಿದಂತೆ ಇರುವ ಇಲ್ಲಿನ ಎಲ್ಲಾ ಶಿವಾಲಯಗಳಲ್ಲಿ ಪ್ರತಿನಿತ್ಯ ಪ್ರಾತಃಕಾಲ ಮತ್ತು ಸಂಜೆ ತಪ್ಪದಂತೆ ಪೂಜಾ ಕಾರ್ಯಗಳು ನಡೆಯುತ್ತವೆ. ಅಲ್ಲದೇ ಶಿವಾಲಯಗಳ ವಿಶೇಷ ವಾರ (ಸೋಮವಾರ)ದಂದು, ಅಮಾವಾಸ್ಯೆ, ಹುಣ್ಣಿಮೆಯ ದಿನಗಳಂದು ವಿಶೇಷ ಪೂಜೆಗಳೂ ಸಹ ನಡೆಯುತ್ತವೆ. ಅಷ್ಟೇ ಅಲ್ಲದೇ ಇಲ್ಲಿನ ಎಲ್ಲಾ ಶಿವಾಲಯಗಳಲ್ಲಿ ಪ್ರತಿ ಶಿವರಾತ್ರಿಯ ದಿನದಂದು ಜಾಗರಣೆಯನ್ನು ಆಚರಿಸುತ್ತಾರೆ. ಅಲ್ಲದೇ ಜಾಗರಣೆಯ ದಿನದಂದು ಎಲ್ಲಾ ಶೈವ ದೇವಾಲಯಗಳಲ್ಲಿ ಭಕ್ತಾದಿಗಳಿಗೆ ವಿಶೇಷವಾಗಿ ಪಾನಕ ಹಂಚುತ್ತಾರೆ. ಆದರೆ ಎನ್.ಎಂ.ಎಸ್. ಬಡಾವಣೆಯಲ್ಲಿರುವ ಈಶ್ವರನ ಗುಡಿಯಲ್ಲಿ ಮಾತ್ರ ಪಾನಕದ ಜೊತೆಗೆ ದಾಸೋಹದ ವ್ಯವಸ್ಥೆ ಇರುತ್ತದೆ ಅಲ್ಲದೇ ಇಲ್ಲಿ ಜಾಗರಣೆಯ ಸಲುವಾಗಿ ಬಡಾವಣೆಯ ಭಕ್ತಾದಿಗಳು ಮನೋರಂಜನೆಗಾಗಿ ಟಿ.ವಿ. ಹಾಕಿಕೊಂಡು ಶಿವನಿಗೆ ಸಂಬಂಧಿಸಿದ ಚಲನಚಿತ್ರಗಳನ್ನು ವೀಕ್ಷಿಸುತ್ತಾರೆ. ಬೆಟ್ಟದ ಮೇಲಿನ ಶಿವಾಲಯದಲ್ಲಿ ಮಾತ್ರ ಜಾಗರಣೆಯ ರಾತ್ರಿ ವಿಶೇಷವಾಗಿ ಭಜನೆ ನಡೆಯುತ್ತದೆ. ಅಲ್ಲದೇ ಇಲ್ಲಿ ಪ್ರತಿವರ್ಷ ಶ್ರಾವಣ ಮತ್ತು ಕಾರ್ತಿಕ ಮಾಸಗಳಲ್ಲಿ ಅಭಿಷೇಕಗಳೂ, ದೀಪೋತ್ಸವಗಳೆಂಬ ಮುಂತಾದ ಧಾರ್ಮಿಕ

ಆಚರಣೆಗಳು ನಡೆಯುತ್ತವೆ. ಮಾರ್ಕಂಡೇಯ ದೇವಾಲಯದಲ್ಲಿ ಪ್ರತಿನಿತ್ಯ ಪೂಜೆ ನಡೆಯುವುದರ ಜೊತೆಗೆ ಹಲವಾರು ವಾರ್ಷಿಕ ಆಚರಣೆಗಳನ್ನು ನಡೆಸಲಾಗುತ್ತದೆ. ಪ್ರತಿವರ್ಷ ಕಾರ್ತಿಕ ಮಾಸ ಶುದ್ಧ ಪಂಚಮಿಯ ದಿನದಂದು ಸ್ವಾಮಿಯ ವಿಗ್ರಹ ಪ್ರತಿಷ್ಠಾಪನೆಯ ದಿನವಾದ್ದರಿಂದ ವಾರ್ಷಿಕೋತ್ಸವವನ್ನು ನಡೆಸಿ ಊರಿನ ಪ್ರಮುಖ ಬೀದಿಗಳಲ್ಲಿ ದೇವರ ಪಲ್ಲಕ್ಕಿ ಉತ್ಸವ ನಡೆಯುತ್ತದೆ. ಅಲ್ಲದೇ ಈ ವಾರ್ಷಿಕೋತ್ಸವದ ದಿನದಂದು ಪದ್ಮಶಾಲೀಯ ಸಮಾಜವು ಇಲ್ಲಿ ಅನ್ನಸಂತರ್ಪಣೆ ಯನ್ನು ಏರ್ಪಡಿಸುತ್ತದೆ. ಪ್ರತಿವರ್ಷ ಮಹಾಶಿವ ರಾತ್ರಿಯ ಪುಣ್ಯದಿನದಂದು ಜಾಗರಣೆಯ ಕಾರ್ಯಕ್ರಮದ ಜೊತೆಗೆ ಶಿವರಾತ್ರಿಯ ಮಹಾತ್ಮೆಯ ಪುಣ್ಯ ಕಥಾ ಕಾಲಕ್ಷೇಪದಂತಹ ಧಾರ್ಮಿಕ ಚಟುವಟಿಕೆಗಳೂ ನಡೆಯುತ್ತವೆ. ಅಂದಿನ ಪೂಜಾ ಕಾರ್ಯಗಳಲ್ಲಿ ಭಾಗವಹಿಸಿದ ಭಕ್ತಾದಿಗಳಿಗೆ ತೀರ್ಥ, ಪ್ರಸಾದ ವಿನಿಯೋಗವು ಕೊಡುವಂತಹದ್ದು ರೂಢಿಯಲ್ಲಿದೆ. ಪ್ರತಿವರ್ಷ ಮಾಘಶುದ್ಧ ತದಿಗೆಯ ದಿನದಂದು ಶ್ರೀ ಮಾರ್ಕಂಡೇಯ ಜಯಂತಿಯನ್ನು ಮತ್ತು ವೈಶಾಖ ಶುದ್ದ ಪಂಚಮಿಯಂದು ಶ್ರೀ ಭಾವನಾ ಋಷಿ ಜಯಂತಿಯನ್ನು ಅದ್ದೂರಿಯಾಗಿ ಆಚರಿಸಲಾಗಿದೆ. ಈ ಎಲ್ಲಾ ಆಚರಣೆಗಳ ಜೊತೆಯಲ್ಲಿಯೇ ಇಲ್ಲಿ ನಡೆಯುವಂತಹ ಮತ್ತೊಂದು ಪ್ರಮುಖ ವಾರ್ಷಿಕೋತ್ಸವ ಎಂದರೇ ಶ್ರೀ ಪದ್ಮಾವತಿ ಕಲ್ಯಾಣವಾಗಿದೆ. ಪ್ರತಿವರ್ಷ ವೈಶಾಖ ಶುದ್ದ ದಶಮಿಯ ದಿನದಂದು ಶ್ರೀ ಪದ್ಮಾವತಿ ದೇವಿಯನ್ನು ಪದ್ಮಶಾಲೀ ಕುಲಭಾಂಧವರು ಗುಡಿಯಿಂದ ಮಂಗಳ ವಾದ್ಯಗಳೊಂದಿಗೆ ಕಳಸಕನ್ನಡಿ ಹಿಡಿದ ಸುಮಂಗಲೆಯರೊಡನೆ ಊರಿನ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಹೋಗಿ ಶ್ರೀವೆಂಕಟರಮಣ ಸ್ವಾಮಿಗೆ ಶ್ರೀ ಪದ್ಮಾವತಿ ದೇವಿಯೊಂದಿಗೆ ವಿವಾಹ ಮಾಡುತ್ತಾರೆ.[೨೭] ಈ ವಿವಾಹ ಕಾರ್ಯಕ್ರಮವನ್ನು ಪದ್ಮಶಾಲೀ ಜನಾಂಗದ ಮುಖಂಡರು ಹಾಗೂ ಜೋಡಿದಾರಿರಾದ ವಂಶಸ್ಥರು ನಡೆಸಿಕೊಂಡು ಬರುತ್ತಾರೆ ಹೆಣ್ಣಿನ ಕಡೆಯವರಾದ ಪದ್ಮಶಾಲೀಯ ಜನಾಂಗದವರು ತಮ್ಮ ಸಮಾಜದವತಿಯಿಂದ ಕುಲಬಾಂಧವರ ಹಾಗೂ ಸಮಾಜದ ಬಡವರ ಸರಳ ಸಾಮೂಹಿಕ ವಿವಾಹ ಮಹೋತ್ಸವಗಳನ್ನು ಏರ್ಪಡುತ್ತವೆ. ಪದ್ಮಾವತಿದೇವಿ ಮತ್ತು ವೆಂಕಟರಮಣರ ಕಲ್ಯಾಣೋತ್ಸವದಲ್ಲಿ ಭಾಗಿಯಾದ ಊರಿನ ಎಲ್ಲಾ ಸದ್ಭಕ್ತರಿಗೆ ಅಂದು ಅನ್ನಸಂತರ್ಪಣೆಯನ್ನೂ ಸಹ ಹಮ್ಮಿಕೊಳ್ಳಲಾಗುತ್ತದೆ.

ಒಟ್ಟಾರೆಯಾಗಿ ಇಲ್ಲಿ ನೆಲೆಸಿರುವಂತಹ ಎಲ್ಲಾ ಶೈವ ದೇವಾಲಯಗಳೆಲ್ಲಾ ಪೂಜಾರ್ಹ ಗೊಳಗಾಗಿ ದಿನಕ್ಕೆರಡು ಬಾರಿ ಪೂಜೆ, ವಿಶೇಷ ಪೂಜೆ ಹಾಗೂ ಹಲವಾರು ವಾರ್ಷಿಕೋತ್ಸವಗಳನ್ನು ಆಚರಣೆಯಲ್ಲಿ ರೂಢಿಸಿಕೊಂಡು ಬಂದಿವೆ. ಎಲ್ಲಾ ದೇವಾಲಯಗಳಿಗೆ ಪ್ರತ್ಯೇಕ ಅರ್ಚಕರನ್ನು ನೇಮಿಸಲಾಗಿದೆ. ಆದರೆ ಎನ್.ಎಂ.ಎಸ್.ಬಡಾವಣೆಯ ಈಶ್ವರ ಗುಡಿಗೆ ಮಾತ್ರ ಯಾವುದೇ ರೀತಿಯಲ್ಲಿ ಅರ್ಚಕರು ಇಲ್ಲದ ಕಾರಣದಿಂದ ಬಡಾವಣೆಯಲ್ಲಿನ ಜನರೇ ಪ್ರತಿನಿತ್ಯ ಪೂಜೆ ಪುನಸ್ಕಾರ ಮಾಡಿಕೊಂಡು ಬರುತ್ತಿದ್ದು ಶಿವರಾತ್ರಿಯ ದಿನದಂದು ಮಾತ್ರ ಯಾರಾದರೂ ಅರ್ಚಕರನ್ನು ಕರೆಸಿಕೊಂಡು ಪೂಜಿಸುವ ಪರಂಪರೆ ಇದೆ.

## ವೈಷ್ಣವ ದೇವಾಲಯಗಳಲ್ಲಿನ ಆಚರಣೆಗಳು

ಶೈವ ದೇವಾಲಯಗಳಲ್ಲಿ ನಡೆದು ಬರುವಂತೆ ವೈಷ್ಣವ ದೇವಾಲಯಗಳಲ್ಲಿಯೂ ಸಹದಿನನಿತ್ಯದ ಪೂಜೆಯನ್ನೊಳಗೊಂಡಂತೆ ಹಲವಾರು ವಾರ್ಷಿಕೋತ್ಸವದ ಆಚರಣೆಗಳು ರೂಢಿಯಲ್ಲಿದೆ. ಈ ಮತಧರ್ಮಕ್ಕೆ ಸಂಬಂಧಿಸಿದಂತೆ ಇಲ್ಲಿ ಆಂಜಿನೇಯ ದೇವಾಲಯಗಳೇ ಹೆಚ್ಚಾಗಿ ಕಂಡುಬರುತ್ತವೆ. ಕೋಟೆ ಮೇಲಿರುವ ಆಂಜಿನೇಯನನ್ನು ಹೊರತು ಪಡಿಸಿದರೆ ಈ ಪಂಥದ ಎಲ್ಲಾ ದೇವಾಲಯಗಳಲ್ಲಿ ಚಾಚೂ ತಪ್ಪದೇ ದಿನಕ್ಕೆ ಎರಡು ಬಾರಿ ಪೂಜೆ ಹಾಗೂ ವಾರದ ವಿಶೇಷ ದಿನದಂದು (ಶನಿವಾರ) ಹಬ್ಬ-ಹರಿದಿನ, ಜಾತ್ರೆ-ಉತ್ಸವ, ಅಮಾವಾಸ್ಯೆ, ಹುಣ್ಣಿಮೆಯ ದಿನಗಳಂದು ವಿಶೇಷ ಪೂಜಾ ಕಾರ್ಯಗಳು ನಡೆಯುತ್ತವೆ. ಇಲ್ಲಿನ ಬಯಲು ಆಂಜಿನೇಯ ಗುಡಿಯಲ್ಲಿ ಪ್ರತಿ ಶ್ರಾವಣ ಮತ್ತು ಕಾರ್ತಿಕ ಮಾಸಗಳನ್ನು ವಿಶೇಷವಾಗಿ ಆಚರಿಸಲಾಗಿದೆ. ಪ್ರತಿ ಕಾರ್ತಿಕ ಮಾಸದಲ್ಲಿ ಮಾತ್ರ ದೀಪೋತ್ಸವ (೧೦೧) ಇರುತ್ತದೆ ಅಂದು ವಿಶೇಷವಾಗಿ ಹೆಣ್ಣು ಮಕ್ಕಳೇ ಹೆಚ್ಚಾಗಿ ದೀಪಗಳನ್ನು ಬೆಳಗಿಸುತ್ತಾರೆ. ಶೈವ ಪರಂಪರೆಯಲ್ಲಿನ ಶಿವರಾತ್ರಿಯ ಜಾಗರಣೆಯನ್ನು ಇಲ್ಲಿನ ವೀರಾಂಜನೇಯ ಮತ್ತು ಜನ್ನಿಗೆ ಪಾಲು ಆಂಜಿನೇಯ ಗುಡಿಗಳಲ್ಲಿಯೂ ಆಚರಿಸಲಾಗಿದೆ. ಜನ್ನಿಗೆ ಪಾಲು ಆಂಜಿನೇಯ ಗುಡಿಯಲ್ಲಿ ವರ್ಷದ ಪೆಬ್ರುವರಿ ತಿಂಗಳ ಹುಣ್ಣಿಮೆಯ ದಿನದಂದು ಅರ್ಚಕರಾದ ದಾಸರ ಹಟ್ಟಿಯ ತಿಮ್ಮಪ್ಪರವರು ದೇವಾಲಯವನ್ನು ಸ್ವಚ್ಛಗೋಳಿಸಿ ವಿಶೇಷವಾಗಿ ಕಾಳು ಪದಾರ್ಥಗಳಿಂದ ಆಹಾರವನ್ನು ಸಿದ್ಧಪಡಿಸಿ ದೇವರಿಗೆ ನೈವೇದ್ಯ ಮಾಡಿ ನಂತರ ಬಂದಂತಹ ಭಕ್ತರೊಂದಿಗೆ ತಾವು ಹಾಗೂ ತಮ್ಮ ವಂಶದವರು ಭೋಜನವನ್ನು ಸವಿಯುವುದರ ಮೂಲಕ ಗುಗ್ಗರಿ ಹಬ್ಬವನ್ನು ಆಚರಿಸಿ, ಆ ದಿನ ರಾತ್ರಿ ಜಾಗರಣೆ ನಡೆಸುತ್ತಾರೆ. ವೀರಾಂಜನೇಯನಲ್ಲಿ ಜಾಗರಣೆಯ ನಂತರದ ದಿನ ದಾಸೋಹದ ವ್ಯವಸ್ಥೆಯನ್ನು ಮಾಡುವರು. ಅಷ್ಟೇ ಅಲ್ಲದೇ ಜನ್ನಿಗೆ ಪಾಲು ಆಂಜಿನೇಯ ಗುಡಿಯಲ್ಲಿ ದೇವರಿಗೆ ಪ್ರತಿ ಶನಿವಾರ ಭಕ್ತರಿಂದ ಎಲೆಪೂಜೆ, ವಿಶೇಷವಾಗಿ ಆಚರಣೆಯಲ್ಲಿದೆ. ಶ್ರಾವಣ ಮಾಸದ ಮೊದಲನೇ ಶನಿವಾರದ ದಿನದಂದು ಸ್ವಕುಳಸಾಳಿ ಸಮಾಜದವರಿಂದ ಅನ್ನಸಂತರ್ಪಣೆ ಇರುತ್ತದೆ. ಇವುಗಳ ಜೊತೆಗೆ ಭಕ್ತಾದಿಗಳಿಂದ ಪರುವು, ಮಕ್ಕಳಿಗೆ ಜವಳ ತೆಗೆಸುವ, ನಾಮಕರಣ ವಿವಾಹ ಎಂಬ ಮುಂತಾದ ಧಾರ್ಮಿಕ ಕಾರ್ಯಕ್ರಮಗಳನ್ನು ನಡೆಸಿಕೊಂಡೋಗುವರು.

ಪೆನ್ನೋಬಳಸ್ವಾಮಿ ಗುಡಿಯಲ್ಲಿ ಪ್ರತಿ ಆಷಾಢ ಮತ್ತು ಶ್ರಾವಣ ಮಾಸಗಳನ್ನು ವಿಶೇಷವಾಗಿ ಆಚರಿಸುತ್ತಾರೆ ಪಾಂಡುರಂಗ ದೇವಾಲಯದಲ್ಲಿ ನಿತ್ಯದ ಪೂಜೆಯೊಂದಿಗೆ ಅಮಾವಾಸೆ, ಹುಣ್ಣಿಮೆ ವಿಶೇಷವಾರ (ಬುಧವಾರ)ದ ದಿನಗಳಂದು ವಿಶೇಷ ಪೂಜೆಗಳ ಜೊತೆಯಲ್ಲಿ ಹಲವಾರು ವಾರ್ಷಿಕ ಉತ್ಸವಗಳನ್ನು ಸಹ ಆಚರಿಸಲಾಗಿದೆ. ಕಾರ್ತಿಕ ಮಾಸದ ಪ್ರತಿದಿನ ದೀಪೋತ್ಸವ, ಕಾರ್ಯ ಆಚರಣೆಯಲ್ಲಿದೆ. ಕಾರ್ತಿಕ ಶುದ್ಧ ಏಕಾದಶಿ, ವೈಕುಂಠ ಏಕಾದಶಿ, ಆಷಾಡ ಶುದ್ದ ಏಕಾದಶಿಗಳಂದು ವಿಶೇಷ ಪೂಜೆಯ ಜೊತೆಗೆ ಭಕ್ತಾದಿಗಳಿಗೆ ಸ್ವಾಮಿಯ ಪಾದದರ್ಶನವಿರುತ್ತದೆ. ಆಷಾಡ ಶುದ್ಧ

ಏಕಾದಶಿಯ ದಿನದಂದು ಮಾತ್ರ ಪಾದದರ್ಶನದ ಜೊತೆಗೆ ಪಲ್ಲಕ್ಕಿ ಉತ್ಸವ ನಡೆಸುವ ಆಚರಣೆ ಮೊದಲಿನಿಂದಲೂ ಇದೆ. ಆದರೆ ಪ್ರಸ್ತುತ ವರ್ಷದಿಂದ ರಥೋತ್ಸವ ನಡೆಸುವ (ಸ್ವಕುಳ ಸಾಳಿ ಸಮಾಜ) ಕಾರ್ಯದಲ್ಲಿ ಸಿದ್ಧಗೊಂಡಿದೆ. ಅಲ್ಲದೇ ಪ್ರತಿ ಶ್ರಾವಣ ಮಾಸದ ಶುದ್ದ ತ್ರಯೋದಶಿಯ ದಿನದಂದು ಶ್ರೀ ಜೀವೇಶ್ವರ ಸ್ವಾಮಿಯ ಜಯಂತೋತ್ಸವದ ಜೊತೆಗೆ ಪಾಂಡುರಂಗ ವಿಠಲನ ವಿಗ್ರಹವನ್ನು ವೆಂಕಣ್ಣನ ಬಾವಿಯ ಬಳಿ ಗಂಗೆ ಪೂಜೆ ಮಾಡಿಕೊಂಡು, ವಾದ್ಯ ಮೇಳಗಳೊಂದಿಗೆ ಮೆರವಣಿಗೆ ಮಾಡುವರು. ಇದೇ ಮಾಸದ ಕೊನೆಯ ಶನಿವಾರದಂದು ನವಗ್ರಹ ಪೂಜೆ, ಪಂಚಾಮೃತಾಭಿಷೇಕ ಭಜನೆ ಹರಿಕಥೆಯ ಜೊತೆಗೆ ಶನಿಪುರಾಣದ ಪ್ರವಚನವಿರುತ್ತದೆ. ನವರಾತ್ರಿಯಲ್ಲಿ ದೇವಿ ಪರಾಯಣವನ್ನು ನಡೆಸುವ ಆಚರಣೆಯೂ ಸಹ ಈ ದೇವಾಲಯದಲ್ಲಿದೆ.[೨೮]

ವೆಂಟಕರಮಣ ದೇವಾಲಯದಲ್ಲಿ ಪ್ರತಿ ವರ್ಷದ ವೈಶಾಖ ಶುದ್ದ ದಶಮಿಯ ದಿನದಂದು ಶ್ರೀನಿವಾಸ ಕಲ್ಯಾಣೋತ್ಸವವನ್ನು ಆಚರಿಸಲಾಗಿದೆ. ಅಂದರೆ ಈ ದಿನದಂದು ಇಲ್ಲಿನ ಪದ್ಮಶಾಲಿ ಜನಾಂಗದವರು ತಮ್ಮ ಕುಲದ ಹೆಣ್ಣು ಮಗಳಾದ ಪದ್ಮಾವತಿ ದೇವಿಯನ್ನು ಬ್ರಾಹ್ಮಣ ಜನಾಂಗದ ಶ್ರೀನಿವಾಸನಿಗೆ ದಾರೆ ಎರೆದು ಕಲ್ಯಾಣ ಕಾರ್ಯವನ್ನು ನಡೆಸುವರು. ಈ ವಿವಾಹ ಮಹೋತ್ಸವದ ನಿಶ್ಚಿತಾರ್ಥದಕಾರ್ಯ ಮಾರ್ಕಂಡೇಯ ದೇಗುಲದಲ್ಲಿ ನಡೆಸಿ ವಿವಾಹ ಕಾರ್ಯವನ್ನು ವೆಂಕಟೇಶ್ವರ ದೇವಾಲಯದಲ್ಲಿ ನೆರವೇರಿಸುವಂತಹ ಆಚರಣೆ ಕಳೆದ ಹದಿನಾರು ವರ್ಷಗಳಿಂದ ರೂಢಿಗೆ ತಂದಿದ್ದಾರೆ. ಶ್ರಾವಣ ಮಾಸದ ಪ್ರತಿಶನಿವಾರಗಳಂದು ವಿಶೇಷ ಪೂಜೆ ನಡೆಸುವುದರ ಜೊತೆಗೆ ನವರಾತ್ರಿಯಲ್ಲಿ ದಸರ ಉತ್ಸವದ ಜೊತೆಗೆ ನಗರ ದೇವತೆಯಾದ ದುರ್ಗಾದೇವಿಯೊಡನೆ ಬನ್ನಿ ಪೂಜೆಗೆ ಹೋಗಿ ಅಂದು ಪಟ್ಟಣದಲ್ಲಿ ವೆಂಕಟೇಶ್ವರನ ಮೆರವಣಿಗೆಯನ್ನು ನಡೆಸುವಂತಹ ಆಚರಣೆಯೂ ಸಹ ಕಂಡು ಬಂದಿದೆ.

### ಶಾಕ್ತೇಯ ದೇವಾಲಯಗಳಲ್ಲಿನ ಆಚರಣೆಗಳು

ಶಾಕ್ತೆಯ ದೇವಾಲಯಗಳಲ್ಲಿಯೂ ಶೈವ, ವೈಷ್ಣವಗಳಲ್ಲಿರುವಂತೆ ಕೆಲವೊಂದು ಆಚರಣೆಗಳು ಇಂದಿಗೂ ಜೀವಂತವಾಗಿ ರೂಢಿಯಲ್ಲಿನ ನಿತ್ಯಪೂಜೆಗೆ ಒಳಗಾಗಿರುವ ಈ ಗುಡಿಗಳಲ್ಲಿ ಮಂಗಳವಾರ, ಶುಕ್ರವಾರಗಳೆಂಬ ವಿಶೇಷ ದಿನಗಳಂದು ಹಾಗೂ ಅಮಾವಾಸ್ಯೆ, ಹುಣ್ಣಿವೆ, ಹಬ್ಬ-ಹರಿದಿನಗಳಲ್ಲಿ ವಿಶೇಷ ಪೂಜೆಗಳು ನಡೆಯುವಂತಹದ್ದನ್ನು ಕಾಣುವುದರ ಜೊತೆಗೆ ಹಲವಾರು ವಾರ್ಷಿಕ ಉತ್ಸವಾಚರಣೆಗಳೆಂಬ ಧಾರ್ಮಿಕ ಕಾರ್ಯಕ್ರಮಗಳು ನಡೆಯುತ್ತವೆ. ಪ್ರತಿಕಾರ್ತಿಕ ಮಾಸದಲ್ಲಿ ತೊಣಪೆ ಮಾರಮ್ಮನಬಳಿ ಹೋಮ ನಡೆಸಿದರೆ, ದುರ್ಗಾದೇವಿಗುಡಿಯಲ್ಲಿ ಈ ಮಾಸದ ಎಲ್ಲಾ ಮಂಗಳವಾರ ಮತ್ತು ಶುಕ್ರವಾರಗಳಂದು ದೀಪೋತ್ಸವ ನಡೆಸುವುದರ ಮೂಲಕ ಕಾರ್ತಿಕೋತ್ಸವವನ್ನು ಆಚರಿಸುವರು. ಹಾಗೆಯೇ ಹುಲಿಮರಿ ತಿಪ್ಪೆಯ ಮಲಿಯಮ್ಮನ ಬಳಿಯೂ ಕಾರ್ತಿಕೋತ್ಸವದ ಆಚರಣೆ ನಡೆಯುತ್ತದೆ. ಪ್ರತಿ ಶಿವರಾತ್ರಿಯಂದು ತೊಣಪೆ ಮಾರಮ್ಮನ ಗುಡಿಯಲ್ಲಿ ಜಾಗರಣೆಯನ್ನು

ಆಚರಿಸುವರು. ಮಾಹೇಶ್ವರಿ ಗುಡಿಯ ದೇವಿಯ ಉತ್ಸವಮೂರ್ತಿಯನ್ನು ಮಂಗಳವಾದ್ಯಗಳೊಂದಿಗೆ ಗಂಗಾಪೂಜೆಗೆ ತೆಗೆದುಕೊಂಡು ಪೂಜೆಯನ್ನು ನೆರವೇರಿಸಿಕೊಂಡು ಬಂದ ನಂತರ ದೇವಿಯನ್ನು ಊರಿನಲ್ಲಿ ಮೆರವಣಿಗೆ ಮಾಡುವುದರ ಮೂಲಕ ಪ್ರತಿವರ್ಷ ಪ್ರತಿಷ್ಠಾಪನೋತ್ಸವವನ್ನು ಆಚರಿಸುವರು. ಹಾಗೆಯೇ ಈರಣ್ಣನ ಗುಡಿ ಎಂದು ಕರೆಯಲಾಗುವ ಕನಕನಹಟ್ಟಿಯ ಮಾರಮ್ಮನ ಮೂರ್ತಿಯನ್ನೂ ಸಹ ನೇರ್ಲೂಟದ ಬಳಿಗೆ ಮಂಗಳವಾದ್ಯಗಳೊಂದಿಗೆ ಕರೆದೊಯ್ದು ಗಂಗಾಪೂಜೆ ನೆರವೇರಿಸಿಕೊಂಡು ಹಟ್ಟಿಯ ಬೀದಿ ಬೀದಿಗಳಲ್ಲಿ ಮೆರವಣಿಗೆಯನ್ನು ಕೈಗೊಳ್ಳುವುದರ ಮೂಲಕ ಗುಡಿ ತುಂಬಿಸಿ ನಂತರದ ದಿನದಂದು ದಾಸೋಹ(ಅನ್ನಸಂತರ್ಪಣೆ)ಯನ್ನು ಏರ್ಪಡಿಸುವುದರ ಮೂಲಕ ಪ್ರತಿವರ್ಷ ಚಿಕ್ಕದಾದ ೩ ದಿನಗಳಕಾಲ ಹಬ್ಬವನ್ನು ಆಚರಿಸುವರು. ಈ ಹಟ್ಟಿಯಲ್ಲಿನ ಯಾದವ ಸಮುದಾಯ ದವರು ಮಾತ್ರ ಆಚರಿಸುವರು.

ಈ ಭಾಗದ ಗೌರಸಮುದ್ರ ಮಾರಮ್ಮನ ಜಾತ್ರೆ ನಡೆಯುವ ಸಮಯದಲ್ಲಿ ಗಾಳಿಮಾರಮ್ಮನ ಗುಡಿಯ ಹತ್ತಿರ ಗಂಗಾಪೂಜೆ, ಸಿಡಿಯಾಚರಣೆಗಳನ್ನು ನಡೆಸುವುದರ ಮೂಲಕ ದೇವಿಯ ವಾರ್ಷಿಕ ಜಾತ್ರೆಯನ್ನು ಹಾಗೂ ಪಟ್ಟಣದ ನುಂಕಪ್ಪನ ಜಾತ್ರೆಗೂ ಮುನ್ನ ಪ್ರತಿ ಮೂರುವರ್ಷಗಳಿಗೊಮ್ಮೆ ಮತ್ತೊಂದು ದೊಡ್ಡ ಜಾತ್ರೆಯನ್ನು ಸಹ ಇಲ್ಲಿ ಆಚರಿಸಲಾಗುತ್ತದೆ. ಹಾಗೆಯೇ ಆಷಾಢಮಾಸದ ಕೊನೆಯ ಮಂಗಳವಾರದಂದು ಇಲ್ಲಿನ ದುರ್ಗಾದೇವಿಯ ಆಲಯದ ಬಳಿ ಸಣ್ಣದಾದ ಜಾತ್ರೆಯನ್ನು ನಡೆಸಿ ಭಕ್ತಾದಿಗಳಿಗೆ ಅನ್ನ ಸಂತರ್ಪಣೆಯನ್ನು ಏರ್ಪಡಿಸುವಂತಹ ಆಚರಣೆಗಳನ್ನು ಇಂದಿಗೂ ಪಾಲಿಸಿಕೊಂಡು ಬರಲಾಗುತ್ತದೆ.

## ಹಬ್ಬ-ಹರಿದಿನಗಳಲ್ಲಿನ ಆಚರಣೆಗಳು

ಹಬ್ಬ ಹರಿದಿನಗಳಿಗೆ ಸಂಬಂಧಿಸಿದಂತೆಯೂ ಇಲ್ಲಿ ಹಲವಾರು ಆಚರಣೆಗಳು ರೂಢಿಯಲ್ಲಿವೆ. ಕಾರ್ತಿಕ ಮಾಸದಲ್ಲಿ ಬರುವ ದೀಪಾವಳಿಯಲ್ಲಿ ಪ್ರತಿಯೊಂದು ಮನೆಗಳಲ್ಲಿಯೂ ದೀಪಗಳನ್ನು ಬೆಳಗಿಸುವಂತಹ ಆಚರಣೆ ಇದೆ. ಹಾಗೆಯೇ ಪ್ರತಿ ನವರಾತ್ರಿಯ ಸಮಯದಲ್ಲಿ ಪ್ರಾರಂಭದ ಅಮಾವಾಸ್ಯೆಯ ದಿನದಿಂದ ೯ ದಿನಗಳವರೆಗೆ ಹೊಸದಾಗಿ ವಿವಾಹವಾದ ಮಹಿಳೆಯರು (ಸಂತಾನಫಲಕ್ಕಾಗಿ) ಹದಿಹರೆಯದ ವಯಸ್ಸಿನ ಕನ್ಯೆಯರು (ಕಂಕಣಫಲಕ್ಕಾಗಿ) ಬೆಳಗಿನ ಜಾವದ ಸಮಯದಲ್ಲಿ ಬನ್ನಿ ಮಹಾಕಾಳಿ ಮರದ ಪೂಜೆಯಲ್ಲಿ ತೊಡಗುವರು. ಇವರುಗಳು ಒಬ್ಬರು ಮಾಡುವ ಪೂಜೆಯನ್ನು ಮತ್ತೊಬ್ಬರು ನೋಡಬಾರದು, ತಾವು ಮಾಡುವ ಪೂಜೆ ಇತರರಿಗೆ ತಿಳಿಯಬಾರದೆಂದು ಬೆಳಗಿನ ಜಾವದ ೩ ಗಂಟೆಯಿಂದಲೇ ನಾ ಮೊದಲು ತಾ ಮೊದಲು ಎಂಬಂತೆ ಬೆಳಗಿನ ಜಾವ ೩ ಗಂಟೆಯಿಂದಲೇ (ಕೆಲವರು ಮಡಿಯಲ್ಲಿಯೇ) ನಿರಂತರವಾಗಿ ೯ ದಿನಗಳ ಕಾಲ ಚಾಚೂ ತಪ್ಪದೇ ಬನ್ನಿಮರವನ್ನು ಪೂಜಿಸುವಂತಹ ವ್ರತಾಚರಣೆ (ಸ್ತ್ರೀಯರಪ್ಪೆ) ಅಸ್ತಿತ್ವದಲ್ಲಿದೆ. ಇದೇ ದಸರಾ ಹಬ್ಬದ ಸಮಯದಲ್ಲಿ ದುರ್ಗಾದೇವಿಯ ಉತ್ಸವಮೂರ್ತಿಯನ್ನು

ಮಂಗಳವಾದ್ಯಗಳೊಂದಿಗೆ ಕಳಸ ಹಿಡಿದ ಸುಮಂಗಲೆಯರೊಡನೆ ಪುರದಲ್ಲಿನ ರಾಯದುರ್ಗ ರಸ್ತೆಯಲ್ಲಿರುವ ಬನ್ನಿ ಮಹಾಕಾಳಿ ಗುಡಿಯವರೆಗೆ ವೆಂಕಟರಮಣ ದೇವರನೊಡಗೂಡಿ ಹೋಗಿ ಬನ್ನಿ ಮುಡಿದು ಈ ಉತ್ಸವಾಮೂರ್ತಿಗಳನ್ನು ಪುರದ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಮಾಡುವಂತಹ ಆಚರಣೆಯೂ ಇಲ್ಲಿದೆ.

### ೪.೩. ಜಾತ್ರೆ-ಹಬ್ಬಹರಿದಿನಗಳು

ಮಾನವನು ತಾನು ಬದುಕುವ ಸಲುವಾಗಿ ತನ್ನ ಜೀವಿತಾವಧಿಯುದ್ದಕ್ಕೂ ಪ್ರಕೃತಿಯ ಮಡಿಲಲ್ಲಿ ನಿರಂತರವಾಗಿ ಶ್ರಮವಹಿಸಿ ದುಡಿಯುತ್ತಾನೆ. ವರ್ಷದ ಪ್ರತಿ ದಿನ ಪ್ರತಿಕ್ಷಣ ಕಾಯಕದಲ್ಲಿ ನಿರತನಾಗುವ ಈತನು ಸಂತೋಷದಾಯಕವಾದಂತಹ ಜೀವನವನ್ನು ನಡೆಸಬೇಕೆಂಬ ಉದ್ದೇಶದಿಂದ, ಸ್ವಲ್ಪ ವಿರಾಮವನ್ನು ಪಡೆದು ನೆಮ್ಮದಿಯ ಉಸಿರನ್ನು ಬಿಡುವ ಸಲುವಾಗಿ ವರ್ಷದಲ್ಲೊಮ್ಮೆ ತೇರು, ಜಾತ್ರೆ, ಉತ್ಸವ ಹಬ್ಬ-ಹರಿದಿನಗಳೆಂಬ ಮುಂತಾದ ಸಾಮೂಹಿಕ ಜನಪದೀಯ ಆಚರಣೆಗಳನ್ನು ಕಂಡು ಕೊಂಡಿದ್ದಾನೆ. ಈ ಆಚರಣೆಗಳ ಪಾಲನೆಯೊಂದಿಗೆ ಆತನು ತನ್ನೆಲ್ಲಾ ಕಷ್ಟ, ದುಃಖ, ನೋವು, ಸೋಲು, ಚಿಂತೆಗಳನ್ನೆಲ್ಲಾ ಮರೆತು ಆ ಒಂದು ಕ್ಷಣವಾದರೂ ಸುಖ, ಸಂತೋಷ, ನೆಮ್ಮದಿಯಿಂದ ಬದುಕುತ್ತಾನೆ. ಈ ಜಾತ್ರೆ-ಹಬ್ಬ-ಹರಿದಿನಗಳು ಯಾವ ಪ್ರದೇಶದಲ್ಲಿ ಆಚರಣೆಯಲ್ಲಿರುತ್ತವೆಯೋ ಆ ಪ್ರದೇಶದ ಜನತೆಯಲ್ಲಿ ತಕ್ಕ ಮಟ್ಟಿಗಾದರೂ ಪರಸ್ಪರ ಸಹಕಾರ, ಸಹಬಾಳ್ವೆ ಹಾಗೂ ಶಾಂತಿಯುತವಾದ ವ್ಯವಸ್ಥೆಯನ್ನುಂಟು ಮಾಡುತ್ತವೆ. ಹೀಗಾಗಿ ಒಂದು ಪ್ರದೇಶದ ಜನತೆಯಲ್ಲಿನ ಆಧ್ಯಾತ್ಮಿಕ ಮನೋಭಾವನೆ ಹಾಗೂ ಆ ಪ್ರದೇಶದ ಸಾಂಸ್ಕೃತಿಕ ಪರಂಪರೆಯನ್ನು ಅರಿಯಲು ನಮಗೆ ಅಲ್ಲಿ ಆಚರಣೆಯಲ್ಲಿರುವ ಜಾತ್ರೆ-ಹಬ್ಬ ಹರಿದಿನಗಳು ಪ್ರಮುಖವಾಗಿ ಸಹಕಾರಿಯಾಗುತ್ತವೆ. ಹಾಗಾಗೀ ಮೊಳಕಾಲ್ಮೂರು ಪಟ್ಟಣದಲ್ಲಿ ಆಚರಣೆಯಲ್ಲಿರುವ ಸಾಂಪ್ರದಾಯಿಕ ಜಾತ್ರೆ ಮತ್ತು ಹಬ್ಬ-ಹರಿದಿನಗಳ ಕುರಿತು ಈ ಕೆಳಗಿನಂತೆ ವಿವರಿಸಿದೆ.

#### ಜಾತ್ರೆಗಳು

ಭಾರತೀಯ ಹಿಂದೂ ಪರಂಪರೆಯ ಜನಪದೀಯ ಆಚರಣೆಗಳಲ್ಲಿ ಅತ್ಯಂತ ಆಕರ್ಷಣೀಯವಾಗಿರುವ ಜಾತ್ರೆಗಳು ಇಲ್ಲಿನ ಜನಪದೀಯರಿಗೆ ವ್ಯಾಪಾರ-ವ್ಯವಹಾರಗಳೊಂದಿಗೆ ಮನೋರಂಜನೆಯನ್ನು ನೀಡುತ್ತವೆ. ಭಾವೈಕ್ಯತೆಗೆ ನಾಂದಿಯನ್ನು ಹಾಡಿದ ಜಾತ್ರೆಗಳು ಕೇವಲ ಧರ್ಮದ ದೃಷ್ಟಿಯಿಂದಷ್ಟೇ ಅಲ್ಲದೇ ಸಮಾಜದ ದೃಷ್ಟಿಯಿಂದಲೂ ಪ್ರಮುಖವಾದವುಗಳಾಗಿವೆ. ಈ ನಿಟ್ಟಿನಲ್ಲಿ "ಜಾತ್ರೆ" ಎಂಬ ಪದದ ಮೂಲಾರ್ಥವನ್ನು ಗ್ರಹಿಸಿದರೆ ಇದು 'ಯಾತ್ರಾ' ಅಥವಾ 'ಯಾತ್ರೆ' ಎಂಬ ಸಂಸ್ಕೃತ ಪದದ ತದ್ಭವ ರೂಪದಿಂದ ಬಂದಿದೆ.[೨೯] ಈ ಅರ್ಥಕ್ಕೆ ಸಂಬಂಧಿಸಿದಂತೆ ನೋಡಿದರೆ ಜನರು ಪ್ರತಿವರ್ಷ ಕ್ಷೇತ್ರದರ್ಶನ ಮಾಡಲು 'ಯಾತ್ರೆ'ಗೆ ಹೋಗುವುದನ್ನು ಗಮನಿಸುತ್ತೇವೆ. ಹೀಗೆ ವರ್ಷದಲ್ಲೊಮ್ಮೆ ಯಾತ್ರೆಗೆ ಹೋದಂತಹ ಸ್ಥಳದಲ್ಲಿ ಜನರ ಸಮೂಹವೇ ಸೇರಿರುತ್ತದೆ.

ಬಹುಶಃ ಈ ಹಿನ್ನೆಲೆಯಿಂದಲೇ ಜನಪದರ ಬಾಯಲ್ಲಿ "ಜನ ಜನ ಸೇರಿದರೆ ಜಾತ್ರೆ" ಎಂಬ ಮಾತು/ನಾಣ್ಣುಡಿ ಹುಟ್ಟಿಕೊಂಡಿರಬೇಕು ಎನಿಸುತ್ತದೆ. ಹಾಗೆಯೇ ಜಾತ್ರೆಯನ್ನು ಯಾತ್ರೆ ಎಂಬ ಪದದ ಜೊತೆಗೆ 'ಪರೀಷೆ'; 'ಪರ್ಷೆ' ಎಂಬ ಪದಗಳಿಂದಲೂ ಸಹ ಗುರುತಿಸುತ್ತೇವೆ. ಈ ಪರೀಷೆ', 'ಪರ್ಷೆ' ಎಂಬ ಪದಗಳು ಸಂಸ್ಕೃತದ 'ಷರಿಯತ್' ಎಂಬ ಪದದಿಂದ ಬಂದಿವೆ.[೩೦] ಮತೀಯ ವಿಧಿಯಾಚರಣೆಯ ನೆಪದಲ್ಲಿ ದೈವವೊಂದರ ಸುತ್ತ ನಿರ್ದಿಷ್ಟ ದಿನಗಳಂದು ಸ್ತ್ರೀ–ಪುರುಷ ಎಂಬ ಲಿಂಗಭೇಧವಿಲ್ಲದೆ, ಬಡವ–ಶ್ರೀಮಂತ ಎಂಬ ತಾರತಮ್ಯವಿಲ್ಲದೆ, ವಿವಿಧ ಜಾತಿ ವರ್ಗಕ್ಕೆ ಸೇರಿದ ಜನ ಸಮುದಾಯಗಳು ಜಾತ್ರೆಯ ಸಮಯದಲ್ಲಿ ಬಂದು ಸೇರುತ್ತವೆ. ವರ್ಷದ ಯಾವುದೋ ಒಂದು ನಿರ್ದಿಷ್ಟ ಕಾಲದಲ್ಲಿ ನಡೆಯುವಂತಹ ಸಾಮಾಜಿಕ ಚಟುವಟಿಕೆಯೇ ಜಾತ್ರೆಯಾಗಿದೆ.[೩೧] ಈ ಜಾತ್ರೆಗಳನ್ನು ಅವು ನಡೆಯುವ ಊರು ಮತ್ತು ಉತ್ಸವ ನಡೆಯುವ ದೇವರ ಹೆಸರುಗಳಿಂದ ಕರೆಯುವ ಸಾಂಪ್ರದಾಯವಿದೆ. ವ್ಯಕ್ತಿಯ ವೈಯಕ್ತಿಕ ರಕ್ಷಣೆಗಿಂತ ಸಮಾಜದ ಹಿತರಕ್ಷಣೆಯೇ ಮುಖ್ಯವೆಂಬ ಉದ್ದೇಶವನ್ನು ಅಭಿವ್ಯಕ್ತಿಗೊಳಿಸುವ ಹಲವಾರು ಆಚರಣೆಗಳಲ್ಲಿ ಪ್ರಮುಖವಾಗಿರುವ ಜಾತ್ರೆಗಳು[೩೨] ಯಾವುದೋ ಒಂದು ಪ್ರದೇಶಕ್ಕೆ ಮಾತ್ರ ಸೀಮಿತವಾಗಿರದೇ ನಾಡಿನಾದ್ಯಂತ ನಡೆಯುತ್ತವೆ. ಹೀಗೆ ನಾಡಿನ ಉದ್ದಗಲಕ್ಕೂ ಆಚರಣೆಯಲ್ಲಿರುವ ಎಲ್ಲಾ ಜಾತ್ರೆಗಳ ಸ್ವರೂಪ, ಅವುಗಳ ಹಿನ್ನೆಲೆ ಒಂದೇ ರೀತಿಯಾಗಿರುವುದು ಕಂಡು ಬಂದರೂ, ಶಿಷ್ಟ ದೇವರುಗಳ ಸಮ್ಮುಖದಲ್ಲಿ ನಡೆಯುವ ಜಾತ್ರೆಗಳಿಗಿಂತ ಗ್ರಾಮೀಣರು ನಡೆಸುವ ಜಾತ್ರೆಗಳು ವಿಭಿನ್ನವಾಗಿರುತ್ತವೆ.[೩೩] ಈ ನಿಟ್ಟಿನಲ್ಲಿ ಊರಿನಲ್ಲಿ ನಡೆಯುವಂತಹ ಪ್ರಮುಖ ಜಾತ್ರೆಗಳ ಕುರಿತ ವಿವರ ಈ ಕೆಳಗಿನಂತಿದೆ.

## ನುಂಕಪ್ಪನ ಜಾತ್ರೆ

ಈ ಊರಿನಲ್ಲಿ ನಡೆಯುವ ಜಾತ್ರೆಗಳಲ್ಲಿ ನುಂಕಪ್ಪನ ಜಾತ್ರೆಯು ಪ್ರಮುಖವಾದುದಾಗಿದೆ. ಈ ಜಾತ್ರೆಯ ಉತ್ಸವವು ಊರಿನ ಆರಾಧ್ಯ ದೈವನಾದ ನುಂಕಪ್ಪ ದೇವರ ಹೆಸರಿನಲ್ಲಿ ನಡೆಯುವುದರಿಂದ ಇದನ್ನು 'ನುಂಕಪ್ಪನ ಜಾತ್ರೆ' ಎಂದು ಕರೆಯುವರು. ಈ ದೇವರು ಪಟ್ಟಣದಿಂದ ಮುರ್‍ನಾಲ್ಕು ಕಿ.ಮಿ. ದೂರದಲ್ಲಿರುವ ನುಂಕೀಮಲೆಯ ಬೆಟ್ಟಶ್ರೇಣಿ ಪ್ರದೇಶದಲ್ಲಿ ನೆಲೆನಿಂತಿದ್ದಾನೆ. ಆದರೂ ಪಟ್ಟಣದ ಸುತ್ತಮುತ್ತಲಿನ ಹಳ್ಳಿಗಳಿಗೆಲ್ಲಾ ಮಳೆ–ಬೆಳೆಗಳು ಸಮೃದ್ಧವಾದರೇ/ವಾದ್ದಲ್ಲಿ ಆ ವರ್ಷ ದೇವರನ್ನು ಪಟ್ಟಣಕ್ಕೆ ಕರೆದೊಯ್ಯುವ ಸಾಂಪ್ರದಾಯ ಅನಾದಿಕಾಲದಿಂದಲೂ ಇಲ್ಲಿ ಬೆಳೆದು ಬಂದಿದೆ. ಮೊಳಕಾಲ್ಮೂರುವಿನ ಜನತೆ ದೇವರಿಗೆ ಸಂಬಂಧಿಸಿದ ಸುತ್ತಮುತ್ತಲಿನ ೩೩ ಹಳ್ಳಿಗಳ ಭಕ್ತಾದಿಗಳ ಸಹಕಾರದಿಂದ ಪಟ್ಟಣಕ್ಕೆ ಸ್ವಾಮಿಯನ್ನು ಬರ ಮಾಡಿಕೊಂಡು ಮೂರು ದಿನಗಳ ಕಾಲ ಉತ್ಸವವನ್ನು ನಡೆಸುತ್ತಾರೆ. ಈ ರೀತಿಯ ಉತ್ಸವಾಚರಣೆಯನ್ನು ಇಲ್ಲಿನ ಜನರು 'ಸಣ್ಣಜಾತ್ರೆ' ಎಂಬ ಹೆಸರಿನಿಂದ ಕರೆಯುವರು. ಪ್ರತಿ ಮೂರು ವರ್ಷಗಳಿಗೊಮ್ಮೆ ಮಾಘಮಾಸದಲ್ಲಿ ನಡೆಯುವ ನುಂಕಪ್ಪನ ಜಾತ್ರೆಯ ಆಚರಣೆಯ ಬಗ್ಗೆ ತಲೆತಲೆಮಾರುಗಳಿಂದ ಅನುಸರಿಸಿಕೊಂಡು ಬಂದಂತಹ ನೀತಿ ನಿಯಮಗಳ ಅನುಸಾರವಾಗಿಯೇ ಇಂದಿಗೂ ನಡೆಸಿಕೊಂಡು ಬರುತ್ತಿದ್ದಾರೆ. ಸುತ್ತಮುತ್ತಲಿನ

ಮೂವತ್ತಮೂರು ಹಳ್ಳಿಗಳಿಗೆ ಈ ದೇವರು ಸಂಬಂಧಿಸಿದ್ದರೂ ದೇವರನ್ನು ತಂದು ಜಾತ್ರೆ ಮಾಡುವಂತಹ ಪರಿಪಾಠ ಮೊಳಕಾಲ್ಮೂರುನವರು ಮಾತ್ರ ರೂಢಿಸಿಕೊಂಡು ಬಂದಿದ್ದಾರೆ. ಆದರೂ ಜಾತ್ರೆಯ ವಿಷಯದಲ್ಲಿ ಎಲ್ಲಾ ಹಳ್ಳಿಯವರನ್ನು ಸೇರಿಸಿಕೊಂಡೇ ತಿರ್ಮಾನವನ್ನು ಕೈಗೊಳ್ಳುತ್ತಾರೆ.

ಜಾತ್ರೆಯನ್ನು ಮಾಡುವುದಕ್ಕೂ ಪೂರ್ವದಲ್ಲಿ ಮೊಳಕಾಲ್ಮೂರಿನ ಗೌಡರು, ನಾಯಕರು, ಹರಳಯ್ಯನವರು, ಬಣಗಾರರು, ಊರಿನ ಪ್ರಮುಖರು ಹಾಗೂ ಇದಕ್ಕೆ ಸಂಬಂಧಿಸಿದ ಕೊಮ್ಮನಪಟ್ಟಿ, ಹಾನಗಲ್, ಪೂಜಾರ ಹಟ್ಟಿ ಎಂಬ ಸುತ್ತಮುತ್ತಲಿನ ೩೩ ಹಳ್ಳಿಗಳ ಗೌಡರು, ಮುಖಂಡರು ಮತ್ತು ಅಸಂಖ್ಯಾತ ಭಕ್ತಾದಿಗಳೆಲ್ಲರೂ ಒಂದು ಕಡೆ ಸಭೆ ಸೇರಿ ದೇವರನ್ನು ಪಟ್ಟಣಕ್ಕೆ ಕರೆತರುವ ವಿಚಾರದ ಬಗ್ಗೆ ಮಾತನಾಡಿ, ಚರ್ಚಿಸಿ ಎಲ್ಲಾ ಗ್ರಾಮದವರು ಒಪ್ಪಿದ ಮೇಲೆ ಜಾತ್ರೆ ಮಾಡಬೇಕೆಂಬ ಅಂತಿಮ ತೀರ್ಮಾನವನ್ನು ಗ್ರಾಮಸ್ಥರ ಸಮ್ಮುಖದಲ್ಲಿಯೇ ತೆಗೆದುಕೊಂಡು ಕರ್ಪೂರದಮ್ಮನ ಬಳಿ ಹೋಗಿ ನಾಳೆ ಬೆಳಿಗ್ಗೆ ಬೆಟ್ಟದ ಮೇಲಿರುವ ನುಂಕಪ್ಪ ದೇವರ ಬಳಿಗೆ ಹೂ ಕೇಳಲು ಹೋಗುವುದಾಗೆಂದು ಡಂಗೂರವನ್ನು ಸಾರುತ್ತಾರೆ. ಮರುದಿನ ಎಲ್ಲಾ ಊರಿನ ಗೌಡ, ಗೊಂಚಿಗಾರ, ಪ್ರಮುಖ ವ್ಯಕ್ತಿಗಳನ್ನೊಳಗೊಂಡ ಭಕ್ತಾದಿಗಳು ಮೇಲ್ಜಾತಿ ಕೆಳಜಾತಿ ಎಂಬ ಬೇಧಭಾವವಿಲ್ಲದೇ ಎಲ್ಲರೂ ಸಾಮೂಹಿಕವಾಗಿ ತಪ್ಪಡಿ (ಹಲಗೆ)ಯನ್ನು ಬಡಿದುಕೊಂಡು ನುಂಕೀಮಲೆಯ ಬೆಟ್ಟಕ್ಕೆ ಹೋಗಿ, ಅಂದು ದೇವರಿಗೆ ವಿಶೇಷ ಪೂಜೆಯನ್ನು ಮಾಡಿಸಿ ದೇವರ ಮೈಗೆಲ್ಲಾ ಹೂಗಳನ್ನು ಅಂಟಿಸುತ್ತಾರೆ. ಆನಂತರ ಎಲ್ಲರೂ ಭಕ್ತಿಪೂರ್ವಕವಾಗಿ ಮನಸ್ಸಿನಲ್ಲಿ ದೇವರೇ ಹೂ ಕೊಡಪ್ಪಾ ಎಂಬ ವರವನ್ನು ಕೇಳಿಕೊಂಡು ಮೌನವಾಗಿ, ನಿಶ್ಯಬ್ದವಾಗಿ ದೇವರ ಹೂ ಕರುಣಿಸುವನೇ ಎಂಬ ಕುತೂಹಲ ಆಸೆ-ಆಸಕ್ತಿಯಿಂದ ದೇವರನ್ನೆ ದಿಟ್ಟಿಸಿ ಕಣ್ಣು ಮಿಟುಕಿಸದೇ ನೋಡುತ್ತಾ ಕುಳಿತುಕೊಳ್ಳುತ್ತಾರೆ. ದೇವರು ಭಕ್ತಾದಿಗಳು ಬೇಡಿಕೊಂಡ ವರವನ್ನು ಈಡೇರಿಸುತ್ತಾನೆಂಬ ನಂಬಿಕೆಯು ಇವರಲ್ಲಿದೆ. ಆಗ ದೇವರು ಹೂವನ್ನು ಕರುಣಿಸಿದರೆ ಹೋಗಿರುವ ಭಕ್ತರೆಲ್ಲರೂ ಸಂತೃಪ್ತಗೊಳ್ಳುತ್ತಾರೆ. ದೇವರು ಕೊಡುವ ಹೂವ್ವಿನ ಬಗ್ಗೆಯೂ ಇಲ್ಲಿನ ಜನರ ಮನಗಳಲ್ಲಿ ತಮ್ಮದೇ ಆದ ನಂಬಿಕೆಗಳು ಬೇರೂರಿವೆ. ಅಂದರೆ ದೇವರು ಬಲಬದಿಯಿಂದ ಹೂ ನೀಡಿದರೆ ಆತನು ನಮ್ಮೂರಿಗೆ ಬರಲು ಒಪ್ಪಿಗೆಯನ್ನು ನೀಡಿದ್ದಾನೆಂದು ತಿಳಿದು ಅದನ್ನು ಶುಭದ ಸಂಕೇತವೆಂದು ಪರಿಗಣಿಸಿಕೊಂಡು ಎಲ್ಲರೂ ಊರಿಗೆ ಹಿಂದುರುಗಿ ಬರುತ್ತಾರೆ. ಅದೇ ರೀತಿ ಎಡಬದಿಯಿಂದ ಹೂ ನೀಡಿದರೆ ದೇವರು ನಮ್ಮೂರಿಗೆ ಬರಲು ನಿರಾಕರಿಸಿದ್ದಾನೆಂದು ಅರಿತು ಅದನ್ನು ಅಶುಭದ ಸಂಕೇತವೆಂದು ಭಾವಿಸಿ ದುಃಖ ತಪ್ತರಾಗಿ ಕೊಟ್ಟರೂ ಮೊಳಕಾಲ್ಮೂರುವಿನ ಪ್ರಮುಖ ವ್ಯಕ್ತಿಗಳು ಹಬ್ಬ ಮಾಡುವ ದಿನವನ್ನು/ದಿನಾಂಕವನ್ನು ನಿಗದಿ ಪಡಿಸಿ ಪಟ್ಟಣಕ್ಕೆ ನುಂಕಪ್ಪ ದೇವರು ಬರುತ್ತಾನೆಂದು ಸು.೮ ದಿನಗಳ ಮುಂಚಿತವಾಗಿಯೇ ಸಾರುತ್ತಾರೆ.

ಪಟ್ಟಣಕ್ಕೆ ನುಂಕಪ್ಪ ದೇವರು ಬರುವ ದಿನಗೊತ್ತಾದ ವೇಳೆಗಾಗಲೇ ಇಲ್ಲಿನ ಜನರು ತಮ್ಮ ತಮ್ಮ ಮನೆ-ಮಠಗಳನ್ನು ಸುಣ್ಣಬಣ್ಣಗಳಿಂದ ಅಲಂಕರಿಸಿ, ದವಸ ಧಾನ್ಯಗಳನ್ನೆಲ್ಲಾ ಹಸನುಗೊಳಿಸಿ,

ಬಟ್ಟೆ-ಬರೆಗಳನ್ನು ಶುಚಿಗೊಳಿಸಿಕೊಂಡು, ಹಬ್ಬಕ್ಕೆ ದೂರದ ಸಂಬಂಧಿಗಳನ್ನು, ಆಪ್ತರು, ನೆಂಟರಿಷ್ಟರು, ಗಂಡನ ಮನೆ ಸೇರಿದ ತಮ್ಮ ಮನೆಯ ಹೆಣ್ಣುಮಕ್ಕಳನ್ನು, ದೂರದ ಊರುಗಳಲ್ಲಿ ಹೋಗಿ ವಿದ್ಯಾಭ್ಯಾಸಕ್ಕೊ, ಉದ್ಯೋಗಕ್ಕೊ ಹೋಗಿರುವ ಮಕ್ಕಳುಗಳೆಲ್ಲರನ್ನು ಹಬ್ಬಕ್ಕೆ ಬರುವಂತೆ ಆಹ್ವಾನಿಸಿ ಸ್ವಾಮಿಯು ಬರುವಿಕೆಯ ದಿನಕ್ಕಾಗಿ ಕಾತುರದಲ್ಲಿ ಕಾಯುತ್ತಿರುತ್ತಾರೆ. ಹಾಗೆಯೇ ವಲಸೆ ಹೋದಂತಹ ಕುಟುಂಬಗಳೂ ಸಹ ಬಂದು ಹಬ್ಬಕ್ಕೆ ಬೇಕಾದಂತಹ ಎಲ್ಲಾ ಪೂರ್ವತಯಾರಿಗಳನ್ನು ಮಾಡಿಕೊಳ್ಳುತ್ತಾರೆ. ಮಾಘ ಮಾಸದಲ್ಲಿ ನಡೆಯುವ ಈ ಜಾತ್ರೆಯು ಸಾಮಾನ್ಯವಾಗಿ ಫೆಬ್ರವರಿ ತಿಂಗಳಿನ ಒಂದು ಅಥವಾ ಮೂರನೆಯ ದಿನಾಂಕದಂದು ನಡೆಯುತ್ತದೆ. ಅಂದರೆ ಈ ಮಾಸದ ಭಾನುವಾರದಿಂದ ಬುಧವಾರದ ವರೆಗೆ ಸ್ವಾಮಿಯ ಜಾತ್ರಾ ಮಹೋತ್ಸವ ನಡೆಯುತ್ತದೆ. ದೇವರು ಊರಿಗೆ ಬರುವ ದಿನದ ವೇಳೆಗೆ ಇಲ್ಲಿನ ಗ್ರಾಮಸ್ಥರೆಲ್ಲರೂ ಸೇರಿ "ಘಟ್ಟಿ"ಯ ರೂಪದಲ್ಲಿ ಹಣವನ್ನು ಸಂಗ್ರಹಿಸಿ ಕಾವಲುಗಾರರಿಗೂ ಹಾಗೂ ಹರಳಯ್ಯನವರಿಗೂ ಕೊಡುತ್ತಾರೆ. ಆನಂತರ ಊರಿನ ಗೌಡ ಸೇರಿದಂತೆ ಮುಂತಾದವರು ಬೆಟ್ಟಕ್ಕೆ ಹೋಗಿ ಸ್ವಾಮಿಯನ್ನು ಪಲ್ಲಕ್ಕಿಯ ಮೇಲೆ ಕೂರಿಸಿಕೊಂಡು ತುಂಬ ಸಡಗರ ಸಂಭ್ರಮದಿಂದ ತಮಟೆ, ಡೋಲು, ಡಂಗೂರ, ವಾದ್ಯವೃಂದ ದೊಂದಿಗೆ ಮೆರವಣಿಗೆಯ ಮೂಲಕ ಮೊಳಕಾಲ್ಮೂರುವಿಗೆ ಕರೆತಂದು ಹಾನಗಲ್ ರಸ್ತೆಯಲ್ಲಿರುವ ಮಾರಮ್ಮ ದೇವಿಗೆ ಪೂಜೆಯನ್ನು ಸಲ್ಲಿಸಿ ನಾನು ಊರಿಗೆ ಬಂದಿದ್ದೇನೆಂದು ದೇವಿಗೆ ಹೇಳಿ ನುಂಕಪ್ಪ ಕಟ್ಟೆ (ಹೊರ)ಯ ಮೇಲೆಯೇ ದೇವರನ್ನು ಕೂರಿಸುತ್ತಾರೆ. ಅಂದರೆ ನುಂಕಪ್ಪ ಊರೊಳಗೆ ದರ್ಶನಕೊಡುವುದಕ್ಕೂ ಪೂರ್ವದಲ್ಲಿ ಊರಿನ ಹೊರಗಿರುವ ನುಂಕಪ್ಪನ ಕಟ್ಟೆಯ ಮೇಲೆ ಕೂರಿಸುತ್ತಾರೆ. ಆಗ ಈ ಕಟ್ಟೆಯ ಸುತ್ತಮುತ್ತಲಿರುವ ಹಟ್ಟಿಗಳ ಜನರು ಇಲ್ಲಿಗೆ ಬಂದು ದೇವರಿಗೆ ಹಲವಾರು ಪೂಜಾವಿಧಿಗಳನ್ನು ನೆರವೇರಿಸುತ್ತಾರೆ. ಆನಂತರ ಮಧ್ಯಾಹ್ನ ಮೂರು ಗಂಟೆಯ ಸುಮಾರಿಗೆ ಅಂದರೆ ಬಿಸಿಲು ಇಳಿಮುಖವಾಗುವ ಸಮಯದ ವೇಳೆಗೆ ಊರಿನ ಗೌಡರು ಈ ಕಟ್ಟೆಯ ಬಳಿ ಕುಳಿತ್ತಿರುವ ದೇವರನ್ನು ಎಬ್ಬಿಸಲು ಬರುತ್ತಾರೆ. ಅಂದರೆ ದೇವರನ್ನು ಊರೊಳಗೆ ಕರೆದೊಯ್ಯಲು ಬರುತ್ತಾರೆ. ಆಗ ದೇವರನ್ನು ಡೋಲು ಡಂಗೂರ ವಿವಿಧ ವಾದ್ಯವೃಂದ ಮೇಳದ ಮೆರವಣಿಗೆ ಯೊಂದಿಗೆ ಪಲ್ಲಕಿಯ ಮೇಲೆ ಕೂರಿಸಿಕೊಂಡು ಅಪಾರ ಸಂಖ್ಯೆಯ ಭಕ್ತಾದಿಗಳೊಂದಿಗೆ ಊರೊಳಗಿ ರುವ ನುಂಕಪ್ಪನ ಕಟ್ಟೆಯ ಮೇಲೆ ಸ್ವಾಮಿಯನ್ನು ತಂದು ಕೂರಿಸುತ್ತಾರೆ. ಸ್ವಾಮಿಯ ಈ ಮೆರವಣಿಗೆಯ ಕಾರ್ಯದಲ್ಲಿ ಗೊರವರು, ನಾಯಕರು ವಿಶೇಷವಾಗಿ ಸ್ವಾಮಿಯ ಪಲ್ಲಕಿಯನ್ನು ಹೊತ್ತು ಮುನ್ನೆಡೆದರೆ, ಹದಿಹರೆಯದ ಹುಡುಗಿಯರು, ಮುತ್ತೈದೆಯರು ನೂರಾರು ಕಳಸಗಳನ್ನು ಹಿಡಿದಿರುತ್ತಾರೆ. ಹಾಗೆಯೇ ನಾಯಕ ಜನಾಂಗದವರು ಮೆರವಣಿಗೆಯುದ್ದಕ್ಕೂ ನಂದಿಯ ಕೋಲುಗಳನ್ನು ಕುಣಿಸುತ್ತ ಸಂಭ್ರಮಿಸುತ್ತಾರೆ. ಪಟ್ಟಣದ ಪ್ರಮುಖ ಹಾಗೂ ಮುಖ್ಯ ರಸ್ತೆಯಲ್ಲಿ ಸಾಗಿದ ಮೆರವಣಿಗೆಯನ್ನು ಅಂದರೆ ಸ್ವಾಮಿಯು ಪುರದೊಳಗೆ ಬರುವಿಕೆಯ ಮೆರುಗನ್ನು ನೋಡಲು ಇಡೀ ಊರಿನ ಎಲ್ಲಾ ಬೀದಿಗಳಲ್ಲಿನ ಜನರು ಹಾಗೂ ಸುತ್ತಮುತ್ತಲಿನ ಹಳ್ಳಿಗಳ ಜನರು ಇಲ್ಲಿ ಬಂದು ಸೇರಿರುವುದರಿಂದ

ರಸ್ತೆಯಲ್ಲಿ ಜನಜಂಗುಳಿಯು ಹೆಚ್ಚಾಗಿ ವಾಹನಗಳ ಓಡಾಟಕ್ಕೆ ತೊಂದರೆಯೂ ಸಹ ಉಂಟಾಗುತ್ತದೆ. ಹೀಗೆ ಹೊರ ನುಂಕಪ್ಪನ ಕಟ್ಟೆಯಿಂದ ಸಾಗಿದ ಮೆರವಣಿಗೆಯೊಂದಿಗೆ ಬರುವ ದೇವರು ಊರಿನ ದ್ವಾರಬಾಗಿಲೆಂದು ಕರೆಯುವ ಕೋಟೆ ಬಡಾವಣೆಯಲ್ಲಿರುವ ಬಸವನ ಬಾಗಿಲ ಬಳಿಗೆ ಬಂದಾಗ ಇಲ್ಲಿ ಊರಿನ ಗೌಡರು ಕೊಟ್ಟಂತಹ ಬೇಟೆಯನ್ನು ನಾಯಕ ಜನಾಂಗದವರು ದೇವರಿಗೆ ಬಲಿಕೊಡುತ್ತಾರೆ. ಆನಂತರ ದೇವರನ್ನು ಊರಬಾಗಿಲಿನ ಬಲಬದಿಗಿರುವ ಒಳನುಂಕಪ್ಪನ ಕಟ್ಟೆಯ ಮೇಲೆ ಕೂರಿಸುತ್ತಾರೆ. ಇಲ್ಲಿಗೆ ಬರುವುದರೊಳಗೆ ಸುಮಾರು ರಾತ್ರಿ ಎಂಟು ಗಂಟೆ ಸಮಯವಾಗಿರುತ್ತದೆ. ರಸ್ತೆಯುದ್ದಕ್ಕೂ ಭಕ್ತರು ದೇವರಿಗೆ ಹೂ.ಹಣ್ಣು ಕಾಯಿಯನ್ನು ಕೊಟ್ಟು ದೇವರ ಕೃಪೆಗೆ ಪಾತ್ರರಾಗುವರು.

ಒಳನುಂಕಪ್ಪನ ಕಟ್ಟೆಯ ಮೇಲೆ ಒಂದೆರಡು ಗಂಟೆ ಕಾಲ ದೇವರನ್ನು ಕೂರಿಸಿ ಆನಂತರ ಹಿಂದಿನ ಪಾಳೆಯಗಾರರ ಸಾಂಪ್ರದಾಯದಂತೆ ಇಲ್ಲಿಂದ ಸು.೩ಕಿ.ಮೀ. ದೂರದಲ್ಲಿರುವ ಮೇಲ್ದುರ್ಗಕ್ಕೆ ಗಂಗಾಪೂಜೆಗೆಂದು ಬೆಟ್ಟದ ಮೇಲಕ್ಕೆ ಕಡಿದಾದ ಕಲ್ಲು ಬಂಡೆಗಳಿಂದ ಕೂಡಿದ ಕಾಲ್ದಾರಿಯಲ್ಲಿಯೇ ಅಂದಿನ ರಾತ್ರಿ ೧೦ ಗಂಟೆ ಸುಮಾರಿಗೆ ಅಪಾರ ಭಕ್ತರೊಂದಿಗೆ ಬೆಟ್ಟದ ಮೇಲಕ್ಕೆ ದೇವರನ್ನು ಹೊತ್ತೊಯ್ಯಲಾಗುತ್ತದೆ. ಬೆಟ್ಟದ ಮೇಲಿನ ಕೋಟೆಯ ಈಶ್ವರ ಬಾಗಿಲನ್ನು ದಾಟಿ ಹೋದಾಗ ಸಿಗುವ ತುಪ್ಪದಮ್ಮನ ಬಾವಿಯ ಹತ್ತಿರ ದೇವರನ್ನು ಸ್ವಲ್ಪ ಹೊತ್ತು ಕೂರಿಸಲಾಗುತ್ತದೆ(ತುಪ್ಪದಮ್ಮ ನುಂಕಪ್ಪನ ಅಕ್ಕ ಎಂಬ ನಂಬಿಕೆಯಿಂದ) ಆನಂತರ ಅಲ್ಲಿಂದ ಏಣಿ ಮಾರಮ್ಮನ ಬಾಗಿಲು, ಹನುಮನ ಬಾಗಿಲು, ಆನಂತರ ವಿನಾಯಕನ ಬಾಗಿಲುಗಳನ್ನು ದಾಟಿ ಬೆಟ್ಟದಲ್ಲಿರುವ ಕಂಪಿಲರಾಯನ ಹೊಂಡದ ಬಳಿಗೆ ದೇವರನ್ನು ತೆಗೆದುಕೊಂಡು ಹೋಗಿ ಇಲ್ಲಿ ದೇವರಿಗೆ ಗಂಗಾಪೂಜೆಯನ್ನು ಮಾಡಿಕೊಂಡು ಮರಳಿ ಅಲ್ಲಿಂದ ಏಣಿಮಾರಮ್ಮನ ಹತ್ತಿರಕ್ಕೆ ತೆಗೆದುಕೊಂಡು ಹೋಗಿ ಗೊರವರು, ಕಾವಲುಗಾರರು, ಬೇಟೆಗಳನ್ನು ಕೊಯ್ದು ಮಾಂಸದೂಟವನ್ನು ಮಾಡಿದರೆ, ಉಳಿದ ಭಕ್ತಾದಿಗಳು ಸಿಹಿ ಅಡುಗೆಯನ್ನು ಮಾಡಿಕೊಂಡು ಸವಿಯುತ್ತಾರೆ. ಆನಂತರ ಇಲ್ಲಿನ ಬೇವಿನ ಮರದ ಸಮೀಪದ ಮುಳ್ಳು ಬಿದಿರಿನಲ್ಲಿರುವ ರಸಸಿದ್ದನ ತಲೆಯ ಹತ್ತಿರ ನುಂಕಪ್ಪನನ್ನು ಕೂರಿಸಿ ಪೂಜಿಸುವುದರ ಜೊತೆಗೆ ಸಾಂಪ್ರದಾಯಿಕವಾಗಿ ಆಚರಿಸಿಕೊಂಡು ಬಂದಿರುವಂತಹ ರೀತಿ ನೀತಿಗಳ ದಾರ್ಮಿಕ ಕಾರ್ಯಕ್ರಮಗಳನ್ನು ಮಾಡಲಾಗುತ್ತದೆ. ಆನಂತರ ಬೆಳಗಿನ ಜಾವ ನಾಲ್ಕು ಗಂಟೆ ಸುಮಾರಿಗೆ ನಾಯಕ ಜನಾಂಗದವರು ಹಾಗೂ ಹರಳಯ್ಯನವರೂ ಒಟ್ಟಾಗಿ ರಸಸಿದ್ದನ ತಲೆಗೆ ಬೇಟೆಯನ್ನು ಕಡಿಯುತ್ತಾರೆ. ಇದನ್ನು "ಗಟ್ಟಾಗಮ್ಮ" ಎಂದು ಕರೆಯುವ ಸಾಂಪ್ರದಾಯವಿದೆ. ಅಷ್ಟೇ ಅಲ್ಲದೇ ಇವರು ದೇವರಿಗೆ ಮಾಂಸದ ಎಡೆಯನ್ನು ಹಾಕಿ ಊಟ ಮಾಡುವರು.

ನಂತರದ ಮರುದಿನ ಬೆಟ್ಟದ ಮೇಲಿಂದ ದೇವರನ್ನು ಬೆಳಿಗ್ಗೆ ೧೦ ಗಂಟೆ ಸುಮಾರಿಗೆ ಊರಿಗೆ ಕರೆತಂದು ಒಳನುಂಕಪ್ಪನ ಕಟ್ಟೆಯ ಮೇಲೆಯೇ ಕೂರಿಸುತ್ತಾರೆ. ಎರಡು ದಿನಗಳ ಕಾಲ ನುಂಕಪ್ಪ ದೇವರು ಈ ಕಟ್ಟೆಯ ಮೇಲೆಯೇ ಕುಳಿತುಕೊಂಡು ಸಾರ್ವಜನಿಕರಿಗೆ ಹಾಗೂ ಭಕ್ತಾದಿಗಳಿಗೆ

ದರ್ಶನವನ್ನು ನೀಡುತ್ತಾನೆ. ಹಾಗಾಗಿ ಇಲ್ಲಿನ ಜನತೆಗೆ ಇದು ಪವಿತ್ರವಾದ ಕಟ್ಟೆ ಎನಿಸಿದೆ. ದೇವರು ಬರುವ ಮುನ್ನ ಈ ಕಟ್ಟೆಯನ್ನು ಸುಣ್ಣಬಣ್ಣಗಳಿಂದಲೂ, ಮಾವಿನ ತೋರಣಗಳಿಂದಲೂ ಅಲಂಕರಿಸಲಾಗಿರುತ್ತದೆ. ಈ ಎರಡು ದಿನಗಳ ಕಾಲ ದೇವರಿಗೆ ದಿನಕ್ಕೆರಡು ಬಾರಿ ಬೆಳಿಗ್ಗೆ ಮತ್ತು ಸಂಜೆ ಪೂಜೆ ನಡೆಯುತ್ತದೆ. ಅಲ್ಲದೇ ಊರಿನಲ್ಲಿರುವ ಹಾಗೂ ದೂರದೂರದ ಊರುಗಳಿಂದ ಬಂದಂತಹ ಭಕ್ತಾದಿಗಳು ದೇವರಿಗೆ ಹೂವು, ಹಣ್ಣು, ಕಾಯಿಯನ್ನು ಕೊಟ್ಟು ದೇವರ ಕೃಪೆಗೆ ಪಾತ್ರರಾಗುವರು ಅಷ್ಟೇ ಅಲ್ಲದೇ ಹರಲಿರುಳು ಇಲ್ಲಿ ಭಜನೆ, ಕೋಲಾಟ, ಬಯಲಾಟ, ಪುರಾಣ ಪ್ರವಚನ, ದೇವರ ಪದಗಳ ಹಾಡುಗಾರಿಕೆ, ನಾಟಕ ಎಂಬ ಮುಂತಾದ ಮನೋರಂಜನೆಯ ಕಾರ್ಯಕ್ರಮಗಳು ನಡೆಯುತ್ತವೆ. ಕೊನೆಯ ದಿನದಂದು ದೇವರು ಪಲ್ಲಕ್ಕಿ ಉತ್ಸವದ ಮೆರವಣಿಗೆಯೊಂದಿಗೆ ಈ ಕಟ್ಟೆಯಿಂದ ಊರಿನ ಗೌಡರ ಮನೆಗೆ ಹೋಗಿ ಅಲ್ಲಿಂದ ನಾಯಕರ ಓಣಿಗೆ ಹೋಗಿ ಅಲ್ಲಿ ಸ್ವಲ್ಪ ಹೊತ್ತು ಕುಳಿತುಕೊಳ್ಳುತ್ತಾನೆ. ಇಲ್ಲಿನ ಜನರು ದೇವರಿಗೆ ಹಣ್ಣು, ಕಾಯಿ, ಬಟ್ಟೆ, ಕಾಸು ಕೊಟ್ಟು ಕಳಿಸುತ್ತಾರೆ. ಇದಾದ ನಂತರ ೩ ಗಂಟೆ ಸುಮಾರಿಗೆ ಬಸವನಕಟ್ಟೆಯ ಬಳಿ ಬರುತ್ತದೆ. ಅಲ್ಲಿ ಪೂಜೆ ಸಲ್ಲಿಸಿದ ನಂತರ ಸಂಜೆ ೫ ಗಂಟೆಯೊಳಗೆ ಹೊರ ನುಂಕಪ್ಪನ ಕಟ್ಟೆಯ ಮೇಲೆ ತಂದು ಕೂರಿಸಿ ಒಂದೆರಡು ತಾಸುಗಳ ನಂತರದಲ್ಲಿ ಬೆಟ್ಟಕ್ಕೆ ಪ್ರಯಾಣಿಸುತ್ತಾನೆ. ಹೀಗೆ ಬೆಟ್ಟಕ್ಕೆ ಹೋಗುವಾಗ ಹುಲಿಮರಿ ತಿಪ್ಪೆಯ ಬಳಿಯಿರುವ ಮೂಗುಬಸಪ್ಪ ಗುಡಿಯ ಹತ್ತಿರ ಕುಳಿತು ಕೊಂಡಾಗ ಈ ಮೂಗು ಬಸಪ್ಪ ಗುಡಿಗೆ ಸಂಬಂಧಿಸಿದವರು ವಾಡಿಕೆಯಂತೆ ಪೂಜಾಕಾರ್ಯಗಳನ್ನು ಮುಗಿಸಿದ ನಂತರ ನೇರವಾಗಿ ಅಲ್ಲಿಂದ ತನ್ನ ಮೂಲ ನೆಲೆಯಾದ ನುಂಕೀಮಲೆಗೆ ಹೋಗುತ್ತಾನೆ. ಆಗ ಊರಿನ ಜನರೆಲ್ಲಾರೂ ದೇವರನ್ನು ಬೆಳಗಿನ ಜಾವ ೩ ಗಂಟೆ ಸುಮಾರಿಗೆ ಗುಡಿ ತುಂಬಿಸಿ ಬರುತ್ತಾರೆ. ಇಲ್ಲಿಗೆ ಜಾತ್ರೆ ಉತ್ಸವ ಕೊನೆಯಾಗುತ್ತದೆ.[೩೪]

ಹೀಗೆ ಸಂಪ್ರದಾಯ ಬದ್ಧವಾಗಿ, ನೀತಿ ನಿಯಮಾನುಸಾರವಾಗಿ ಪ್ರತಿ ಮೂರು ವರ್ಷಗಳಿಗೊಮ್ಮೆ ಮಾಘಮಾಸದಲ್ಲಿ ಭಾನುವಾರದ ದಿನದಂದು ಬೆಟ್ಟದ ಮೇಲಿಂದ ದೇವರನ್ನು ಊರಿಗೆ ಬರಮಾಡಿಕೊಂಡು ಹಲವಾರು ಧಾರ್ಮಿಕ ಕ್ರಿಯಾದಿಗಳನ್ನು ಪೂರೈಸಿ ಮರಳಿ ಬುಧವಾರ ವಾರದಂದು ಬೆಳಗಿನ ಜಾವ ಮೂರು ಗಂಟೆ ಸುಮಾರಿಗೆ ಬೆಟ್ಟಕ್ಕೆ ಕರೆದೋಯ್ದು ಗುಡಿ ತುಂಬಿಸಿ ಬರುತ್ತಾರೆ. ಹೀಗೆ ಹಬ್ಬದೋಪಾದಿಯಲ್ಲಿ ಮಾಡುವ ಈ ಜಾತ್ರೆಯ ಕೇಂದ್ರ ಬಿಂದುವೆಂದರೆ ಕೋಟೆ ಬಡಾವಣೆಯಾಗಿದೆ. ಈ ಬಡಾವಣೆಯಲ್ಲಿ ರಸ್ತೆಯ ಇಕ್ಕೆಲಗಳಲ್ಲಿ ಅಂಗಡಿ ಮುಗ್ಗಟ್ಟುಗಳು ತೆರೆದು, ಚಿಕ್ಕ ಮಕ್ಕಳಿಂದ ಮುದುಕರವರೆಗೂ ಕಿಕ್ಕಿರಿದು ಸೇರುತ್ತಾರೆ. ದೇವರಿಗೆ ಸಂಬಂಧಿಸಿದ ಹಲವಾರು ಧಾರ್ಮಿಕ ಕ್ರಿಯಾವಿಧಿವಿಧಾನಗಳು ಇಲ್ಲಿಯೇ ನಡೆಯುತ್ತವೆ. ಊರಿನಲ್ಲಿನ ಹಾಗೂ ಸುತ್ತಮುತ್ತಲಿನ ದೂರ ದೂರ ಊರಿಗಳಲ್ಲಿರುವ ನುಂಕಪ್ಪನ ಭಕ್ತಾದಿಗಳು ಬಂದು ಜಾತ್ರೆಯ ಸವಿಯನ್ನು ಸವಿದು, ದೇವರಿಗೆ ಹಣ್ಣು , ಕಾಯಿಗಳನ್ನು ಮಾಡಿಸಿ ದೇವರ ಕೃಪೆಗೆ ಪಾತ್ರರಾಗುವರು.

## ಗಾಳಿ ಮಾರಮ್ಮನ ಜಾತ್ರೆ

ಪಟ್ಟಣದಿಂದ ಸು.೫ ಕಿ.ಮೀ.ಗಳ ದೂರದಲ್ಲಿ ಆಂಧ್ರಪ್ರದೇಶದ ಗಡಿಯಂಚಿನಲ್ಲಿರುವ ಗಾಳಿಮಾರಮ್ಮ ದೇವಿಯ ಬಗ್ಗೆ ಇಲ್ಲಿನ ಸುತ್ತಮುತ್ತಲಿನ ಜನರಲ್ಲಿ ಅಪಾರ ನಂಬಿಕೆಯಿದೆ. ಮೂಲತಃ ಈ ಮಾರಮ್ಮದೇವಿಯು ಕಾಲರಾ, ಪ್ಲೇಗು ಎಂಬ ಮುಂತಾದ ಸಾಂಕ್ರಮಿಕ ರೋಗಗಳ/ಪಿಡುಗುಗಳ ಅಧಿದೇವತೆಯೆಂದು ನಂಬಿರುವಂತಹ ಒಂದು ಕ್ಷುದ್ರದೇವತೆಯಾಗಿದೆ.[೩೫] ವಿಶೇಷವಾಗಿ ಕೆಳವರ್ಗದ ಜನರೇ ಹೆಚ್ಚಾಗಿ ಭಕ್ತರಾಗಿರುವ ಈ ದೇವಿಗೆ ಹಬ್ಬದ ಸಂದರ್ಭದಲ್ಲಿ ಪ್ರಾಣಿಬಲಿ ಹೆಚ್ಚಾಗಿ ನಡೆಯುತ್ತದೆ. ಪ್ರತಿವರ್ಷ ಇಲ್ಲಿ ಚಿಕ್ಕದಾದ ಜಾತ್ರೆ ನಡೆಯುತ್ತದೆ. ಈ ಜಾತ್ರೆಯು ಇಲ್ಲಿಂದ ಸು.೩೫ ಕಿ.ಮೀ. ದೂರದಲ್ಲಿರುವ ಗೌರಸಮುದ್ರದ ಮಾರಮ್ಮನ ಜಾತ್ರೆ ನಡೆಯುವಂತಹ ಸಂದರ್ಭದಲ್ಲಿಯೇ ನಡೆಯುತ್ತದೆ. ಎರಡು ದಿನಗಳ ಕಾಲ ನಡೆಯುವ ಈ ಜಾತ್ರೆಗೆ ಕರ್ನಾಟಕ, ಆಂಧ್ರಪ್ರದೇಶದ ದೂರದೂರದ ಊರುಗಳಿಂದ ಭಕ್ತಾದಿಗಳು ತಂಡೋಪತಂಡವಾಗಿ ಬಂದು ಕುರಿ, ಕೋಳಿಗಳನ್ನು ಬಲಿಕೊಡುವುದರ ಮೂಲಕ ತಾವು ಕಟ್ಟಿಕೊಂಡಿದ್ದ ಹರಕೆಗಳನ್ನು ಪೂರೈಸುತ್ತಾರೆ. ಈ ವಾರ್ಷಿಕ ಜಾತ್ರೆಯ ಮೊದಲ ದಿನದಂದು ದೇವಿಯನ್ನು ಸಾಂಪ್ರದಾಯಿಕವಾಗಿ "ಪೈತೊಟ್ಲು" ಎಂಬ ಸಮೀಪದ ನೆಲೆಗೆ ವಾದ್ಯವೃಂದ ಮೇಳ, ಡೋಲು ಡಂಗೂರಗಳೊಂದಿಗೆ ಕರೆದೊಯ್ದು ಅಲ್ಲಿ ಧಾರ್ಮಿಕ ವಿಧಿಯಾನುಸಾರವಾಗಿ ಗಂಗಾ ಪೂಜೆಯನ್ನು ಮಾಡಿಸಿಕೊಂಡು ಬಂದು ಆಲಯದಲ್ಲಿ ಕೂರಿಸುವರು. ನಂತರದ ಮರುದಿನದಂದು ಈ ಗುಡಿಯ ಉತ್ತರಕ್ಕಿರುವ ವಿಶಾಲವಾದ ಬಯಲಿನಲ್ಲಿ ಸಿಡಿಯಾಚರಣೆಯನ್ನು ಮಾಡುತ್ತಾರೆ. ಹೀಗೆ ಸಿಡಿ ಉತ್ಸವದೊಂದಿಗೆ ದೇವಿಯ ವಾರ್ಷಿಕ ಜಾತ್ರೆ ಅಂತಿಮಗೊಳ್ಳುತ್ತದೆ. ಈ ರೀತಿಯ ಜಾತ್ರೆಯ ಆಚರಣೆಯನ್ನು ಪ್ರತಿವರ್ಷ ಚಾಚುತಪ್ಪದೇ ಸಾಂಪ್ರದಾಯ ಬದ್ಧವಾಗಿ ಮುಂದುವರಿಸಿಕೊಂಡು ಬರುತ್ತಿದ್ದಾರೆ.

ವಾರ್ಷಿಕ ಜಾತ್ರೆಯ ಜೊತೆಗೆ ಪ್ರತಿ ಮೂರು ವರ್ಷಗಳಿಗೊಮ್ಮೆ ದೇವಿಯ ದೊಡ್ಡ ಜಾತ್ರೆಯನ್ನು ಮೊಳಕಾಲ್ಮೂರುವಿನ ಜನರು ನಡೆಸಿಕೊಂಡು ಬರುತ್ತಾರೆ. ಅಂದರೆ ಮೊಳಕಾಲ್ಮೂರುವಿನ ಹೆಣ್ಣು ಮಗಳಾದ ಹಾಗೂ ನುಂಕಪ್ಪ ದೇವರ ತಂಗಿ ಎಂದು ಭಾವಿಸಿದ ಜನರು ದೇವಿಯು ನಮ್ಮ ಊರನ್ನು ಯಾವಾಗಲೂ ಕಾಪಾಡುತ್ತಾಳೆಂಬ ನಂಬಿಕೆಯಿಂದ ಈ ದೇವಿಯನ್ನು 'ಗ್ರಾಮ ದೇವತೆ' ಎಂದು ಕರೆಯುವ ಪರಂಪರೆ ಇದೆ. ಈಗಾಗಲೇ ಗಮನಿಸಿದಂತೆ ಪ್ರತಿ ಮೂರು ವರ್ಷಗಳಿಗೊಮ್ಮೆ ನಡೆಯುವ ನುಂಕಪ್ಪನ ಜಾತ್ರೆಯ ಮುಂಚೆಯೇ ಈ ದೇವಿಯ ಜಾತ್ರೆಯನ್ನು ಮಾಡುತ್ತಾರೆ. ಅಂದರೆ ಸಾಂಪ್ರದಾಯಿಕವಾಗಿ ಈ ದೇವಿಯ ಜಾತ್ರೆಯನ್ನು ಮಾಡಿದ ನಂತರವೇ ನುಂಕಪ್ಪ ದೇವರ ಜಾತ್ರೆಯನ್ನು ಮಾಡಬೇಕಾಗುತ್ತದೆ. ದೇವಿಯ ಜಾತ್ರೆ ಮಾಡದೆ ನುಂಕಪ್ಪನ ಜಾತ್ರೆಯನ್ನು ಮಾಡಲು ಬರುವುದಿಲ್ಲ ಎಂಬ ಪರಿಪಾಠವನ್ನು ಇಂದಿಗೂ ಅನುಸರಿಸುತ್ತಾರೆ. ಪ್ರತಿಮೂರು ವರ್ಷಕ್ಕೊಮ್ಮೆ ಪುಷ್ಯಮಾಸದ ಹುಣ್ಣಿಮೆಗೆ ದೇವಿಯ ಜಾತ್ರೆ ಮಾಡಿ ಮಾಘ ಮಾಸದ ಅಮಾವಾಸ್ಯೆಯಲ್ಲಿ ನುಂಕಪ್ಪನ ಜಾತ್ರೆ ಮಾಡುತ್ತಾರೆ. ಹೀಗೆ ಮೂರು ವರ್ಷಕ್ಕೊಮ್ಮೆ ನಡೆಯುವ ದೇವತೆಯ ಜಾತ್ರೆಯನ್ನು

ಸ್ಥಳೀಯರು 'ದೊಡ್ಡಜಾತ್ರೆ' ಎಂದು ಕರೆಯುವರು. ಈ ಸಂದರ್ಭದಲ್ಲಿ ಜಾತ್ರೆಯನ್ನು ಮಾಡುವ ಮೊದಲು ರಥವನ್ನು ಹಾಗೂ ಮಾರಮ್ಮನ ಮೂರ್ತಿಯನ್ನು ಮರದಿಂದ ತಯಾರಿಸಿಕೊಂಡು ವಾದ್ಯಮೇಳಗಳೊಂದಿಗೆ ಮೆರವಣಿಗೆಯೋಪಾದಿಯಲ್ಲಿ ಸಾಗಿ ಅದನ್ನು ಕರ್ನಾಟಕದ ಗಡಿಯಂಚಿನಲ್ಲಿ ಬಿಟ್ಟು ಬರುತ್ತಾರೆ. ಆಗ ಆಂಧ್ರದ ಜನತೆ ಬಂದು ಆ ರಥದಮ್ಮನನ್ನು ತಮ್ಮ ಗಡಿಯೊಳಗೆ ಬರಮಾಡಿಕೊಂಡು ದೇವಾಲಯದಲ್ಲಿರುವ ಹಳೆಯ ಮೂರ್ತಿಯನ್ನು ಹೊರ ಹಾಕಿ ಅದರ ಸ್ಥಾನದಲ್ಲಿ ಹೊಸ ಮೂರ್ತಿಯನ್ನು ಪ್ರತಿಷ್ಠಾಪಿಸುತ್ತಾರೆ. ನಂತರದ ದಿನದಂದು ಈ ಮೊದಲೇ ದೇವತೆಗೆ ಬಿಟ್ಟಿರುವ ಕೋಣವನ್ನು ಬರಮಾಡಿಕೊಂಡು ಅದರ ಮೈತೊಳೆದು, ಅದನ್ನು ಶೃಂಗಾರಗೊಳಿಸಿ ವಿಶೇಷವಾದಂತಹ ಭೋಜನವನ್ನು ನೀಡಿ ಸ್ವಲ್ಪ ಕಾಲ ದೇವಾಲಯದಲ್ಲಿ ಕಟ್ಟಿ ಹಾಕುತ್ತಾರೆ. ದೇವಿಯ ಪೂಜೆ-ಮೆರವಣಿಗೆ ಎಲ್ಲಾ ಮುಗಿದ ನಂತರ ಆ ಕೋಣವನ್ನು ತಂದು ದೇವಿಯ ಎದುರಲ್ಲಿ ಸಂಹಾರಿಸುತ್ತಾರೆ. ಕಾಳು ಪದಾರ್ಥಗಳಿಂದ ತಯಾರಿಸಿದ ಅನ್ನವನ್ನು ರಕ್ತದೊಂದಿಗೆ ಬೆರೆಸಿ ಅದನ್ನು ತಂದು ಪಟ್ಟಣದ ಸುತ್ತಲೂ ಚೆಲ್ಲುತ್ತಾರೆ. ಇದನ್ನು 'ಸರಗ' ಚೆಲ್ಲುವಿಕೆ ಎಂದು ಕರೆಯುವರು. ಈ ರೀತಿಮಾಡುವುದರಿಂದ ಊರಲ್ಲಿ ಶಾಂತಿ ನೆಮ್ಮದಿ ನೆಲೆಗೊಳ್ಳುತ್ತದೆಂಬ ಬಲವಾದ ನಂಬಿಕೆ ಮೊಳಕಾಲ್ಮೂರಿನ ಜನತೆಯಲ್ಲಿದೆ. ಇದರ ಸಾಂಪ್ರದಾಯಿಕ ವಿಧಿ ವಿಧಾನಗಳೊಂದಿಗೆ ಜಾತ್ರೆಯು ಕೊನೆಯಾಗುತ್ತದೆ.[೩೬] ಈ ಜಾತ್ರೆ ಕೊನೆಗೊಂಡ ನಂತರದಲ್ಲಿ ಬರುವ ಮಾಘಮಾಸದಲ್ಲಿ ನುಂಕಪ್ಪನ ಜಾತ್ರೆಯನ್ನು ಪಟ್ಟಣದಲ್ಲಿ ಆಚರಿಸಲಾಗುತ್ತದೆ.

### ಆಷಾಡ ದುರುಗಮ್ಮ ಜಾತ್ರೆ

ಪಟ್ಟಣದಲ್ಲಿ ಆಚರಿಸುವಂತಹ ಜಾತ್ರೆಗಳಲ್ಲಿ ಮಹತ್ವ ಪಡೆದಂತಹ ಮತ್ತೊಂದು ಪ್ರಮುಖ ಜಾತ್ರೆ ಎಂದರೇ ಆಷಾಡ ದುರುಗಮ್ಮ ಜಾತ್ರೆಯಾಗಿದೆ. ಉತ್ಸವ ನಡೆಸುವ ಮಾಸ ಮತ್ತು ದೇವತೆಯ ಹಿನ್ನೆಲೆಯಲ್ಲಿ ಈ ಜಾತ್ರೆಗೆ ಆಷಾಡ ದುರುಗಮ್ಮ ಜಾತ್ರೆ ಎಂದು ಕರೆಯುವರು. ಇಲ್ಲಿನ ಸ್ವಕುಳ ಸಾಳಿ ಸಮಾಜಕ್ಕೆ ಸೇರಿದ ಏಕಬೋಟಿಮನೆತನದವರ ಮನೆಯ ಹೆಣ್ಣುಮಗಳೆಂದು ನಂಬಿದ ಈ ದೇವಿಯನ್ನು ಇಲ್ಲಿಯ ಜನತೆ "ನಗರ ದೇವತೆ" ಎಂದು ಪರಿಗಣಿಸಿದ್ದಾರೆ. ಸ್ವಕುಳಸಾಳಿ ಸಮಾಜದ ಅಧೀನದಲ್ಲಿ ದಿನದಿಂದ ದಿನಕ್ಕೆ ಅಭಿವೃದ್ಧಿಯಾಗುತ್ತಿರುವ ಈ ದೇವಾಲಯದ ಬಗ್ಗೆ ಹಾಗೂ ದೇವಿಯ ಕುರಿತಾಗಿ ಅಪಾರ ಶ್ರದ್ಧಾಮನೋಬಾವನೆಯ ಭಕ್ತಿಯನ್ನು ಹೊಂದಿರುವ ಊರಿನ ಗ್ರಾಮಸ್ಥರು ವಿಶೇಷವಾಗಿ ವರ್ಷದಲ್ಲೊಮ್ಮೆ ಜಾತ್ರೆಯನ್ನು ನಡೆಸುವಂತಹ ಪರಿಪಾಠವನ್ನು ಅನಾದಿ ಕಾಲದಿಂದಲೂ ಬೆಳೆಸಿಕೊಂಡು ಬಂದಿದ್ದಾರೆ.

ಪ್ರತಿವರ್ಷ ಆಷಾಡ ಮಾಸದ ಮಂಗಳವಾರ ಮತ್ತು ಶುಕ್ರವಾರಗಳಂದು ದೂರದೂರದ ಊರುಗಳಿಂದ ಬರುವ ಭಕ್ತಾದಿಳಿಂದ ಬೆಳಿಗ್ಗೆ ಮತ್ತು ಸಂಜೆ ವಿಶೇಷಾ ಪೂಜಾ ಪುನಸ್ಕಾರಗಳು ನಡೆಯುತ್ತವೆ. ಅಲ್ಲದೇ ಈ ಸಂದರ್ಭದಲ್ಲಿ ಭಕ್ತಾದಿಗಳು ದೇವಿಗೆ ಹೊಸ ವಸ್ತ್ರಗಳನ್ನು ನೀಡಿ

ಉಡಿಹಕ್ಕಿಯನ್ನು ತುಂಬುವುದರ ಜೊತೆಗೆ ದೇವಿಯ ಹೆಸರಲ್ಲಿ ಕಟ್ಟಿಕೊಂಡಿದ್ದ ಹರಕೆಗಳನ್ನೂ ಸಹ ಪೂರೈಸುತ್ತಾರೆ. ಈ ಮಾಸದ ಕೊನೆಯ ಮಂಗಳವಾರ ವಾಗಲೀ ಇಲ್ಲ ಶುಕ್ರವಾಗವಾಗಲೀ ದೇವಿಗೆ ಕುಂಕುಮಾರ್ಚನೆಯನ್ನು ನಡೆಸುವುದರ ಜೊತೆಗೆ ಉತ್ಸವದಲ್ಲಿ ಪಾಲ್ಗೊಂಡ ಸಮಾಜದ ಎಲ್ಲಾ ಭಕ್ತವೃಂದವರ್ಗಕ್ಕೆ ಅನ್ನಸಂತರ್ಪಣೆಯನ್ನೂ ಸಹ ನಡೆಸಲಾಗುತ್ತದೆ. ಹೀಗೆ ಇಲ್ಲಿ ಕೈಗೊಳ್ಳುವ ಜಾತ್ರಾಮಹೋತ್ಸವವು ಕೊನೆಗೊಳ್ಳುತ್ತದೆ.

ಒಟ್ಟಾರೆಯಾಗಿ ಪಟ್ಟಣದ ಸ್ಥಳೀಯ ಜನರಲ್ಲಿ ಭಕ್ತಿ ಪರಂಪರೆಯನ್ನು ಪ್ರತಿನಿಧಿಸುವಂತಹ ಇಲ್ಲಿನ ಜಾತ್ರೆಗಳೆಲ್ಲವೂ ಸಹ ಉತ್ಸವ ನಡೆಯುವ ದೇವ-ದೇವತೆಗಳ ಹೆಸರಿನಿಂದ ಗುರುತಿಸಿಕೊಂಡಿವೆ. ಜನರಿಗೆ, ಭಕ್ತಾದಿಗಳಿಗೆ ಮನೋರಂಜನೆಯನ್ನು ನೀಡುವ ಇಲ್ಲಿನ ಜಾತ್ರೆಗಳ ಆಚರಣೆಯಿಂದ ಈ ಪ್ರದೇಶದ ಶೈವ ಮತ್ತು ಶಾಕ್ತಿಯ ದೇವತೆಗಳ ಪರಂಪರೆಯನ್ನು ಅರಿಯಬಹುದು. ಅನಾಧಿ ಕಾಲದಿಂದಲೂ ಪರಂಪರಾನುಗತವಾಗಿ, ಸಾಂಪ್ರದಾಯಿಕವಾಗಿ ಬೆಳೆಸಿಕೊಂಡು ಬಂದಿರುವ ಜಾತ್ರಾ ಮಹೋತ್ಸವಗಳನ್ನು ಇಂದಿನ ಪೀಳಿಗೆಯು ಯಾವುದೇ ರೀತಿಯ ಆಧುನೀಕರಣದ ಸುಳಿಗೆ ಸಿಲುಕದಂತೆ ಶಾಸ್ತ್ರಬದ್ಧವಾಗಿ, ನೀತಿ ನಿಯಮಗಳಿಗನುಸಾರವಾಗಿ ಮುಂದುವರಿಸಿಕೊಂಡು ಹೋಗುವ ಜವಾಬ್ದಾರಿಯನ್ನು ಮರೆಯಬಾರದು ಎಂದು ಹೇಳಿದರೆ ತಪ್ಪಾಗಲಾರದು ಎನಿಸುತ್ತದೆ.

## ಹಬ್ಬ ಹರಿದಿನಗಳು

ಮಾನವನ ಜೀವನದ ಸಾಂಸ್ಕೃತಿಕ ರಂಗದಲ್ಲಿ ನಂಬಿಕೆ-ಆಚರಣೆಗಳಷ್ಟೇ ಪ್ರಮುಖವಾದ ಸ್ಥಾನವನ್ನು ಹಬ್ಬ-ಹರಿದಿನಗಳು ಪಡೆದುಕೊಂಡಿವೆ. 'ಹಬ್ಬ' ಎಂಬ ಪದವು ಸಂಸ್ಕೃತದ 'ಪರ್ವನ್' ಎಂಬ ಪದದಿಂದ ಬಂದಿದೆ. ಪರ್ವ ಎಂದರೆ ಒಂದು ಮತ್ತೊಂದರ ಜೊತೆಗೆ ಸಂಧಿಸುವುದು ಎಂದರ್ಥ. ಅಂದರೆ ಸೂರ್ಯ, ಚಂದ್ರ, ದಿಕ್ಕು ಬದಲಾಗುವುದೇ ಪರ್ವ. ಇದನ್ನೆ ನಮ್ಮ ಪೂರ್ವಜರು ಅಮಾವಾಸ್ಯೆ, ಹುಣ್ಣಿಮೆಗಳೆಂದು ಹೆಸರಿಸಿದಂತೆ ಕಂಡುಬರುತ್ತದೆ. ಮಾನವ ತನ್ನ ಬದುಕೆ ಇಲ್ಲವೆ ಸಂಕಲ್ಪ, ಆ ಇಚ್ಛೆಯ ಈಡೇರಿಕೆಗಾಗಿ ಒಂದು ಸೀಮಿತ ಅವಧಿಯೊಳಗೆ ಕೈಗೊಳ್ಳುವ ಹರಕೆ, ರೂಢಿ, ಸಾಂಪ್ರದಾಯ, ಉತ್ಸವಾಚರಣೆಗಳೇ ಹಬ್ಬಗಳಾಗಿ ಬಂದಿವೆ. ಮಹಾಕವಿ ಕಾಳಿದಾಸ ತನ್ನ ವಿಕ್ರಮೋರ್ವಶಿಯ ಕೃತಿಯಲ್ಲಿ "ಉತ್ಸವ ಪ್ರಮಾಣ ಮನುಷ್ಯ" ಎಂದು ಉಲ್ಲೇಖಿಸಿರುವುದನ್ನು ಗಮನಿಸಿದರೆ ಹಬ್ಬಗಳು ಮಾನವನ ದೈಹಿಕ ಸುಖ-ಸಂತೋಷ ಹಾಗೂ ಮುಕ್ತಿ ಸಾಧನೆಗಾಗಿ ಆಚರಣೆಯಲ್ಲಿ ಬೆಳೆದುಬಂದಂತೆ ಕಂಡುಬಂದಿವೆ.[೩೭] ಈ ರೀತಿಯ ಆಚರಣೆಗಳ ದಿನಗಳನ್ನು ಜನಸಾಮಾನ್ಯರು ಹಬ್ಬಹರಿದಿನಗಳೆಂದು ಕರೆದುಕೊಂಡು, ತಮ್ಮ ನಿತ್ಯಜೀವನದ ಲೌಕಿಕವಾದ ಬದುಕಿನಿಂದ ಅಲೌಕಿಕ ಬದುಕಿನೆಡೆಗೆ ಮುಂದುವರಿಯಲು ಆರಂಭದಿಂದಲೂ ರೂಢಿಸಿಕೊಂಡು ಬಂದಿದ್ದಾರೆ. ಹೀಗಾಗಿ ಮಾನವನ ಜೀವನದಲ್ಲಿ ಹಬ್ಬದ ದಿನಗಳು ಪವಿತ್ರದಿನಗಳಾಗಿ ಆಚರಣೆ ಗೊಳಗಾಗಿ, ಮೇಲು-ಕೀಳೆಂಬ ತಾರತಮ್ಯವಿಲ್ಲದೇ ಎಲ್ಲಾ ಜಾತಿವರ್ಗಗಳ ಕುಟುಂಬಗಳ

ವಾತಾವರಣವನ್ನು ಬದಲಾಯಿಸುತ್ತವೆ. ಕುಟುಂಬದಲ್ಲಿನ ಚಿಕ್ಕಮಕ್ಕಳಿಂದ ಹಿಡಿದು ಮುದುಕರವರೆಗಿನ ಎಲ್ಲಾ ಜನರಲ್ಲಿ ಸಂತೋಷಸಂಭ್ರಮವನ್ನುಂಟು ಮಾಡುವ ಹಬ್ಬ-ಹರಿದಿನಗಳ ಆಚರಣೆಯಲ್ಲಿ ಮೊಳಕಾಲ್ಮೂರು ಪಟ್ಟಣವು ಹೊರತಾಗಿರದೇ ಹಲವಾರು ಹಬ್ಬಗಳ ಜೀವಂತಿಕೆಯನ್ನು ಉತ್ಸವಾಚರಣೆಗಳ ರೂಪದಲ್ಲಿ ಇಂದಿಗೂ ಆಚರಿಸಿಕೊಂಡು ಬರುತ್ತಿದೆ. ಈ ಪಟ್ಟಣದಲ್ಲಿರುವ ವಿವಿಧ ಧರ್ಮಿಯ ಜನರು ಆಯಾ ಧರ್ಮಿಯ ಹಬ್ಬಗಳನ್ನು ಆಯಾ ಧರ್ಮದ ಚೌಕಟ್ಟಿನೊಳಗೆ, ಇತರೇ ಧರ್ಮಿಯರಿಗೆ ಯಾವುದೇ ರೀತಿಯ ತೊಂದರೆಯಾಗದಂತೆ ಆಚರಿಸಿಕೊಂಡು ಬರುತ್ತಿರುವುದು ಭಾವೈಕ್ಯತೆಯನ್ನು ಸೂಚಿಸುತ್ತದೆ.

ಪಟ್ಟಣದಲ್ಲಿರುವ ಕ್ರಿಶ್ಚಿಯನ್ನರು ವರ್ಷಕ್ಕೊಮ್ಮೆ ಬರುವ ಕ್ರಿಸ್‌ಮಸ್ ಹಬ್ಬವನ್ನು ಅತ್ಯಂತ ವೈಭವಯುತವಾಗಿ ಆಚರಿಸಿಕೊಂಡು ಬರುತ್ತಿದ್ದಾರೆ. ಹಾಗೆಯೇ ಇಸ್ಲಾಂ ಧರ್ಮದ ಮುಸ್ಲಿಮರು ಆ ಧರ್ಮದ ರಂಜಾನ, ಬಕ್ರಿದ್ ಮತ್ತು ಮೊಹರಾಂ ಎಂಬ ಮುಂತಾದ ಪವಿತ್ರ ಹಬ್ಬಗಳನ್ನು ಶ್ರದ್ದೆ, ಭಕ್ತಿ ಹಾಗೂ ಗೌರವದಿಂದ ಆಚರಿಸಿಕೊಂಡು ಬರುತ್ತಿದ್ದಾರೆ. ಇಲ್ಲಿ ಹೆಚ್ಚಿನ ಪ್ರಮಾಣದಲ್ಲಿರುವ ಹಿಂದುಗಳು ತಮ್ಮ ಧರ್ಮದಲ್ಲಿ ಬರುವಂತಹ ಎಲ್ಲಾ ಹಬ್ಬಗಳನ್ನು ಪರಂಪರೆಯಿಂದಲೂ ಆಚರಿಸಿಕೊಂಡು ಬರುತ್ತಲೇ ಇದ್ದಾರೆ. ಆದರೆ ಪ್ರಸ್ತುತ ದಿನಗಳಲ್ಲಿ ಇವರ/ಹಿಂದುಗಳ ಉತ್ಸವಾಚರಣೆಗಳಲ್ಲಿ ಸ್ವಲ್ಪ ಮಟ್ಟಿಗೆ ರೂಪ ಬದಲಾವಣೆ ಮಾರ್ಪಾಡಾಗಿರುವುದನ್ನು ಕಾಣಬಹುದು. ಪಟ್ಟಣದಲ್ಲಿ ಆಚರಿಸುವ ಹಬ್ಬಗಳು ಯುಗಾದಿಯ ಹೊಸ ಎಲೆ ಚಿಗುರಿನ ನವವಸಂತದಿಂದ ಪ್ರಾರಂಭವಾಗಿ ಮುಂಬರುವ ಮತ್ತದೇ ಯುಗಾದಿಯ ವರೆಗೂ ಬರುವಂತಹ ಪ್ರತಿಯೊಂದು ಹಬ್ಬಗಳನ್ನು ಆಚರಿಸುತ್ತಾ ಬರಲಾಗುತ್ತದೆ. ಯುಗಾದಿ, ಕಾರಹುಣ್ಣಿವೆ, ದಸರಾ, ನಾಗರಪಂಚಮಿ, ದೀಪಾವಳಿ, ಗಣೇಶ, ಸಂಕ್ರಾಂತಿ, ಶಿವರಾತ್ರಿ, ಮೊಹರಾಂ, ಮಾರಮ್ಮಹಬ್ಬ, ನುಂಕೀಮಲೆ ಸಿದ್ದೇಶ್ವರ ಜಾತ್ರೆ, ಹೋಳಿ ಹಬ್ಬ, ಗೌರಿಹಬ್ಬ ಎಂಬ ಪ್ರಮುಖ ಹಬ್ಬಗಳನ್ನು ಬಹು ಸಂಭ್ರಮದಿಂದ ವಿಶೇಷವಾಗಿ ಆಚರಿಸುತ್ತಾರೆ. ಹಿಂದೂ-ಮುಸ್ಲಿಮರು ಹೆಚ್ಚಾಗಿರುವ ಈ ಪಟ್ಟಣದಲ್ಲಿ ಮೂಲತಃ ಮುಸ್ಲಿಮರ ಹಬ್ಬವಾದ ಮೊಹರಾಂ ಹಬ್ಬವನ್ನು ಹಿಂದುಗಳು ಸಹ ಕೂಡಿ ಆಚರಿಸುತ್ತಾರೆ. ಹಿಂದೂ-ಮುಸ್ಲಿಂ ಧರ್ಮದವರಿಬ್ಬರೂ ಯಾವುದೇ ರೀತಿಯ ಬೇಧಭಾವವಿಲ್ಲದೇ ಆಚರಿಸುವ ಈ ಮೊಹರಾಂ ಹಬ್ಬದ ಆಚರಣೆಯಲ್ಲಿ ಈ ಎರಡೂ ಧರ್ಮದವರ ಸಹಬಾಳ್ವೆ, ಸ್ನೇಹ, ಭಾವೈಕ್ಯತೆ ವಿಶೇಷವಾಗಿ ಕಂಡುಬರುತ್ತದೆ. ಪಟ್ಟಣದಲ್ಲಿ ಆಚರಿಸುವಂತಹ ಪ್ರಮುಖ ಹಬ್ಬಹರಿದಿನ, ಉತ್ಸವಾಚರಣೆಗಳ ಕುರಿತಾದ ಸಂಕ್ಷಿಪ್ತ ಮಾಹಿತಿ ಕೆಳಗಿದೆ.

**ಯುಗಾದಿ**

ಯುಗಾದಿ ಹಬ್ಬ ಬಂತೆಂದರೆ ಬನಸಿರಿಗಳೆಲ್ಲ ಚಿಗುರಸಿರು ಸೀರೆಯುಟ್ಟಂತಹ ಪ್ರಕೃತಿ ತಾಯಿಯು ಹಸುಕಂದನ ನಗೆಯೊಂದಿಗೆ ನೋಡುಗರ ಮನಸ್ಸಿಗೆ ಆಹ್ಲಾದವನ್ನುಂಟು ಮಾಡುವ

ಮನಮೋಹಕ ದೃಶ್ಯ ಕಂಡು ಬರುತ್ತದೆ. ಯುಗಾದಿ ಎಂಬ ಪದದ ಅರ್ಥವನ್ನು ಸೂಕ್ಷ್ಮವಾಗಿ ಗಮನಿಸಿದರೆ ಸಂಸ್ಕೃತದಲ್ಲಿ 'ಯುಗ ಎಂದರ್ಥವಾಗುತ್ತದೆ. ಯುಗ ಎಂದರೆ 'ವರ್ಷ' ಎಂದೂ, ವರ್ಷ ಎಂದರೆ ಆದಿ ಅಥವಾ ಆರಂಭ ಎಂದರ್ಥವಾಗುತ್ತದೆ.[೩೮] ಅಂದರೆ ವರ್ಷದ ಆರಂಭದ ಹಬ್ಬವಾಗಿರುವ ಯುಗಾದಿ ಹಬ್ಬ ಭಾರತೀಯ ಪಂಚಾಂಗದ ಪ್ರಕಾರ ಇಲ್ಲಿನ ಜನಪದರಿಗೆ ಹೊಸದಿನ ಹೊಸವರ್ಷವಾಗಿದೆ. ಆದರೆ ಇಂದು ಪಾಶ್ಚಾತ್ಯ ಕ್ಯಾಲೆಂಡರಿನಲ್ಲಿ ಯುಗಾದಿಯನ್ನು ವರ್ಷದ ಮೂರನೇ ಅಥವಾ ನಾಲ್ಕನೆಯ ತಿಂಗಳಿನಲ್ಲಿ ಗುರುತಿಸಲಾಗಿದೆ. ಏನೇ ಇದ್ದರೂ ಅಖಂಡ ಭಾರತೀಯ ಜನಪದರ ನಂಬಿಕೆಯ ದೃಷ್ಟಿಯಲ್ಲಿ ಯುಗಾದಿಯೇ ವರ್ಷದ ಮೊದಲ ಹಬ್ಬವಾಗಿದೆ. ಯುಗ ಯುಗಾದಿ ಕಳೆದರು, ಯುಗಾದಿ ಮತ್ತೆ ಬರುತಿದೆ ಎಂಬ ಕವಿವಾಣಿಯಂತೆ ಎಲ್ಲೆಲ್ಲೂ ಹಸಿರು, ಕೋಗಿಲೆಯ ನೀನಾದದಿಂದ ಕೂಡಿದ ವಾತಾವರಣವನ್ನುಂಟು ಮಾಡುವ ಯುಗಾದಿ ಹಬ್ಬದ ಬರುವಿಕೆಗಾಗಿ ಪಟ್ಟಣದವರಿಗಿಂತ ಗ್ರಾಮೀಣ ಪ್ರದೇಶದ ಜನರು ಸುಗ್ಗಿಯನ್ನೆಲ್ಲಾ ಮುಗಿಸಿಕೊಂಡು ಮನೆಯಲ್ಲಿ ದವಸಧಾನ್ಯಗಳನ್ನು ಸಂಗ್ರಹಿಸಿಕೊಂಡು ಕಾತರದಿಂದ ಕಾಯುತ್ತಿರುತ್ತಾರೆ. ಈ ಹಬ್ಬದ ದಿನದಂದು ಮನೆಮಂದಿಯೆಲ್ಲಾ ಹೊಸ ಬಟ್ಟೆ ಧರಿಸಿ, ಹೊಸತನದಿಂದ ಕೂಡಿದ ಹೊಸ ಬದುಕಿಗೆ ಪಾದಾರ್ಪಣೆ ಮಾಡುತ್ತಾರೆ.

ಪಟ್ಟಣದಲ್ಲಿರುವ ಜನರು ಇಂದಿಗೂಸಹ ಈ ಹಬ್ಬವನ್ನು ಆಚರಿಸಿಕೊಂಡು ಬರುತ್ತಾರೆ. ವರ್ತಮಾನದಲ್ಲಿ ವಲಸೆಹೋಗಿರುವಂತಹ ಜನರು, ಬೇರೆಕಡೆ ಕೆಲಸ ಮಾಡಿಕೊಂಡಿರುವಂತಹ ಜನರು ಈ ಹಬ್ಬಕ್ಕೆಂದು ಹಬ್ಬಕ್ಕೂ ಒಂದು ವಾರ ಮುಂಚೆ ಬಂದು ತಮ್ಮ ಮನೆಗಳಿಗೆ ಸುಣ್ಣ ಬಣ್ಣವನ್ನು ಬಳಿದುಕೊಳ್ಳುವುದರ ಮೂಲಕ ಬಟ್ಟೆ-ಬರೆಗಳನ್ನು ಶುಭ್ರಗೊಳಿಸಿಕೊಂಡು ಹಬ್ಬದ ಬರುವಿಕೆಗೆ ಕಾತುರದಿಂದ ಕಾಯುತ್ತಿರುತ್ತಾರೆ. ಅಷ್ಟೆ ಅಲ್ಲದೇ ಪಟ್ಟಣದಲ್ಲಿರುವ ಸ್ತ್ರೀ-ಪುರುಷ ಗುಡಿ, ದೇವಾಲಯಗಳಿಗೆಲ್ಲ ಪಟ್ಟಣದ ಜನತೆ ಅಥವಾ ಆಯಾ ದೇವತಾ ಆರಾಧನೆಯ ಪೂಜಾರಿವರ್ಗದವರು ಸುಣ್ಣ-ಬಣ್ಣಬಳಿದು ದೇವಾಲಯದ ಸುತ್ತಾಮುತ್ತ ಸ್ವಚ್ಚಮಾಡಿ, ದೀಪಾಲಂಕಾರಗಳಿಂದ ದೇವಾಲಯಗಳನ್ನೆ ವೈಭವೀಕರಿಸುತ್ತಾರೆ. ಈ ಹಬ್ಬದ ವಿಶೇಷತೆಯೆಂದರೇ ಬೇವುಬೆಲ್ಲವನ್ನು ಸವಿಯುವುದು ಇಡೀ ಭಾರತೀಯ ಸಂಸ್ಕೃತಿಯ ಸಾಂಪ್ರದಾಯದಲ್ಲಿಯೇ ಒಂದು ಮಹತ್ವಪೂರ್ಣ ಕಾರ್ಯವಾಗಿದೆ. ಈ ಹಬ್ಬದ ದಿನದಂದು ಕುಟುಂಬಗಳಲ್ಲಿ, ದೇವಾಲಯಗಳಲ್ಲಿ ಬೆಳಗಿನಿಂದಲೂ ರಾತ್ರಿಯವರೆಗೂ ನಿರಂತರವಾಗಿ ಪೂಜೆ, ಪುನಸ್ಕಾರಗಳು ನಡೆಯುತ್ತಿದ್ದು, ಇಲ್ಲಿನ ಜನರು ಬೇವುಬೆಲ್ಲವನ್ನು ಹಂಚುವುದರ ಮೂಲಕ ಪರಸ್ಪರ ಶುಭವನ್ನು ಕೋರುತ್ತಾರೆ. ಅಮಾವಾಸ್ಯೆಯ ಪಾಡ್ಯದ ದಿನದಿಂದ ಮೊದಲುಗೊಂಡ ಆರಂಭಗೊಳ್ಳುವ ಧಾರ್ಮಿಕ ವಿಧಿವಿಧಾನಗಳಿಂದ ಪಟ್ಟಣದಾಯಾವರ್ಗದ ಜನತೆ ತಮ್ಮ ಸಂಪ್ರದಾಯದಂತೆ, ತಮ್ಮತಮ್ಮ ಆರ್ಥಿಕ ಪರಿಸ್ಥಿತಿಗೆ ತಕ್ಕಂತೆ ಹಬ್ಬವನ್ನು ಅವರವರ ಅನುಕೂಲತೆಗನುಗುಣವಾಗಿ ಆಚರಿಸಿಕೊಂಡು ಬರುವ ಪದ್ಧತಿಯಿದೆ. ಈ ಹಬ್ಬದ ದಿನದಂದು ಇಲ್ಲಿನ ಜನತೆ ತಾವು ಮಾಡುವ ಸ್ನಾನದ ನೀರಲ್ಲಿ ಬೇವಿನ ಸೊಪ್ಪನ್ನು

ಬೆರೆಸಿಕೊಂಡು, ಮೈಗೆಲ್ಲಾ ಎಣ್ಣೆಯನ್ನು ಹಚ್ಚಿಕೊಂಡು ಮಜ್ಜನ ಮಾಡುವುದನ್ನು ಇಂದಿಗೂ ರೂಢಿಸಿಕೊಂಡು ಬಂದಿದ್ದಾರೆ.

ಒಟ್ಟಾರೆಯಾಗಿ ಈ ಪಟ್ಟಣದಲ್ಲಿರುವ ಒಂದೂ ಧರ್ಮದ ವಿವಿಧ ಕೋಮಿನ ಜನರು, ವಲಸೆಹೋಗಿರುವ ಜನರೆಲ್ಲರೂ ತಮ್ಮೂರಿಗೆ ಬಂದು ತಮ್ಮ ಕುಟುಂಬವರ್ಗದವರೊಡನೆ, ನೆಂಟರಿಷ್ಟರೊಡಗೂಡಿ ವಿಶೇಷವಾಗಿ ತಯಾರಿಸಿದ ಸಿಹಿಊಟವನ್ನು ಸವಿದು, ಕಷ್ಟ ಸುಖಗಳನ್ನು ಪರಸ್ಪರ ವಿಲೇವಾರಿ ಮಾಡಿಕೊಳ್ಳುತ್ತಾ, ಸಂತೋಷ, ಸಂಭ್ರಮ ಸಡಗರದಿಂದ ಆಚರಣೆಯಲ್ಲಿ ತೊಡಗುತ್ತಾರೆ.

**ದಸರಾ**

ಭಾರತೀಯ ಹಿಂದೂ ಪರಂಪರೆಯ ಸಾಂಪ್ರದಾಯಿಕ ಆಚರಣೆಗಳ ಸಾಲಿನಲ್ಲಿ ಕಂಡುಬರುವ ಪ್ರಮುಖ ಹಬ್ಬಗಳಲ್ಲಿ ದಸರಾ ಹಬ್ಬ ಪ್ರಮುಖವಾಗಿದೆ. ಅದರಲ್ಲೂ ಕರ್ನಾಟಕದ ಸಾಂಸ್ಕೃತಿಕ ಪರಂಪರೆಯಲ್ಲಿ ವಿಶೇಷ ಸ್ಥಾನ ಪಡೆದಿರುವ ದಸರಾ ಹಬ್ಬ ನಾಡಿನ ಬಹುದೊಡ್ಡ ಹಬ್ಬವಾಗಿದೆ. ವಿಜಯನಗರದರಸರ ಕಾಲದಲ್ಲಿ ವೈಭವಯುತವಾಗಿ ಆಚರಣೆಯಲ್ಲಿದ್ದ ಈ ಹಬ್ಬ ಇಂದಿಗೂ ಜೀವಂತವಾಗಿ ಆಚರಣೆಯಲ್ಲಿದೆ. ಪ್ರಸ್ತುತ ದಿನಗಳಲ್ಲೂ ಕನ್ನಡನಾಡಿನ ಸಾಂಸ್ಕೃತಿಕ ನಗರವಾದ ಮೈಸೂರು ನಗರದಲ್ಲಿ ನಡೆಯುವ ದಸರಾಉತ್ಸವ ದೇಶವಿದೇಶಗಳಲ್ಲಿ ಮೈಸೂರು ದಸರಾ ಎಂತಲೇ ಪ್ರಖ್ಯಾತಿಗಳಿಸಿದೆ. ಇಲ್ಲಿ ನಡೆಯುವ ದಸರ ಉತ್ಸವವನ್ನು ನೋಡಲು ನೂರಾರು, ಸಾವಿರಾರು ದೇಶಿಯರು ಮತ್ತು ವಿದೇಶಿಯರು ಬರುತ್ತಿರುವುದು ನಾಡಿನ ಸಾಂಸ್ಕೃತಿಕ ಪರಂಪರೆಗೆ ಹೊಸ ಮೆರುಗನ್ನು ತಂದುಕೊಟ್ಟಿದೆ.

ದಸರ ಎಂಬ ಪದ 'ದಶಹರ್' ಪದದಿಂದ ಬಂದಿದೆ.[೫೯] ದಶಹರ್ ಎಂದರೆ ಹತ್ತುದಿನಗಳ ರಾತ್ರಿ ಹಬ್ಬವನ್ನು ಆಚರಿಸುವುದೆಂರ್ಥವಾಗುವುದರಿಂದ ಈ ಆಚರಣೆಗೆ 'ದಸರಾ' ಎಂಬ ಹೆಸರು ಬಂದಿದೆ. ಹಾಗೆಯೇ ಈ ದಸರಾ ಹಬ್ಬವನ್ನು 'ವಿಜಯದಶಮಿ', 'ನವರಾತ್ರಿ', 'ಮಹಾನವಮಿ' ಎಂಬ ಹೆಸರುಗಳಿಂದ ಕರೆಯಲಾಗಿದೆ. ಅಶ್ವಯುಜ ಶುಕ್ಲದಶಮಿಯಂದು ನಕ್ಷತ್ರಗಳು ಉದಯಿಸುವ ಕಾಲಕ್ಕೆ 'ವಿಜಯ' ಎಂದು ಹೆಸರು. ಅಂದರೆ ಇದು ಸಕಲ ಕಾರ್ಯಗಳ ಯಶಸ್ವಿಗೆ/ಸಿದ್ಧಿಗೆ ಪ್ರಶಸ್ತ ಮುಹೂರ್ತವಾಗಿದೆ. ಈ ದಿನ ದೇವಿಯು ಮಹಿಷಾಸುರ, ಶುಂಭ-ನಿಶುಂಭಾಧಿಗಳನ್ನು ಜಯಿಸಿದ ದಿನ, ಷಣ್ಮುಖ ತಾರಕಾಸುರನನ್ನು ಕೊಂದದಿನ, ಶ್ರೀರಾಮನು ರಾವಣನನ್ನು ಗೆದ್ದು ಶಮೀವೃಕ್ಷವನ್ನು ಪೂಜಿಸಿ ಅಯೋಧ್ಯೆಗೆ ತೆರಳಿದ ದಿನ, ಪಾಂಡವರು ಅಜ್ಞಾತವಾಸವನ್ನು ಯಶಸ್ವಿಯಾಗಿ ಪೂರೈಸಿ ಶಮೀವೃಕ್ಷಕ್ಕೆ ಕಟ್ಟಿದ್ದ ಆಯುಧವನ್ನು ಪಡೆದು ಬನ್ನಿ ಹಂಚಿದ ದಿನ, ವಿದೇಶಿ ಆಕ್ರಮಣವನ್ನು ತಡೆದು ಹಿಂದೂ ಸಂಸ್ಕೃತಿ-ಧರ್ಮದ ರಕ್ಷಣೆಗಾಗಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾದ ದಿನವಾಗಿದೆ. ಹಾಗಾಗೀ ಈ ದಿನದಂದು ವಿದ್ಯಾರಂಭ, ಉದ್ಯಮಾರಂಭ, ಯುದ್ದಾರಂಭ ಎಂಬ

ಮೊದಲಾದ ಏನೇ ಕೆಲಸ ಆರಂಭಿಸಿದರೂ ಜಯ ಖಚಿತವೆಂಬ ಭಾವನೆ ಜನಜನಿತವಾಗಿದೆ. ಈ ನಿಟ್ಟಿನಲ್ಲಿ ವಿದ್ಯೆಯ ಸಂಕೇತವಾಗಿ ಸರಸ್ವತಿ, ಉದ್ಯಮದ ಸಂಕೇತವಾಗಿ ಲಕ್ಷ್ಮೀಪೂಜೆ ಹಾಗೂ ಯುದ್ಧದ ಸಂಕೇತವಾಗಿ ಆಯುಧಪೂಜೆ, ವಾಹನಪೂಜೆಗಳನ್ನು ಮಾಡಲಾಗುತ್ತದೆ. ನಮ್ಮ ಅಂತರಂಗದಲ್ಲಿರುವ ತಾಮಸ-ರಾಜಸ ಗುಣಗಳ ಮೇಲೆ ಸಾತ್ವಿಕ ಗುಣಕ್ಕೆ ಜಯ ಲಭಿಸಿದಾಗ ಆಚರಿಸುವಂತಹ ಹಬ್ಬವೇ ವಿಜಯದಶಮಿ. ಅಂದರೆ ಇಲ್ಲಿ ಪೂಜೆಗೊಳ್ಳುವ ಮಹಾಕಾಳಿಯು-ತಾಮಸಗುಣಕ್ಕೆ ಮಹಾಲಕ್ಷ್ಮಿಯು-ರಾಜಸಗುಣಕ್ಕೆ ಹಾಗೂ ಮಹಾಸರಸ್ವತಿಯು-ಸಾತ್ವಿಕಗುಣಕ್ಕೆ ಸಂಕೇತವಾಗಿದ್ದಾರೆ.[೪೦] ಹಾಗಾಗೀ ನಾವು ತಾಮಸದಿಂದ ರಾಜಸದೆಡೆಗೆ, ರಾಜಸದಿಂದ ಸಾತ್ವಿಕದೆಡೆಗೆ ಬಂದಾಗ ಹಬ್ಬದ ಆಚರಣೆಯು ಅರ್ಥಪೂರ್ಣವಾಗುತ್ತದೆ.

ಈ ಹಬ್ಬದ ಮೊದಲನೆಯ ದಿನ ಅಂದರೆ ಅಮಾವಾಸ್ಯೆಯ ನಂತರದ ಪ್ರಥಮ, ದ್ವಿತೀಯ, ತೃತೀಯಗಳೆಂಬ ಮೂರುದಿನ ರೋಗ-ರುಜನ, ದುಃಖ-ದುಮ್ಮಾನಗಳ ಪರಿಹಾರಕ್ಕಾಗಿ ದುರ್ಗಾ ಪೂಜೆಯನ್ನು ಕೈಗೊಳ್ಳುತ್ತಾರೆ. ಎರಡನೆಯದಾಗಿ ಚತುರ್ಥಿ, ಪಂಚಮಿ, ಷಷ್ಠಿ ಎಂಬ ಈ ಮೂರು ದಿನ ಸುಖ-ಸಂಪತ್ತು ಸಮೃದ್ಧಿಗೊಳ್ಳುವಂತೆ ಲಕ್ಷ್ಮಿಯನ್ನು ಆರಾಧಿಸುವರು. ಮೂರನೆಯದಾಗಿ ಸಪ್ತಮಿ, ಅಷ್ಟಮಿ, ನವಮಿ ಎಂಬ ಈ ಮೂರು ದಿನ ವಿದ್ಯೆ, ಬುದ್ಧಿ, ಜ್ಞಾನಗಳು ಹೆಚ್ಚಾಗಲೆಂದು ಸರಸ್ವತಿಯನ್ನು ಪೂಜಿಸುವರು.[೪೧] ಹೀಗೆ ಈ ಮೂರು ಹಂತಗಳಲ್ಲಿ ಮಹಾಕಾಳಿ, ಮಹಾಲಕ್ಷ್ಮಿ ಹಾಗೂ ಮಹಾಸರಸ್ವತಿ ಎಂಬ ಶಕ್ತಿದೇವತೆಗಳ ಪೂಜಾರಾಧನೆಯು ೯ ದಿನಗಳ ಕಾಲ ನಡೆಯುವುದರಿಂದ ಈ ಹಬ್ಬಕ್ಕೆ 'ನವರಾತ್ರಿ', 'ಮಹಾನವಮಿ', ಎಂದು ಕರೆಯುವರು. ನಾಲ್ಕನೆಯದಾಗಿ ಈ ಹಬ್ಬದ ಪರಿಸಮಾಪ್ತಿಯೆಂಬಂತೆ ಬರುವ ಹತ್ತನೆಯ ದಿನವೇ ದಶಮಿ. ಈ ದಿನವನ್ನೆ ನಾವು 'ವಿಜಯದಶಮಿ' ಎನ್ನುವರು. ದಸರಾ/ವಿಜಯದಶಮಿ ಹಬ್ಬವನ್ನು ಮೊಳಕಾಲ್ಮೂರು ಪಟ್ಟಣದ ಮಟ್ಟಿಗೆ ಅತ್ಯಂತ ವಿಜೃಂಭಣೆಯಿಂದ ಆಚರಿಸುತ್ತಾರೆ.

ಪಟ್ಟಣದಲ್ಲಿ ದಸರಾ ಹಬ್ಬದ ಆಮಾವಾಸ್ಯೆಯ ದಿನದಂದು ಇಲ್ಲಿನ ಸ್ಥಳೀಯ ಜನರು ತಮ್ಮ ಮನೆಗಳಲ್ಲಿರುವ ವೃತ್ತಿಸಾಮಾಗ್ರಿಗಳಿಗೆ, ಕೃಷಿ ಉಪಕರಣಗಳಿಗೆ ಹಾಗೂ ತಾವು ದಿನನಿತ್ಯದ ಬದುಕಿನಲ್ಲಿ ಉಪಯೋಗಿಸುವ ವಿವಿಧಬಗೆಯ ವಾಹನಗಳಿಗೆ ಪೂಜೆ ಮಾಡುತ್ತಾರೆ. ಈ ಆಯುಧ ಪೂಜೆಯನ್ನು ಮಹಾಭಾರತದಲ್ಲಿ ಬರುವ ಪಾಂಡವರು ತಮ್ಮ ವನವಾಸವನ್ನು ಮುಗಿಸಿ ಯುದ್ಧಕ್ಕೆ ಹೋಗುವಾಗ ತಮ್ಮ ಆಯುಧಗಳನ್ನಿಟ್ಟಿದ್ದ ಬನ್ನಿಮರದಲ್ಲಿನ ಆಯುಧಗಳನ್ನು ತೆಗೆದುಕೊಂಡು ಅವುಗಳಿಗೆ ಪೂಜೆ ಸಲ್ಲಿಸಿ ನಂತರ ಯುದ್ಧರಂಗಕ್ಕೆ ತೆರಳಿ ಯುದ್ಧದಲ್ಲಿ ಜಯಗಳಿಸಿದರ ಪ್ರತೀಕವಾಗಿ ಇಂದಿಗೂ ನಮ್ಮ ಪೂರ್ವಜರು ಈ ಪೂಜೆಯನ್ನು ಕಡ್ಡಾಯವಾಗಿ ಪಾಲಿಸಿಕೊಂಡು ಬಂದಿದ್ದಾರೆ. ದಸರಾ ಹಬ್ಬದ ಕೊನೆಯ ಹತ್ತನೆಯ ದಿನವಾದ ದಶಮಿಯ ದಿನದಂದು ಊರಿನ ಪ್ರಮುಖ ಗಣ್ಯವ್ಯಕ್ತಿಗಳು ಹಾಗೂ ಸಾಮಾನ್ಯ ಜನರೆಲ್ಲರೂ ಒಟ್ಟಾಗಿ ಸೇರಿಕೊಂಡು ವಾದ್ಯವೃಂದಗಳೊಂದಿಗೆ ರಾಯದುರ್ಗದ ರಸ್ತೆಯಲ್ಲಿರುವ ಬನ್ನಿ ಮಹಾಕಾಳಿಯಮ್ಮನ ಗುಡಿಯ ಹತ್ತಿರವಿರುವ ಬನ್ನಿಮರದ

ಬಳಿ ಹೋಗಿ, ಆ ವೃಕ್ಷಕ್ಕೆ ವಿಶೇಷ ಪೂಜೆಯನ್ನು ಸಲ್ಲಿಸಿ ಅಲ್ಲಿಂದಲೇ ಬನ್ನಿ ಪತ್ರಿಯನ್ನು ವಿಲೇವಾರಿ ಮಾಡಿಕೊಳ್ಳಲು ಆರಂಭಿಸಿ "ಬನ್ನಿತಗೊಂಡು ಬಂಗಾರದಂದಿರು", "ನಮ್ಮ-ನಿಮ್ಮ ಸಂಬಂಧ ಬನ್ನಿಯಂತೆ ಬಂಗಾರವಾಗಿರಲಿ" ಎಂದು ಪರಸ್ಪರ ಒಬ್ಬರಿಗೊಬ್ಬರು ಶುಭಕೋರುತ್ತಾರೆ. ಅಷ್ಟೆ ಅಲ್ಲದೇ ಪಟ್ಟಣದಲ್ಲಿರುವ ಕಿರಿಯರು ಬನ್ನಿಯನ್ನು ತೆಗೆದುಕೊಂಡು ಊರಿನ ಹಿರಿಯರ, ಹಾಗೂ ಕುಟುಂಬ, ನೆರೆಹೊರೆಯಲ್ಲಿರುವ ತಂದೆ-ತಾಯಿ, ಅಣ್ಣ, ಅಕ್ಕ, ಅಜ್ಜಿ, ತಾತ ಎಂಬ ಹಿರಿಯರಿಗೆ ಕೊಟ್ಟು ಅವರ ಕಾಲುಗಳಿಗೆ ಕೈಮುಗಿದು ಅವರಿಂದ ಆಶೀರ್ವಾದವನ್ನು ಪಡೆಯುತ್ತಾರೆ.

ಒಟ್ಟಾರೆಯಾಗಿ "ನಾಡಹಬ್ಬ"ವಾಗಿ ವಿಶ್ವದ ಸಾಂಸ್ಕೃತಿಕವಲಯದಲ್ಲಿ ವಿಶೇಷವಾಗಿ ಗುರುತಿಸಿಕೊಂಡಿರುವ ಕನ್ನಡನಾಡಿನ ಭವ್ಯ, ವೈಭವಯುತ ಹಬ್ಬ ಈ ದಸರಾ ಹಬ್ಬವಾಗಿದೆ. ಮಳೆಗರೆದು, ಇಳೆ-ತಣಿದು ಬೆಳೆ-ಬೆಳೆದು, ಹೊಳೆ-ತೊರೆಗಳೆಲ್ಲಾ ತುಂಬಿ ನಿಂತ ಸಮಯದಲ್ಲಿ ಆಚರಿಸುವ ನವರಾತ್ರಿ ಉತ್ಸವವು ಪ್ರಕೃತಿ ಮಾತೆಯ ಪೂಜೆಯಾಗಿ, ದುಷ್ಟಶಕ್ತಿಯ ಮೇಲೆ ಶಿಷ್ಟಶಕ್ತಿಯ ವಿಜಯದ ಸಂಕೇತವಾಗಿ, ನಾಡಿನ ನಾಡಿ ಮಿಡಿಯುವ ಕಲೆ-ಸಂಸ್ಕೃತಿಯ ಪ್ರಚಾರ ಸಾಧನವಾಗಿ, ಆಧ್ಯಾತ್ಮಿಕ ವೃದ್ಧಿಯ ಕುರುಹಾಗಿ ನಿಲ್ಲಬಲ್ಲ ನಾಡಿನ ಸಾಂಸ್ಕೃತಿಕ ಹಿರಿಮೆಯ ಹಬ್ಬವಾಗಿದೆ ಎನ್ನಬಹುದು.

### ನಾಗರ ಪಂಚಮಿ

ಪ್ರಾಚೀನ ಭಾರತೀಯ ಸಂಸ್ಕೃತಿಯಲ್ಲಿ ಅನೇಕ ವೃಕ್ಷಗಳು, ಪ್ರಾಣಿ ಪಕ್ಷಿಗಳು, ಸರ್ಪ ವಿಶೇಷಗಳು ದಿವ್ಯಶಕ್ತಿಗಳ ಸಂಕೇತವಾಗಿ ಪೂಜಾರ್ಹವೆನಿಸಿವೆ. ಈ ನಿಟ್ಟಿನಲ್ಲಿ ಗಣಪತಿಯ ಹೊಟ್ಟೆಯ ಪಟ್ಟಿಯಾಗಿ, ಶಿವನ ಆಭರಣವಾಗಿ, ವಿಷ್ಣುವಿನ ಹಾಸಿಗೆಯಾಗಿ, ಕುಂಡಲೀನೀ ಶಕ್ತಿಯ ಪ್ರತೀಕವಾಗಿ ತ್ರಿಪುರ ಸಂಹಾರ ಕಾಲದಲ್ಲಿ ಮೇರುವೆಂಬ ಬಿಲ್ಲಿನ ಹೆದೆಯಾಗಿ, ಸಮುದ್ರ ಮಂಥನ ಕಾಲದಲ್ಲಿ ಮಂದರ ಪರ್ವತವೆಂಬ ಕಡಗೋಲಿಗೆ ಹಗ್ಗವಾಗಿ, ದುರ್ಯೋಧನನ ಧ್ವಜ ಚಿಹ್ನೆಯಾಗಿ,ಭೂಮಿಯನ್ನು ಹೊತ್ತ ಆದಿಶೇಷವಾಗಿ, ಪಾರ್ಶ್ವನಾಥ ತೀರ್ಥಂಕರನ ಶಿರೋಲಾಂಛನವಾಗಿ, ಲಕ್ಷ್ಮಣ, ಬಲರಾಮ, ಸುಬ್ರಹ್ಮಣ್ಯ ಸ್ವಾಮಿಗಳ ಅನೋನ್ಯ ಸ್ವರೂಪವಾಗಿರುವ 'ನಾಗ' ಭಾರತೀಯರಿಗೆಲ್ಲಾ ಪೂಜಾರ್ಹ ವಾಗಿದೆ[೮೨] ಶ್ರಾವಣ ಶುದ್ಧ ಪಂಚಮಿಗೆ ಹಬ್ಬ ಅಷ್ಟೆ ಅಲ್ಲದೆ ಈ ಹಬ್ಬ ಸ್ತ್ರೀಯರಿಗೆ/ಹೆಣ್ಣುಮಕ್ಕಳಿಗೆ 'ಮಾಂಗಲ್ಯಪ್ರದ' ಎಂದೂ, 'ಸಂತಾನಪ್ರದ' ವಾದುದೆಂಬ ನಂಬಿಕೆಯಿದೆ.[೮೩] ಈ ದಿನದಂದು ಭಯಭಕ್ತಿಯಿಂದ ನಾಗಾರಾಧನೆ ಮಾಡುವವರಿಗೆ ಸರ್ಪಭಯವಿರುವುದಿಲ್ಲ. ಹಾಗಾಗೀ ಈ ಹಬ್ಬವನ್ನು ಕನ್ನಡ ನಾಡಿನಾದ್ಯಂತ ಆಚರಿಸಲಾಗುತ್ತದೆ. ಅದರಲ್ಲೂ ಉತ್ತರ ಕರ್ನಾಟಕದಲ್ಲಂತೂ ಇದು ಅತಿ ದೊಡ್ಡ ಹಬ್ಬವಾಗಿ ಆಚರಣೆಯಲ್ಲಿದೆ.[೮೪] ಇಲ್ಲಿ ಈ ಹಬ್ಬದ ದಿನದಂದು ಹೆಣ್ಣು ಮಕ್ಕಳನ್ನು ಆಹ್ವಾನಿಸಿ, ಉಡುಗೊರೆ ನೀಡಿ, ಗೌರವಿಸುವಂತಹ ಪರಂಪರೆ ತಲೆತಲೆಮಾರುಗಳಿಂದ ಇಂದಿಗೂ ಜೀವಂತ ವಾಗಿದೆ. ಈ ಹಬ್ಬವನ್ನು ನಾಗರಪಂಚಮಿ, ನಾಗರ ಅಮಾವಾಸ್ಯೆ, ನಾಗಚೌತಿ, ಪಂಚಮಿ ಹಬ್ಬ

ಎಂಬ ಹಲವಾರು ಹೆಸರುಗಳಿಂದ ಕರೆಯಲಾಗಿದೆ. ವಿಶೇಷವಾಗಿ ಮೂರು ದಿನಗಳ ಕಾಲ ಅತ್ಯಂತ ಸಂತೋಷ ಸಂಭ್ರಮದಿಂದ ಆಚರಿಸಲ್ಪಡುವ ಈ ಹಬ್ಬದ ಮೊದಲನೆಯ ದಿನವಾದ ನಾಗರ ಅಮಾವಾಸೆಯ ದಿನವನ್ನು ಪಂಚಮಿಯ ದಿನವೆಂದು, ಎರಡನೆಯ ದಿನವನ್ನು 'ನಾಗಚೌತಿ' ದಿನವೆಂದು, ಕೊನೆಯ ಮೂರನೆಯ ದಿನವನ್ನು ನಾಗರ ಪಂಚಮಿ ಎಂದು ಆಚರಿಸಲಾಗುತ್ತದೆ.

ಶುದ್ಧ ಶ್ರಾವಣ ಪಂಚಮಿಯ ದಿನದಂದೇ ನಾಗರ ಪಂಚಮಿಯನ್ನು ಆಚರಿಸಲಿಕ್ಕೆ ಜನಪದರಲ್ಲಿ ಬೆಳೆದು ಬಂದಿರುವ ಮೌಖಿಕ ಕಥೆಯೇ ಪ್ರೇರಣೆಯಾಗಿದೆಂಬುದು ಹಲವಾರು ಜನಪದರುಗಳ ಅಭಿಪ್ರಾಯವಾಗಿದೆ. ಅಂದರೆ ಆಷಾಢ ಮುಗಿದು ಶ್ರಾವಣ ಕಾಲಿಡುತ್ತಿದ್ದಂತೆಯೇ ಗಂಡನ ಮನೆಯಲ್ಲಿರುವ ಹೆಣ್ಣು ಮಕ್ಕಳು ತವರಿನಿಂದ ಬರುವ ಕರೆಯೋಲೆಯನ್ನು ಎದುರು ನೋಡುತ್ತಿರುತ್ತಾರೆ. ಈ ಹಬ್ಬದಲ್ಲಿ ತವರಿನಿಂದ ಗಂಡನ ಮನೆ ಸೇರಿದ ಮನೆಯ ಮಗಳನ್ನು ಹಾಗೂ ಹೊಸದಾಗಿ ವಿವಾಹವಾದ ಮನೆಯ ಹೆಣ್ಣುಮಕ್ಕಳನ್ನು ವರನ ಮನೆಯಿಂದ ತವರಿಗೆ ಆಹ್ವಾನಿಸಿ ಅವರಿಗೆ ಉಡುಗೊರೆಯನ್ನು (ಹೆಚ್ಚಾಗಿ ಬಟ್ಟೆಯನ್ನು) ನೀಡಿ, ವಿಶೇಷ ಉಪಚಾರವನ್ನು ಮಾಡುತ್ತಾರೆ. ಈ ಪದ್ಧತಿಯು ಅಧ್ಯಯನ ಕ್ಷೇತ್ರದಲ್ಲಿಯು ನೂರಾರು ವರ್ಷಗಳಿಂದ ಮುಂದುವರೆದುಕೊಂಡು ಬಂದಿದೆ. ಈ ಹಬ್ಬದಲ್ಲಿ ಹೆಣ್ಣುಮಕ್ಕಳು ಶ್ರಾವಣ ಮಾಸದ ಪ್ರತಿ ಶನಿವಾರ ಮತ್ತು ಸೋಮವಾರದ ದಿನಗಳಂದು ವಿಶೇಷವಾಗಿ ಪೂಜೆ-ಪುನಸ್ಕಾರಗಳನ್ನು ಕೈಗೊಳ್ಳುವುದರ ಜೊತೆಗೆ ಸಮೀಪದಲ್ಲಿರುವ ಹಾವಿನ ಹುತ್ತಕ್ಕೊ ಇಲ್ಲ ಕಲ್ಲಿನ ನಾಗರ ವಿಗ್ರಹಗಳಿಗೆ ಹಾಲೆರೆಯುವುದರ ಮೂಲಕ ತಮ್ಮ ಭಕ್ತಿಯನ್ನು ಮೆರೆಸಿ ಮನೆಯಲ್ಲಿ ಮಾಡಿದ ಸಿಹಿ ಅಡುಗೆಯನ್ನು ಸವಿದು ಸಂತೋಷದಿಂದ ಮನೆ ಮಂದಿಯೆಲ್ಲನಕ್ಕು ನಲಿಯುತ್ತಾರೆ. ಇತ್ತೀಚಿನ ದಿನಗಳಲ್ಲಂತೂ ಈ ಹಬ್ಬವನ್ನು "ರಕ್ಷಾಬಂಧನ"ದ ದಿನವೆಂತಲೂ ಆಚರಿಸಲಾಗಿದೆ. ಅಂದರೆ ಬೇರೆ ಬೇರೆ ಊರುಗಳಲ್ಲಿರುವ ಅಣ್ಣಂದಿರು, ಹಾಗೂ ತಮ್ಮಂದಿರುಗಳು ತಮ್ಮ ಮನೆಯ ಅಕ್ಕ ತಂಗಿಯರಿಂದ ರಕ್ಷಾಬಂಧನ(ರಾಖಿ)ವನ್ನು ಕಟ್ಟಿಸಿಕೊಳ್ಳಲು ಮನೆಗಳಿಗೆ ಬರುತ್ತಾರೆ. ಇದರಿಂದ ಅವರ ನಡುವಿನ ಭಾಂಧವ್ಯ, ಪ್ರೀತಿ, ಪ್ರೇಮ, ಗೌರವಗಳು ಇನ್ನಷ್ಟು ಗಟ್ಟಿಗೊಳ್ಳುತ್ತವೆ. ಅಂದರೆ ಸೋದರ-ಸೋದರಿಯರ, ಅಣ್ಣ-ತಂಗಿ, ಅಕ್ಕ-ತಮ್ಮಂದಿರುಗಳ ನಡುವಿನ ಸೋದರತ್ವವನ್ನು ಎತ್ತಿತೋರಿಸುವಂತಹ ಹಬ್ಬವಾಗಿದೆ. ಒಟ್ಟಾರೆಯಾಗಿ ಇಡೀ ಭಾರತದಾದ್ಯಂತ ಒಂದಿಲ್ಲೊಂದು ರೀತಿಯಿಂದ ಬಳಕೆಯಲ್ಲಿರುವ ಈ ಹಬ್ಬ ಅಂತರಂಗದಲ್ಲಿ ಭಯ ನಿವಾರಕವಾಗಿ, ಬಹಿರಂಗದಲ್ಲಿ ಹೆಣ್ಣಿನ ತವರಿನ ಪ್ರೀತಿಯ ಸಂಕೇತವಾಗಿ ಬೆಳೆದು ಬಂದಿದೆ ಎನ್ನಬಹುದು. ಮದುವೆಯಾಗಿ ಗಂಡನ ಮನೆಸೇರಿದ ಹೆಣ್ಣುಮಕ್ಕಳಿಗೆ ಇರುವ ತವರಿನ ಪ್ರೀತಿಯನ್ನು ಬಹಳಷ್ಟು ಮೌಲ್ಯಯುತವಾಗಿ ಕಾಣಿಸುವಂತಹ ಹಬ್ಬವೆಂದರೆ ಈ ನಾಗರ ಪಂಚಮಿ ಹಬ್ಬವಾಗಿದೆ.

### ದೀಪಾವಳಿ

ಭಾರತದ ಕಾಶ್ಮಿರದಿಂದ ಕನ್ಯಾಕುಮಾರಿಯವರೆಗೆ ಪ್ರಾಂತಬೇಧವಿಲ್ಲದೇ ಎಲ್ಲಾ ಹಿಂದೂಗಳು ತಮ್ಮ ಬಂಧು-ಭಾಂಧವರೊಂದಿಗೆ ಉತ್ಸಾಹದಿಂದ ಆಚರಿಸುವ ದೀಪಾವಳಿ ಹಬ್ಬವು ನಮ್ಮನ್ನು

ಕತ್ತಲೆಯಿಂದ ಬೆಳಕಿನಡೆಗೆ, ಮೃತ್ಯುವಿನಿಂದ ಅಮೃತದೆಡೆಗೆ ಕೊಂಡೊಯ್ಯುವ ಬೆಳಕಿನ ಹಬ್ಬವಾಗಿದೆ. ಶರದ್ರುತುವಿನ ಮಧ್ಯಭಾಗದಲ್ಲಿ ಬರುವ ಈ ಹಬ್ಬದ ಸುಸಮಯ, ಅನ್ನದೇವರ ಅವತಾರಕಾಲವಾಗಿದೆ. ಅಂದರೆ ಈ ಹಬ್ಬದ ವೇಳೆಗೆ ರೈತನು ಬೆಳೆದ ಮುಂಗಾರು ಬೆಳೆಯ ಧಾನ್ಯಗಳು ಲಕ್ಷ್ಮೀಯ ರೂಪದಲ್ಲಿ ಆತನ ಕೈ ಸೇರಿರುತ್ತದೆ. ಭಾರತದಾದ್ಯಂತ ಆಚರಿಸುವ ಈ ಹಬ್ಬವು ಉತ್ತರ ಭಾರತದವರಿಗೆ ವರ್ಷದ ಆರಂಭದ ಅತಿ ಶ್ರೇಷ್ಠ ಹಬ್ಬವಾಗಿದೆ. ಏಕೆಂದರೆ ಇಲ್ಲಿ ಬಳಕೆಯಲ್ಲಿರುವ ವಿಕ್ರಮ ಸಂವತ್ಸರ ಕಾರ್ತಿಕ ಪಾಡ್ಯದಿಂದ ಆರಂಭವಾಗುವುದರಿಂದ ಅವರಿಗೆ ಬಲಿಪಾಡ್ಯ ವರ್ಷದ ಆರಂಭದ ದಿನವಾಗಿದೆ. ಹಾಗಾಗಿ ಉತ್ತರ ಭಾರತದವರು ಈ ಬಲಿಪಾಡ್ಯದ ದಿನವನ್ನು ಶ್ರೀರಾಮನು ಲಂಕೆಯಿಂದ ಮರಳಿಬಂದು ಪಟ್ಟಾಭಿಷೇಕಗೊಂಡ ದಿನವೆಂತಲೂ, ಪಾಂಡವರು ಅಜ್ಞಾತವಾಸವನ್ನು ಯಶಸ್ವಿಯಾಗಿ ಪೂರೈಸಿದ ದಿನವೆಂತಲೂ ಹಾಗೂ ಶ್ರೀಕೃಷ್ಣನು ಗೋವರ್ಧನ ಪರ್ವತವನ್ನು ಎತ್ತಿ ಹಿಡಿದ ದಿನ ಎಂತಲೂ ಕರೆಯುತ್ತಾರೆ.[೬೫] ದೀಪಾವಳಿ ಹಬ್ಬವು ಉತ್ತರ ಭಾರತದವರಿಗೆ ವರ್ಷಾರಂಭದ ದಿನವಾದರೆ ದಕ್ಷಿಣ ಭಾರತದವರಿಗೆ ಯುಗಾದಿ ಹಬ್ಬವಿದ್ದಂತೆ. ಜ್ಯೋತಿ ಸ್ವರೂಪಿಣಿಯಾಗಿರುವ ಮಹಾಲಕ್ಷ್ಮೀಯನ್ನು ಪೂಜಿಸುವುದು ಈ ಹಬ್ಬದ ವಿಶೇಷವಾಗಿದೆ. ಈ ಹಬ್ಬವನ್ನು ನಾಡಿನಾದ್ಯಂತ ಪ್ರಮುಖವಾಗಿ ಮೂರು ದಿನಗಳ ಕಾಲ ಆಚರಿಸುತ್ತಾರೆ. ತುಂಬಾ ವಿಶೇಷವಾದಂತಹ ವಿಭಿನ್ನವಾದ, ವೈವಿಧ್ಯಮಯ ವಾದ ಆಚರಣೆಗಳನ್ನು ಮೈಗೂಡಿಸಿಕೊಂಡು ಬಂದಿದ್ದಾರೆ. ಮೊದಲದಿನವಾದ ನರಕ ಚತುರ್ದಶಿಯು ಶ್ರೀಕೃಷ್ಣನು ನರಕಾಸುರನನ್ನು ಸಂಹಾರಿಸಿದ ದಿನವಾಗಿದ್ದು, ಇದು ಅಶ್ವೀನ ಬಹುಳ ಹದಿನಾಲ್ಕನೆಯ ದಿನವಾಗಿದೆ. ಇಲ್ಲಿ ನರಕ ಎಂದರೆ ಸಾಮಾನ್ಯವಾಗಿ ಕತ್ತಲೆ, ಪೀಡೆ, ಕಷ್ಟ, ಅಜ್ಞಾನ ಎಂದು ಅರ್ಥೈಸಿಸಬಹುದು. ಚತುರ್ದಶಿ ಎಂದರೆ ವಿದ್ಯೆಗೆ ಪರ್ಯಾಯವಾಗಿರುವ ಮತ್ತೊಂದು ಪದವಾಗಿದೆ ಎನ್ನಬಹುದು. ಎರಡನೆಯ ದಿನವಾದ ದೀಪಾವಳಿ ಅಮಾವಾಸ್ಯೆಯ ದಿನ ವಿಷ್ಣು-ಲಕ್ಷ್ಮೀಯರ ವಾರ್ಷಿಕ ಪುನರ್‌ಮಿಲನದ ದಿನವಾಗಿದ್ದರಿಂದ ಲಕ್ಷ್ಮೀಪೂಜೆಗೆ ಅತ್ಯಂತ ಪ್ರಾಶಸ್ತ್ಯವಾದ ದಿನವಾಗಿದೆ. ಅಮಾವಾಸ್ಯೆಯ ಮಬ್ಬುಗತ್ತಲಿನ ರಾತ್ರಿಯ ವೇಳೆಯಲ್ಲಿ ಹಚ್ಚುವ ದೀಪಗಳ ಸಾಲುಗಳು ಈ ಕತ್ತಲೆಯ ರಾತ್ರಿಗೆ ಎಲ್ಲಿಲ್ಲದ ಕಾಂತಿಯನ್ನು ತುಂಬುತ್ತದೆ. ನಂತರದ ಕೊನೆಯ ದಿನದ ಆಚರಣೆಯ ದಿನವಾಗಿ ಉಳಿದು ಬರುವ ಕಾರ್ತಿಕ ಶುದ್ಧ ಬಲೀಪ್ರತಿಪದೆಯ ದಿನವಾದ ಬಲಿಪಾಡ್ಯಮಿಯನ್ನು ಮಹಾವಿಷ್ಣು ವಾಮನ ಅವತಾರವನ್ನು ತಾಳಿ ಬಲಿಚಕ್ರವರ್ತಿಯನ್ನು ಪಾತಾಳಕ್ಕೆ ಅಟ್ಟಿದ್ದರ ಸವಿ ನೆನಪಿಗಾಗಿ ಆಚರಿಸುವಂತಹ ದಿನವಾಗಿದೆ.[೬೬] ಈ ದಿನದಂದು ಜನರೆಲ್ಲರೂ ಹೊಸ ಉಡುಪನ್ನು ಧರಿಸಿ ಸಂತೋಷ ಸಂಭ್ರಮಗಳಿಂದ ಬಲಿಯನ್ನು ಆರಾಧಿಸುತ್ತಾರೆ.

ಪಟ್ಟಣದಲ್ಲಿ ಆಚರಿಸುವ ಪ್ರಮುಖ ಹಬ್ಬಗಳಲ್ಲಿ ಒಂದಾಗಿರುವ ದೀಪಾವಳಿಯನ್ನು ಬೆಳಕಿನ ಹಬ್ಬವನ್ನಾಗಿ ಆಚರಿಸುತ್ತಾರೆ. ಈ ಸಮಯದಲ್ಲಿ ಪಟ್ಟಣದಲ್ಲಿರುವ ಮನೆಗಳು, ದೇವಾಲಯಗಳಲ್ಲಷ್ಟೆ ಅಲ್ಲದೇ ಇಡೀ ಪಟ್ಟಣವೇ ಝುಗಝುಗಿಸುವ ದೀಪಾಲಂಕಾರಗಳಿಂದ ಪ್ರಜ್ವಲಿಸುತ್ತದೆ. ಇದು ನೋಡುಗರ ಕಣ್ಮನಗಳಿಗೆ ಆಹ್ಲಾದವನ್ನುಂಟು ಮಾಡುತ್ತದೆ. ಇಲ್ಲಿ ಈ ಹಬ್ಬವನ್ನು ವಿಜೃಂಭಣೆ

ಯಿಂದಲ್ಲದಿದ್ದರೂ ಊರಿನ ಜನರ ಯೋಗ್ಯತಾನುಸಾರವಾಗಿ ಅತ್ಯಂತ ಸಡಗರದಿಂದ ಆಚರಿಸುತ್ತಾರೆ. ಪಟ್ಟಣದಲ್ಲಿ ಶ್ರೀಮಂತರು, ವ್ಯಾಪಾರಸ್ಥರ ಮನೆಗಳಲ್ಲಿ ವಿಶೇಷವಾಗಿ ಲಕ್ಷ್ಮಿ ಪೂಜೆಯನ್ನು ಮಾಡುತ್ತಾರೆ. ಅಷ್ಟೆ ಅಲ್ಲದೆ ಈ ಪೂಜೆಯನ್ನು ಅಂಗಡಿ, ಹೋಟೆಲ್‌ಗಳ ಅಭಿವೃದ್ಧಿ ಮತ್ತಷ್ಟು ಹೆಚ್ಚಿನ ಮಟ್ಟದಲ್ಲಿ ಬೆಳವಣಿಗೆ ಹೊಂದಿ, ಇನ್ನೂ ಉತ್ತಮ/ಉನ್ನತವಾದ ಸ್ಥಿತಿಯನ್ನು ತಲುಪಬಹುದೆಂಬ ಆಕಾಂಕ್ಷೆಯಿಂದ ಕೈಗೊಳ್ಳುತ್ತಾರೆ. ಈ ಹಬ್ಬದಲ್ಲಿ ದೊಡ್ಡವರು, ಚಿಕ್ಕವರು, ಮಕ್ಕಳು, ಮುದುಕರು ಎನ್ನದೇ ಎಲ್ಲರೂ ಸಡಗರದಲ್ಲಿ ಪಾಲ್ಗೊಂಡು ವಿವಿಧ ರೀತಿಯ ಸದ್ದು ಮಾಡುವ, ಮುಗಿಲೆತ್ತರಕ್ಕೆ ಹಾರಿ ಗಗನಕ್ಕೆ ಚುಂಬಿಸುವಂತಹ ನಾನಾ ಬಗೆಯ ಪಟಾಕಿಗಳನ್ನು ಸಿಡಿಸುವುದರ ಮೂಲಕ ಸಂಭ್ರಮದಿಂದ ನಲಿಯುತ್ತಾರೆ. ಅಷ್ಟೆ ಅಲ್ಲದೆ ಈ ಹಬ್ಬದಲ್ಲಿ ಅಕ್ಕ, ತಂಗಿ, ಸೊಸೆಯಂದಿರಿಗೆ, ಉಡುಗೊರೆಯಾಗಿ ಅವರವರ ಆರ್ಥಿಕತೆಗೆ ತಕ್ಕಂತೆ ಬಟ್ಟೆ ಬಂಗಾರ ಮತ್ತು ಹಣವನ್ನು ಉಡುಗೊರೆಯಾಗಿ ನೀಡಿ ಸತ್ಕರಿಸುತ್ತಾರೆ. ದೀಪಾವಳಿಯ ಈ ಮೂರು ಮಹತ್ವದ ದಿನಗಳಲ್ಲಿ ದೇವಾಲಯ, ಮಠ–ಮಂದಿರಗಳಲ್ಲಿ ಹಾಗೂ ಮನೆಯ ಪ್ರವೇಶದ್ವಾರದ ಇಕ್ಕೆಲಗಳಲ್ಲಿ ಎಣ್ಣೆದೀಪಗಳನ್ನು ಸಾಲಾಗಿ ಜೋಡಿಸಿ ಉರಿಸುತ್ತಾರೆ. ಏಕೆಂದರೆ ದೀಪಾವಳಿಯಲ್ಲಿ ದೀಪ ಉರಿದರೆ ಪಾಪ ಉರಿದಂತೆ, ದೀಪ ಉರಿಯುವ ಮನೆಯಲ್ಲಿ ಅಪಮೃತ್ಯು ಇರದೇ ಆ ಮನೆಯಲ್ಲಿ ಸಕಲ ಸಂಪತ್ತು ನೆಲೆಗೊಳ್ಳುತ್ತದೆಂಬ ಬಲವಾದ ನಂಬಿಕೆ ಸ್ಥಳೀಯರಲ್ಲಿ ಬೇರೂರಿರುವುದೇ ಕಾರಣವಾಗಿದೆ. ಒಟ್ಟಾರೆಯಾಗಿ ಪ್ರಾಚೀನ ಕಾಲದ ಭಾಗ್ಯದ ಸ್ಮಾರಕವಾಗಿ, ಭವಿಷ್ಯತ್‌ಕಾಲದ ಸುಖದ ಸಂಕೇತವಾಗಿ, ವರ್ತಮಾನ ಕಾಲದ ಸಂಪತ್ತಿನ ಸ್ಮರಣೆಯಾಗಿ, ಆತ್ಮೋನ್ನತಿಯ ಮಾರ್ಗವಾಗಿ, ಅಜ್ಞಾನವನ್ನು ಹೊಡೆದೊಡಿಸಿ ಸುಜ್ಞಾನವನ್ನು ಪಡೆಯುವ ಕುರುಹಾಗಿ, ಬಲೀಂದ್ರನಂತಹ ತ್ಯಾಗಜೀವಿಯ ಸವಿನೆನಪಿಗಾಗಿ ಆಚರಿಸುವಂತಹ ಬೆಳಕಿನ ಹಬ್ಬವಾಗಿರುವ ದೀಪಾವಳೀ ನಾಡಿನಾದ್ಯಂತ ಆಚರಣೆಯಲ್ಲಿದೆ.

**ಶಿವರಾತ್ರಿ**

ಹಿಂದೂ ಧಾರ್ಮಿಕ ಪರಂಪರೆಯಲ್ಲಿ ಮಹಾಶಿವರಾತ್ರಿಯ ಆಚರಣೆಯು ಬಹಳ ಪ್ರಮುಖವಾದುದಾಗಿದೆ. ಅದರಲ್ಲೂ ಶೈವ ಧರ್ಮಿಯರಿಗೆ, ಅಂದರೆ ಶಿವನ ಆರಾಧಕರಿಗೆ ವಿಶೇಷವಾದ ಹಬ್ಬವೆಂದರೆ ಶಿವರಾತ್ರಿಯಾಗಿದೆ. ಮಾಘಮಾಸ ಕೃಷ್ಣಪಕ್ಷದ ಚರ್ತುದಶಿಯಂದು ಆಚರಿಸುವ ಶಿವರಾತ್ರಿ ಶಿವನಿಗೆ ಪ್ರಿಯವಾದ ರಾತ್ರಿಯಾಗಿದೆ. ಈ ಶಿವರಾತ್ರಿಯನ್ನು 'ವ್ರತರಾಜ', ಉಪವಾಸದ ಹಬ್ಬ ಎಂತಲೂ ಕರೆಯುವರು. ಈ ಶಿವರಾತ್ರಿಯ ಆರಾಧ್ಯದೈವ ಶಿವನಾದರೆ, ವ್ರತಾಚರಣೆಯಲ್ಲಿ 'ಉಪವಾಸ' ಮತ್ತು ಜಾಗರಣೆಗಳು ಬಹುಮುಖ್ಯವಾಗಿವೆ.[೪೭] ಶಿವರಾತ್ರಿಯ ದಿನದಂದು ಉಪವಾಸವೇ ಪ್ರಮುಖವಾದ ಅಂಗವಾಗಿರುವುದರಿಂದ ಇದು 'ಉಪವಾಸದ ಹಬ್ಬ' ಎಂತಲೂ ಹೆಸರಾಗಿದೆ. ಇಡೀ ನಾಡಿನಾದ್ಯಾಂತ ಆಚರಣೆಯಲ್ಲಿರುವ ಈ ಹಬ್ಬಕ್ಕೆ ಸಂಬಂಧಿಸಿದಂತೆ ಜನರಲ್ಲಿರುವ ಶಿವನ ಮೇಲಿನ ಭಕ್ತಿ, ನಂಬಿಕೆ ಅಚಲವಾದುದಾಗಿದೆ. ಈ ದಿನದಂದು ಪಟ್ಟಣದಲ್ಲಿರುವ ಎಲ್ಲಾ ದೇವಾಲಯಗಳಲ್ಲಿ ಅದರಲ್ಲೂ ಪ್ರಮುಖವಾಗಿ ಶಿವದೇವಾಲಯ, ಈಶ್ವರನ ಗುಡಿಗಳಲ್ಲಿ

ಸೂರ್ಯೋದಯದಿಂದ ಮತ್ತೆ ಸೂರ್ಯೋದಯವಾಗುವವರೆಗೆ ಅಂದರೆ ಬೆಳಿಗ್ಗೆಯಿಂದ ರಾತ್ರಿಯವರೆಗೂ ನಿರಂತರವಾಗಿ ಪೂಜೆ-ಪುನಸ್ಕಾರಗಳು ನಡೆಯುತ್ತವೆ. ಅಷ್ಟೆ ಅಲ್ಲದೇ ಇಡೀ ರಾತ್ರಿಯಲ್ಲಾ ಸ್ಥಳೀಯರು ಜಾಗರಣೆ ಮಾಡುವುದರ ಸಲುವಾಗಿ ದೇವಾಲಯಗಳ ಬಳಿಯಲ್ಲಿ ಹಿರಿಯ ತಲೆಮಾರಿನವರು ಭಜನೆಯ ಹಾಡುಗಳು, ಜಾನಪದಗೀತೆ, ಲಾವಣೆಗಳನ್ನು ಹಾಡುತ್ತಾ, ಭಜನೆ ಮಾಡುತ್ತಾ ಶಿವನ ಮಹಾಮಹಿಮೆಯನ್ನು ಪ್ರಸಾರಗೊಳಿಸುವುದರ ಮೂಲಕ ಜಾಗರಣೆಯನ್ನು ಕೈಗೊಂಡರೆ, ಕಿರಿಯರು ಆಸಕ್ತಿ ಇದ್ದವರು ಬೆರಳೆಣಿಕೆಯಷ್ಟು ಜನರು ಈ ರೀತಿಯ ಆಚರಣೆಯಲ್ಲಿ ತೊಡಗಿದರೇ ಮತ್ತೆ ಕೆಲವರು ನಿದ್ದೆಯನ್ನು ಹೋಗಲಾಡಿಸುವ ಸಲುವಾಗಿ ಭಕ್ತಿಕಾರ್ಯಗಳನ್ನು ಮಾಡಿದರೆ ಕೆಲವರು, ಸಿನಿಮಾ, ಮನೊರಂಜನೆ, ನೋಡುವುದು, ಇಸ್ಪೀಟ್ ಆಟ ಆಡುವುದರ ಮೂಲಕ ಜಾಗರಣೆಯನ್ನು ಕಳೆಯುತ್ತಾರೆ. ಅಷ್ಟೆ ಅಲ್ಲದೇ ಈ ಹಬ್ಬದ ಸಮಯದಲ್ಲಿ ಪಟ್ಟಣದ ಕೆಲವು ಶೈವ ದೇವಾಲಯಗಳಲ್ಲಿ ಭಕ್ತರಿಗೆ ಪಾನಕವನ್ನು ಮತ್ತೆ ಕೆಲವು ದೇವಾಲಯಗಳಲ್ಲಿ ಅನ್ನ ದಾಸೋಹವನ್ನು ನೀಡಲಾಗುತ್ತದೆ. ಈ ಶಿವರಾತ್ರಿಯ ಪ್ರಮುಖ ವ್ರತಾಚರಣೆಯಾದ ಜಾಗರಣೆಯ ಪಾಲನೆಯಲ್ಲಿ ಇಡೀ ರಾತ್ರಿ ನಿದ್ದೆಮಾಡದೇ ಶಿವನ ಸ್ಮರಣೆಯಲ್ಲಿ ಕಳೆಯುತ್ತಾರೆ. ಜಾಗರಣೆ ಸಲುವಾಗಿ ಕೆಲವು ದೇವಾಲಯಗಳಲ್ಲಿ ಭಜನೆ, ಪುರಾಣ ಪ್ರವಚನ, ಭಕ್ತಿಗೀತೆ ಹಾಗೂ ಲಾವಣಿಗಳನ್ನು ಹಾಡುವುದರ ಮೂಲಕ ಶಿವನ ಮಹಾಮಹಿಮೆಯನ್ನು ಸಾರಲಾಗುತ್ತದೆ. ಇದರ ಲಾಭ ಪಡೆಯಲು ಆ ರಾತ್ರಿ ಪಟ್ಟಣದ ದೇವಾಲಯವನ್ನು ಬಳಿ ಭಕ್ತಾದಿಗಳು ತಂಡತಂಡದೋಪಾದಿಯಲ್ಲಿ ತೆರಳಿ, ಆಲಿಸಿ ಸಕ್ರಿಯವಾಗಿ ತಾವೂ ಸಹ ಭಾಗಿಯಾಗುತ್ತಿದ್ದರು. ಈ ರೀತಿಯ ಧಾರ್ಮಿಕ ಚಟುವಟಿಕೆಗಳಲ್ಲಿ ಭಾಗವಹಿಸುವವರ ಸಂಖ್ಯೆ ಇತ್ತೀಚಿನ ದಿನಗಳಲ್ಲಿ ತೀರ ಗಣನೀಯವಾಗಿ ಇಳಿಮುಖವಾಗಿದೆ. ಕಾರಣವೆಂದರೆ ಮಾಹಿತಿ ತಂತ್ರಜ್ಞಾನದ ಬೆಳವಣಿಗೆಯೇ ಆಗಿದೆ. ಅಂದರೆ ಇಂದು ಮನೆಮನೆಯಲ್ಲೂ ಟಿ.ವಿ., ಕಂಪ್ಯೂಟರ್ ಮಾಧ್ಯಮಗಳು, ನಗರ-ಪಟ್ಟಣಗಳಲ್ಲಿ-ಸಿನಿಮಾಥಿಯೇಟರ್‌ಗಳ ಸಂಖ್ಯೆ ಹೆಚ್ಚಾದುದರಿಂದ ಜನರು ತಮ್ಮ ಮನೆಗಳಲ್ಲಿನ ಟಿ.ವಿ.ಗಳ ಮುಂದೆ ಕುಳಿತು ಇಡೀ ರಾತ್ರಿಯ ಜಾಗರಣೆಯನ್ನು ಮುಗಿಸುತ್ತಾರೆ. ಅದರಲ್ಲೂ ಇತ್ತೀಚಿನ ಯುವ ಪೀಳಿಗೆಯಂತೂ ಈ ಹಬ್ಬದಲ್ಲಿ ಕಾನೂನನ್ನು ಮೀರಿ ತಮ್ಮ ಮನೋರಂಜನೆಗಾಗಿ ಇಸ್ಪಿಟ್ ಆಟ, ಜೂಜಾಟದಲ್ಲಿಯೇ ಹೆಚ್ಚಾಗಿ ತೊಡಗುವುದನ್ನು ಕಾಣುತ್ತೇವೆ. ಈ ಹಬ್ಬದಲ್ಲಿ ಜಾಗರಣೆಯಷ್ಟೆ ಪ್ರಮುಖವಾದುದು ಉಪವಾಸವಾಗಿದೆ. ಪಟ್ಟಣದಲ್ಲಿನ ಜನರು ಇಡೀ ದಿನ ಪೂರ್ಣ ಪ್ರಮಾಣದ ಆಹಾರವನ್ನು ಸೇವಿಸದೇ ಹಣ್ಣು ಹಂಪಲು, ಕಾರ-ಮಂಡಕ್ಕಿ, ಟೀ, ಕಾಫಿ, ಹಾಲು, ನೀರನ್ನು ಮಾತ್ರ ಸೇವಿಸಿ ಭಕ್ತಿಯಿಂದ ದೇವರಿಗೆ ಪೂಜೆಸಲ್ಲಿಸುವ ಪರಂಪರೆಯನ್ನು ಬೆಳೆಸಿಕೊಂಡು ಬಂದಿದ್ದಾರೆ. ಇದು ಪುರುಷರಿಗಿಂತ ಸ್ತ್ರೀಯರಲ್ಲಿಯೇ ಹೆಚ್ಚಾಗಿ ಬೆಳೆದು ಬಂದಿರುವುದನ್ನು ಕಾಣುತ್ತೇವೆ.

**ಸಂಕ್ರಾಂತಿ**

ಪಟ್ಟಣದಲ್ಲಿ ಆಚರಿಸುವ ಪ್ರಮುಖ ಹಬ್ಬಗಳಲ್ಲಿ ಸಂಕ್ರಾಂತಿಯೂ ಒಂದಾಗಿದೆ. ಸೂರ್ಯನ ಚಲನೆಯೊಂದಿಗೆ ಮಿಳಿತಗೊಂಡಿರುವ ಹಬ್ಬವೇ ಸಂಕ್ರಾಂತಿ ಹಬ್ಬವಾಗಿದೆ. ಈ ಸಂಕ್ರಾಂತಿ ಹಬ್ಬವನ್ನು

'ಮಕರ ಸಂಕ್ರಾಂತಿ,/ಸಂಕ್ರಮಣ' ಎಂತಲೂ ಕರೆಯುವರು. ಅಂದರೆ ಜಗತ್ತನ್ನು ಬೆಳಗೊ ಸೂರ್ಯನು ಒಂದು ರಾಶಿಯಿಂದ ಮತ್ತೊಂದು ರಾಶಿಗೆ ಪ್ರವೇಶ ಮಾಡುವ ದಿನವನ್ನು 'ಸಂಕ್ರಮಣ'ವೆಂದು, ಮಕರ ರಾಶಿಯನ್ನು ಪ್ರವೇಶಿಸುವುದರಿಂದ ಮಕರ ಸಂಕ್ರಾಂತಿ ಎಂದು ಕರೆಯುವರು. ಈ ಹಬ್ಬವನ್ನು ಧರ್ಮ ಶಾಸ್ತ್ರಗಳಲ್ಲಿ ಉತ್ತರಾಯಣ ಪುಣ್ಯಕಾಲವೆಂದು ಉಲ್ಲೇಖಿಸಿದರೆ ತಮಿಳುನಾಡಿನಲ್ಲಿ 'ಪೊಂಗಲ್' ಎಂದೂ ಜನಸಾಮಾನ್ಯರಲ್ಲಿ 'ಎಳ್ಳಿನ ಹಬ್ಬ'ವೆಂದು ಗುರುತಿಸಿಕೊಂಡಿದೆ. ಯುಗಾದಿ ಬೇವುಬೆಲ್ಲದ ಹಬ್ಬವಾದರೆ ಸಂಕ್ರಾಂತಿ ಎಳ್ಳು ಬೆಲ್ಲದ ಹಬ್ಬವಾಗಿದೆ. ಈ ಹಬ್ಬವನ್ನು ಪ್ರತಿವರ್ಷ ಜನವರಿ ತಿಂಗಳ ೧೪ ಇಲ್ಲ ೧೫ ನೇ ದಿನಾಂಕದಂದು ಆಚರಿಸಲಾಗುತ್ತದೆ. ಈ ಹಬ್ಬದ ದಿನದಂದು ಪಟ್ಟಣದ ಬೀದಿಗಳನ್ನು ನೋಡಲು ಆನಂದವೆನಿಸುತ್ತದೆ. ಅಂದು ಪಟ್ಟಣದಲ್ಲಿರುವ ಮಹಿಳೆಯರಿಗೆ ರಂಗೋಲಿ ಬಿಡಿಸುವುದೇ ಒಂದು ವಿಶೇಷ ಕೆಲಸವಾಗಿರುತ್ತದೆ. ಬೆಳಿಗ್ಗೆ ಬೇಗನೆ ಎದ್ದು ಮಹಿಳೆಯರು ಮನೆಯ ಸುತ್ತಮುತ್ತಲಿನ ಪರಿಸರವನ್ನು ಸ್ವಚ್ಛಗೊಳಿಸಿ ಮನೆಯ ಮುಂಭಾಗದ ಅಂಗಳಕ್ಕೆ ಸಗಣಿ ನೀರನ್ನು ಹಾಕಿ ನೆಲವನ್ನು ಸ್ವಚ್ಛಗೊಳಿಸಿ ಸಣ್ಣ ಹಾಗೂ ದೊಡ್ಡಗಾತ್ರದ ರಂಗೋಲಿಗಳನ್ನು ಹಾಕಿ ಅವುಗಳಿಗೆ ವಿವಿಧ ಬಣ್ಣಗಳನ್ನು ಹಾಕುವುದರ ಮೂಲಕ ಅಲಂಕರಿಸುತ್ತಾರೆ. ಹೀಗಾಗಿ ಇಡೀ ಪಟ್ಟಣದಲ್ಲಿರುವ ಮನೆಗಳ ಅಂಗಳಗಳೆಲ್ಲ ಚೆಲುವಿನ, ರಂಗುರಂಗಿನ, ವರ್ಣರಂಜಿತ ಚಿತ್ತಾರಗಳಿಂದ ಕೂಡಿರುತ್ತವೆ. ಈ ದಿನದಂದು ಮನೆಯಂಗಳಕ್ಕೆ ಯಾರೇ ಭಿಕ್ಷೆ ಬೇಡಲು ಬಂದರೂ ಅವರಿಗೆ ಇಲ್ಲವೆನ್ನದೇ ತಮ್ಮಲ್ಲಿರುವಂತಹ ಕಾಳು, ಧಾನ್ಯಗಳನ್ನೊ, ಹಣವನ್ನೊ, ವಸ್ತ್ರವನ್ನೋ ನೀಡಿ ಅವರ ಮನಸ್ಸನ್ನು ಸಂತೃಪ್ತಗೊಳಿಸುತ್ತಾರೆ. ಹೀಗಾಗಿ ಈ ದಿನದಂದು ಭಿಕ್ಷೆಗೆ ಬರುವ ಜೋಗತಿಯರು, ದಾಸಯ್ಯರುಗಳು, ಸ್ವಾಮಿಜಿಗಳು, ಜಂಗಮರು ಮುಂತಾದವರನ್ನು ಬಹಳ ಭಕ್ತಿಯಿಂದ ಕಂಡು ಅವರೊಂದಿಗೆ ಗೌರವದಿಂದ ನಡೆದುಕೊಳ್ಳುತ್ತಾರೆ. ನಮ್ಮ ನಾಡಿಗಿಂತ ತಮಿಳು ನಾಡಲ್ಲಿ ಇದು ದೊಡ್ಡ ಹಬ್ಬವಾಗಿ ಆಚರಣೆಯಲ್ಲಿದೆ. ಪಟ್ಟಣದಲ್ಲಿನ ಜನತೆ ಈ ಹಬ್ಬಕ್ಕೆ ತಾವು ಬೆಳೆದ ಕಾಳು ಧಾನ್ಯ ಪದಾರ್ಥಗಳಿಂದ ಸಜ್ಜೆ ರೊಟ್ಟಿ, ಕಡಲೆಕಾಯಿಪುಡಿ/ಶೇಂಗಾಪುಡಿ, ಎಳ್ಳುಪುಡಿಯನ್ನು ವಿಶೇಷವಾಗಿ ತಯಾರಿಸಿ ಮನೆ ಮಂದಿಯೆಲ್ಲಾ ಅದರ ರುಚಿಯನ್ನು ಸವಿಯುವುದರ ಮೂಲಕ ನೆರೆಹೊರೆಯವರಿಗೆ, ಬಂಧುಬಾಂದವರಿಗೆ ಪರಸ್ಪರ ಹಂಚುವ ಪರಿಪಾಠವನ್ನು ರೂಢಿಸಿಕೊಂಡು ಬಂದಿದ್ದಾರೆ. ಪ್ರಸ್ತುತ ದಿನಗಳಲ್ಲಿ ಪಟ್ಟಣದಲ್ಲಿನ ಜನತೆಯಲ್ಲಿ ಪಶುಪಾಲನೆಯ ಪ್ರವೃತ್ತಿ ಕಡಿಮೆಯಾದುದರಿಂದ, ತಮ್ಮ ತಮ್ಮ ಅಂತಸ್ತಿಗೆ ತಕ್ಕಂತೆ ಮನೆಗಳನ್ನು ನಿರ್ಮಿಸಿಕೊಂಡಿರುವುದರಿಂದ ಮನೆಯ ಮುಂಭಾಗದಲ್ಲಿ ಅಂಗಳದ ಕೊರತೆ, ಅಂಗಳವಿದ್ದರೂ ಗ್ರಾನೈಟ್ ಬಂಡೆಗಳನ್ನು ಹಾಸಿರುವುದರಿಂದ ಹಾಗೂ ಇಂದಿನ ಯುವತಿಯರಿಗೆ ರಂಗೋಲಿ ಬಿಡಿಸುವುದರಲ್ಲಿದ್ದ ನಿರಾಸಕ್ತಿ, ಸೋಮಾರಿತನದಿಂದ ಈ ಸಂಕ್ರಾಂತಿಯ ರಂಗು ಅಷ್ಟಾಗಿ ಕಂಡುಬರುವುದಿಲ್ಲ. ಆದರೂ ಗ್ರಾಮೀಣ ಪ್ರದೇಶದಲ್ಲಿ ಮಾತ್ರ ಈ ಹಬ್ಬದ ವಾತಾವರಣ ಇಂದಿಗೂ ಬಹುಮಟ್ಟಿಗೆ ರೂಢಿಯಲ್ಲಿರುವುದನ್ನು ಕಾಣುತ್ತೇವೆ.

## ಹೋಳಿ ಹಬ್ಬ

ಹಿಂದೂ ಸಾಂಪ್ರದಾಯದಂತೆ ಪಟ್ಟಣದಲ್ಲಿ ಹೋಳಿ ಹುಣ್ಣಿಮೆಯ ದಿನದಂದು ಊರಿನ ಯುವಕ ಯುವತಿಯರೆನ್ನದೇ, ಹೆಂಗಳೆಯರೆಲ್ಲಾ ಸೇರಿ ಹೋಳಿ ಹಬ್ಬದ ವಾತಾವರಣವನ್ನು ಕಲ್ಪಿಸುತ್ತಾರೆ. ಪ್ರಮುಖ ಬೀದಿಗಳಲ್ಲಿ ಮೇಲ್ಜಾತಿ-ಕೆಳಜಾತಿಯರೆನ್ನದೇ ಎಲ್ಲಾ ವರ್ಗದ ಶಿಕ್ಷಣ ಪಡೆದ ಯುವ ಜನಾಂಗದವರು ಮಾತ್ರ ಈ ಹಬ್ಬವನ್ನು ಆಚರಿಸುತ್ತಾರೆ. ಇವರುಗಳು ಸ್ತ್ರೀ-ಪುರುಷ ಎಂಬ ತಾರತಮ್ಯವಿಲ್ಲದೇ ಸಾಮೂಹಿಕವಾಗಿ ರಂಗುರಂಗಿನ ಬಣ್ಣಗಳನ್ನು ಎರಚುವುದರ ಮೂಲಕವಾಗಿ ಬಹು ಸಡಗರದಿಂದ ಆಚರಿಸುತ್ತ ಸಂಭ್ರಮದ ಹೊಳೆಯಲ್ಲಿ ನಲಿಯುತ್ತಾರೆ. ಇದನ್ನು ಕಂಡಂತಹ ವಯಸ್ಸಾದ ಹಿರಿಯರು ಇದನ್ನು ವಿರೋಧಿ ವಯಸ್ಸಿಗೆ ಬಂದ ತರುಣ ತರುಣಿಯರಿಗೆ ಹಾಗೆಲ್ಲಾ ಚೆಲ್ಲುಚೆಲ್ಲಾಗಿ ವರ್ತಿಸಬಾರದೆಂದು ಹಿತವಚನದ ಬುದ್ಧಿವಾದವನ್ನು ಹೇಳುತ್ತಾರೆ. ಆದರೆ ಹಿರಿಯರ ಮಾತನ್ನು ಕೇಳುವ ತಾಳ್ಮೆ ಯುವಕ ಯುವತಿಯರಿಗೆ ಇರುವುದಿಲ್ಲ. ಈ ಹೋಳಿ ಹಬ್ಬದ ಸಮಯದಲ್ಲಿ ಬಣ್ಣದ ಓಕುಳಿಯನ್ನು ಮಾಡಿಕೊಂಡು, ಬಣ್ಣಗಳನ್ನು ತೆಗೆದುಕೊಂಡು ಹಿರಿಯ-ಕಿರಿಯರೆನ್ನದೇ, ಸ್ನೇಹಿತರೆನ್ನದೇ, ಗುರುತುಪರಿಚಯವಿಲ್ಲದಿದ್ದರೂ ದಾರಿಯಲ್ಲಿ ಕಂಡಕಂಡವರಿಗೆಲ್ಲಾ ಬಣ್ಣವನ್ನು ಎರಚುತ್ತಾ, ಹಾಡುತ್ತಾ, ಕುಣಿಯುತ್ತಾ ಪಟ್ಟಣದ ಬೀದಿ ಬೀದಿಗಳಲ್ಲೆಲ್ಲಾ ಮನೋರಂಜನೆಯನ್ನು ಪಡೆದು ಕಾಮಣ್ಣನ ಮೂರ್ತಿಯನ್ನು ಸುಡುತ್ತಾರೆ. ಇದರಿಂದ ಕೆಲವೊಮ್ಮೆ ಸಮಸ್ಯೆಗಳುಂಟಾದರೂ ಯಾವುದಕ್ಕೂ ಲೆಕ್ಕಸದೆ ಲಗಾಮಿಲ್ಲದ ಕುದುರೆಯಂತೆ ನುಗ್ಗಿ ಬಣ್ಣ ಬಣ್ಣದ ಓಕುಳಿಯನ್ನು ಎರಚುವುದರ ಮೂಲಕ ಸಾಂಪ್ರದಾಯಿಕವಾಗಿ ಆಚರಿಸುತ್ತಾರೆ. ಯೌವ್ವನಸ್ಥರಿಗೆ ಸ್ವಲ್ಪ ಮುಜಗರವನ್ನುಂಟು ಮಾಡುವ ಈ ಹಬ್ಬವನ್ನು ಪಟ್ಟಣದಲ್ಲಿ ಹೆಚ್ಚಾಗಿ ಮೇಲ್ವರ್ಗದವರು ಆಚರಿಸುತ್ತಾರೆ. ಆದರೆ ಯಾವುದೇ ವಿಷಯದಲ್ಲಿ ಪಾಲ್ಗೊಳ್ಳಲು ದುರ್ಬಲ ಸ್ಥಿತಿಯನ್ನು ಹೊಂದಿರುವಂತಹ ಕೆಳವರ್ಗದ ಜನತೆ ಈ ಹಬ್ಬವನ್ನು ಅಷ್ಟಾಗಿ ಪರಿಗಣಿಸದೇ ಸಾಮಾನ್ಯವಾಗಿಯೇ ಇರುತ್ತಾರೆ.

## ಗಣೇಶ ಚತುರ್ಥಿ

ವಿಶಾಲವಾದ ಅಖಂಡ ಭಾರತದೇಶವನ್ನು ಕನ್ಯಾಕುಮಾರಿಯಿಂದ ಕಾಶ್ಮೀರದವರೆಗೆ ಒಂದುಗೂಡಿಸಿದ ಯಶಸ್ಸು ನಮ್ಮ ಹಿಂದೂ ಪರಂಪರೆಯ ದೇವತೆಗಳಿಗೆ ಸಲ್ಲುತ್ತದೆ. ಈ ನಿಟ್ಟಿನಲ್ಲಿ ಗಣೇಶ ಚರ್ತುರ್ಥಿ ಪ್ರಮುಖವಾದುದಾಗಿದೆ. ಬ್ರಿಟಿಷರ ಸಂಕೋಲೆಯಿಂದ ಭಾರತಾಂಬೆಯನ್ನು ಮುಕ್ತಗೊಳಿಸಲು ತಿಲಕ್‌ರವರು ಗಣೇಶ ಉತ್ಸವವನ್ನು ರಾಷ್ಟ್ರೀಯ ಚಳುವಳಿಯ ಹೋರಾಟದ ಸಂಘಟನೆಗಾಗಿ ಮೊದಲಿಗೆ ಬಳಸಿದರು. ಹೀಗೆ ಭಾರತೀಯರಲ್ಲಿ ಐಕ್ಯತೆಯನ್ನುಂಟು ಮಾಡಲು ಆರಂಭಗೊಂಡ ಗಣೇಶನು ನಂತರದ ಕಾಲದಲ್ಲಿ ಸಮಾಜದ ಸಂಘಟನೆಯ ಮೂಲ ಪುರುಷನಾಗಿ ವಿಘ್ನ ನಿವಾರಕನಾಗಿ ಶತಶತಮಾನಗಳಿಂದ ಭಾರತೀಯರ ಮನಮನಗಳನ್ನು ಬೆಸೆದಂತಹ ರಾಷ್ಟ್ರೀಯ

ದೇವನಾದನು. ಆದ್ದರಿಂದಲೇ ಇಂದಿಗೂ ನಾವು ಮಾಡುವ ಎಲ್ಲಾ ಬಗೆಯ ಶುಭಕಾರ್ಯದಲ್ಲಿ ಹಾಗೂ ಎಲ್ಲಾ ದೇವರುಗಳ ಪೂಜೆಯ ಆರಂಭಕ್ಕೂ ಮುನ್ನ ವಿನಾಯಕನಿಗೆ ಮೊದಲ ಪೂಜೆಯನ್ನು ಸಲ್ಲಿಸುತ್ತೇವೆ. ಭಾದ್ರಪದ ಶುಕ್ಲದ ಚೌತಿಯಂದು/ಭಾದ್ರಪದ ಶುದ್ಧ ಚತುರ್ಥಿಯ ದಿನವನ್ನು ಅಸಂಖ್ಯಾತ ಹಿಂದುಗಳು ಗಣೇಶನ ಹಬ್ಬವನ್ನಾಗಿ ಆಚರಿಸುತ್ತಾರೆ.[೪೯] ಅಂದರೆ ಈ ದಿನದಂದು ಜಗದೊಡೆಯನಾದ ವಿನಾಯಕನಿಗೆ ವರ್ಷದಲ್ಲೇ ವಿಶೇಷವಾದಂತಹ ವಾರ್ಷಿಕ ಪೂಜೆ ನಡೆಯುತ್ತದೆ. ನಾಡಿನಾದ್ಯಂತ ಗಣೇಶ ಚತುರ್ಥಿ ಬಂತೆಂದರೆ ಯುವಕರಿಗೆ ಅದರಲ್ಲೂ ವಿದ್ಯಾರ್ಥಿಗಳಿಗೆ ಎಲ್ಲಿಲ್ಲದ ಸಂಭ್ರಮ ಸಡಗರದ ಹಬ್ಬದ ವಾತಾವರಣ ಸೃಷ್ಟಿಯಾಗುತ್ತದೆ. ಈ ಗಣೇಶ ಚತುರ್ಥಿಯ ಉತ್ಸವವನ್ನು ಆಚರಿಸದ ಹಳ್ಳಿಯನ್ನು ಊಹಿಸುವುದು ಕಷ್ಟವೆನಿಸುತ್ತದೆ.

ಪಟ್ಟಣದಲ್ಲಂತೂ ಗಣೇಶ ಉತ್ಸವದ ತಯಾರಿ ಒಂದೆರಡು ತಿಂಗಳ ಮುಂಚಿನಿಂದಲೂ ಆರಂಭಗೊಳ್ಳುತ್ತದೆ. ಅಂದರೆ ಈ ಪಟ್ಟಣದಲ್ಲಿ ಒಂದು ಕಡೆ ವಿಭಿನ್ನ ಶೈಲಿಯ ವಿವಿಧ ಭಂಗಿಯ ಗಣೇಶನ ಮೂರ್ತಿಗಳನ್ನು ಮಣ್ಣಿನಿಂದ ಅದರಲ್ಲೂ ಜೇಡಿಮಣ್ಣಿನಿಂದ ತಯಾರಿಸಿ, ವಿಧವಿಧದ ಬಣ್ಣಗಳಿಂದ ಶೃಂಗಾರಗೊಳಿಸಿ ಬೀದಿ ಬೀದಿಯಲ್ಲಿ ಮಾರಾಟಕ್ಕೆ, ಪ್ರದರ್ಶನಕ್ಕೆ ಇಡುತ್ತಾರೆ. ಮತ್ತೊಂದು ಕಡೆ ಇಲ್ಲಿನ ಯುವ ತರುಣರು ಪಟ್ಟಣದ ಪ್ರಮುಖ ವ್ಯಕ್ತಿಗಳಿಂದ, ಸರ್ಕಾರಿ ಅಧಿಕಾರಿಗಳ ಹಾಗೂ ದೊಡ್ಡ ದೊಡ್ಡ ವ್ಯಾಪಾರಸ್ಥರಿಂದ ಚಂದಾವನ್ನು ವಸೂಲಿ ಮಾಡಿ ಉತ್ಸವಕ್ಕೆ ಹಣವನ್ನು ಸಂಗ್ರಹಿಸುತ್ತಾರೆ. ಅಷ್ಟು ಅಲ್ಲದೆ ಕೆಲವೊಮ್ಮೆ ಇವರು ಕಾನೂನಿನ ಚೌಕಟ್ಟನ್ನು ಮೀರಿ ರಸ್ತೆಗಳಲ್ಲಿ ವಾಹನಗಳ ಸಾಗಾಟವನ್ನು ಅಡ್ಡಿಪಡಿಸಿಯೂ ಚಂದಾ ವಸೂಲಿ ಮಾಡುತ್ತಾರೆ. ಇದರಿಂದ ಕೆಲವೊಮ್ಮೆ ಸಾಕಷ್ಟು ತೊಂದರೆಗಳು ಉಂಟಾದ ಅನುಭವವೂ ಈ ಚಂದಾ ವಸೂಲಿದಾರರಿಗೆ ಆಗಿದೆ. ಹೀಗೆ ಸಂಗ್ರಹಿಸಿದ ಹಣದಿಂದ ಉತ್ಸವಕ್ಕೆ ನಿಗದಿಪಡಿಸಿಕೊಂಡ ಸ್ಥಳವನ್ನು ಸ್ವಚ್ಛಗೊಳಿಸಿ, ಮದುವೆ ಮನೆಯ ಅಂದರದಂತೆ ಚಪ್ಪರವನ್ನು ಹಾಕಿ, ಬಣ್ಣದ ಹಾಳೆಗಳಿಂದ, ಝುಂಕರಿಸುವ ಧ್ವನಿವರ್ಧಕಗಳನ್ನು ಸಿದ್ದಗೊಳಿಸುವುದರ ಮೂಲಕ ಚತುರ್ಥಿಯ ದಿನಕ್ಕೆ ಕಾಯುತ್ತಿರುತ್ತಾರೆ. ಚತುರ್ಥಿದಿನದಂದು ವಿನಾಯಕನ ವಿಗ್ರಹ, ಮೂರ್ತಿಗಳನ್ನು ತಂದು ಸಮಯಕ್ಕೆ ಸರಿಯಾಗಿ ಪ್ರತಿಷ್ಠಾಪಿಸಿ ಕನಿಷ್ಠ ಒಂದು ದಿನದಿಂದ ಗರಿಷ್ಠ ತೊಂಭತ್ತು ದಿನಗಳ ಕಾಲ ಕೂರಿಸಿ, ಪ್ರತಿದಿನ ಪೂಜೆ–ಪುನಸ್ಕಾರ, ಪ್ರಸಾದ ವಿನಿಯೋಗದ ಜೊತೆಗೆ ಹಲವಾರು ಮನೋರಂಜನೀಯವಾದ ಕಾರ್ಯಕ್ರಮಗಳನ್ನು ನಡೆಸುತ್ತಾ ಭಕ್ತಾದಿಗಳಿಗೆ ಅನ್ನ ಸಂತರ್ಪಣೆಯನ್ನು ಏರ್ಪಡಿಸುತ್ತಾರೆ. ಕೊನೆಯ ದಿನದಂದು (ಟ್ರಾಕ್ಟರ್, ಆಟೋ ಮುಂತಾದ ವಾಹನಗಳನ್ನು ಅಲಂಕಾರಗೊಳಿಸಿ, ಅವುಗಳ ಮೇಲೆ ಗಣೇಶನನ್ನು ಕೂರಿಸಿ ಝುಂಕರಿಸುವ ವಾದ್ಯವೃಂದಗಳೊಂದಿಗೆ ಪಟ್ಟಣದ ಪ್ರಮುಖ ಬೀದಿಗಳಲ್ಲಿ ಕುಣಿದು ಕುಪ್ಪಳಿಸುತ್ತಾ ಸಂತೋಷವಾಗಿ ಮೆರವಣಿಗೆಯನ್ನು ಮಾಡಿ ಕೊನೆಗೆ ಕೆರೆಯಲ್ಲೊ, ಬಾವಿಯಲ್ಲೊ ಗಣೇಶನನ್ನು ಬಿಟ್ಟು ಬರುವ ಪರಂಪರೆಯನ್ನು ಆಚರಿಸಿಕೊಂಡು ಬಂದಿದ್ದಾರೆ. ಈ ರೀತಿಯ ಪರಂಪರೆ ಪಟ್ಟಣದಲ್ಲಿರುವ ಚಿಕ್ಕ ಚಿಕ್ಕ ಮಕ್ಕಳಿಂದ ಹಿಡಿದು ವಯಸ್ಸಿನ ಯುವಕರವರೆಗಿನವರೂ

ಎಲ್ಲರೂ ಮೈಗೂಡಿಸಿಕೊಂಡು ಬೀದಿ ಬೀದಿಗಳಲ್ಲಿ, ಮನೆ-ಮನೆಗಳಲ್ಲಿ ಗಣೇಶನನ್ನು ಪ್ರತಿಷ್ಠಾಪಿಸುವ ಸಂಪ್ರದಾಯವಿದೆ. ಇತ್ತೀಚಿನ ದಿನಗಳಲ್ಲಂತೂ ಗಣೇಶ ಉತ್ಸವ ಬಂತೆಂದರೆ ನಾಡಿನಲ್ಲಿ ಎಲ್ಲೆಂದರಲ್ಲಿ ಕೋಮುಗಲಭೆಗಳು ಹೆಚ್ಚಾಗಿ ಸಂಭವಿಸುವುದು ಕಂಡುಬರುತ್ತದೆ. ಆದರೆ ಪಟ್ಟಣದಲ್ಲಿ ಹಿಂದೂ-ಮುಸ್ಲಿಂಮರು ಹೆಚ್ಚು ಕಡಿಮೆ ಸಮಸಂಖ್ಯೆಯಲ್ಲಿದ್ದರೂ ಈ ರೀತಿಯ ಅಹಿತಕರ ಘಟನೆಗಳಿಗೆ ಎಡೆಮಾಡಿಕೊಡದೇ ನಡೆಯುತ್ತಿರುವುದು ಒಂದು ಸಂತೋಷದ ವಿಚಾರವೆನಿಸುತ್ತದೆ. ಇದಕ್ಕೆಲ್ಲಾ ಇವರಲ್ಲಿರುವಂತಹ ಸಹಬಾಳ್ವೆ, ಸಹಕಾರ, ಪ್ರೀತಿ, ಹೊಂದಾಣಿಕೆ ಮುಖ್ಯವಾಗಿದೆ. ಇದು ಹಿಂದೂ-ಮುಸ್ಲಿಮರ ಭಾವೈಕ್ಯತೆಯನ್ನು ಸೂಚಿಸುತ್ತದೆ.

**ಮೊಹರಂ**

ಪಟ್ಟಣದಲ್ಲಿ ಹಿಂದುಗಳಂತೆ ಮುಸ್ಲಿಮರು ಸಹ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಇವರೂ ಸಹ ಹಬ್ಬ ಹರಿದಿನಗಳನ್ನು ದೈವಿಕ ಘಟನೆ ಎಂಬ ನಂಬಿಕೆಯ ಆಧಾರದ ಮೇಲೆ ಆಚರಿಸುತ್ತಾರೆ. ಜೊತೆಗೆ ತಮ್ಮ ತಮ್ಮ ಮನೆತನಗಳಲ್ಲಿ ರೂಢಿಸಿಕೊಂಡು ಬಂದಂತಹ ಸಂಪ್ರದಾಯಗಳನ್ನೂ ಸಹ ಆಚರಿಸುತ್ತಾರೆ. ಇವರು ಪ್ರಮುಖವಾಗಿ ಮೊಹರಂ, ಬಕ್ರೀದ್, ರಂಜಾನ್ ಎಂಬ ಮುಂತಾದ ಹಬ್ಬಗಳನ್ನು ಆಚರಿಸುತ್ತಾರೆ. ಇವರುಗಳು ಆಚರಿಸುವಂತಹ ಪ್ರಮುಖ ಹಬ್ಬಗಳಲ್ಲಿ ಮೊಹರಂ ಹಬ್ಬವು ಒಂದಾಗಿದೆ. ಭಾವೈಕ್ಯತೆಯ ಪ್ರತೀಕವಾಗಿ ಉಳಿದು ಬಂದಿರುವ ಈ ಹಬ್ಬವು ಇಡೀ ಮುಸ್ಲಿಂ ಪರಂಪರೆಯಲ್ಲಿಯೇ ವಿಶಿಷ್ಟವಾಗಿದ್ದು, ಪ್ರಾಂತದಿಂದ-ಪ್ರಾಂತಕ್ಕೆ ಇದರ ಆಚರಣೆಯು ವಿಭಿನ್ನತೆಯನ್ನು ಪಡೆದುಕೊಂಡಿದೆ.

ಮೊಹರಂ ಎಂಬುದು ಮುಸ್ಲಿಂ ವರ್ಷದ ಮೊದಲನೆ ತಿಂಗಳಿನ ಹೆಸರು. ಅಂದರೆ ಅರಬ್ಬೀ ಭಾಷೆಯಲ್ಲಿ ಮೊಹರಂ (ಮುಹರ್ರಮ್) ಎಂದರೆ ಪವಿತ್ರ ಎಂದರ್ಥವಾಗುತ್ತದೆ.[೫೦] ಅನೇಕ ಮುಸ್ಲಿಂ ರಾಷ್ಟ್ರಗಳಲ್ಲಿ ಪ್ರಚಲಿತವಾಗಿರುವ ಹಿಜರಿ ಸಂವತ್ಸರದ ಮೊದಲನೆಯ ತಿಂಗಳು ಮೊಹರಂ. ಇದರ ಅರ್ಥ ನಿಷಿದ್ಧವಾದುದು ಅಥವಾ ವರ್ಜಿತವಾದುದು ಎಂದರ್ಥ. ಮಹಮ್ಮದಿಯರಲ್ಲಿ ಷಿಯಾ ಪಂಗಡದವರು ಈ ಮೊಹರಂ ಆಚರಿಸುತ್ತಾರೆ. ಮಹಮ್ಮದೀಯರ ವರ್ಷದ ಮೊದಲ ಆರಂಭಿಕ ತಿಂಗಳು ಮೊಹರಂ (ಮುಸ್ಲಿಂ ಹೊಸವರ್ಷ ಹಿಜರಿ ೧೪೩೫) ಈ ತಿಂಗಳಿನ ಮೊದಲಿನ ಹತ್ತು ದಿನಗಳನ್ನು ಮೊಹರಂ ಎನ್ನುವರು. ಈ ಮೊಹರಂನ್ನು ಮಹಮದ್ದೀಯ ವರ್ಷದ ಮೊದಲನೆ ತಿಂಗಳಿನಲ್ಲಿ ಹಸನ್ ಮತ್ತು ಹುಸೇನ್ ಎಂಬ ಇಬ್ಬರು ನಾಯಕರ ಸಾವಿನ ಪವಿತ್ರ ಸಂದರ್ಭದ ಸವಿ ನೆನಪಿಗಾಗಿ ಆಚರಿಸುವಂತಹ ಹಬ್ಬವಾಗಿದೆ. ಮಹಮದ್ ಪೈಗಂಬರರ ಮೊಮ್ಮಗನಾದ (ಪ್ರವಾದಿಯ ಮಗಳಾದ ಬೀಬೀ ಫಾತಿಮಾ ಮತ್ತು ಇಮಾದ್ ಆಲಿಯರ ಮಗ) ಇಮಾಮ್ ಹುಸ್ಸೇನ್ ಅವರು ದಾರುಣವಾಗಿ ಹುತಾತ್ಮರಾದಂತಹ ಈ ದಿನವನ್ನು ದುಃಖದ ಸಂಕೇತವಾಗಿ ಮೊಹರಂ ಎಂದು ಆಚರಿಸುತ್ತಾರೆ.[೫೧] ಅಂದರೆ ಹಜರತ್ ಇಮಾಮ್ ಹುಸ್ಸೇನ್‌ನು ಮೆಕ್ಕಾದಲ್ಲಿದ್ದಾಗ

ಅರಬ್ ರಾಜ್ಯವನ್ನು ಆಳುತ್ತಿದ್ದ ಯುಜೀದ್‌ನು ಕೆಟ್ಟ ಆಡಳಿತಗಾರನಾಗಿ ಅಲ್ಲಿನ ಜನರಿಗೆ ಬೇಸರ ತರಿಸಿದ್ದ. ಅವನ ದುರಾಡಳಿತದಿಂದ ಬೇಸತ್ತಿದ್ದ ಕುಫಾದ ಜನರು ಯುಜೀದ್‌ನನ್ನು ಪದಚ್ಯುತಿಗೊಳಿಸ ಬೇಕೆಂದು ಹಜರತ್ ಇಮಾಮ್ ಹುಸೇನನನ್ನು ಕರೆದರಲ್ಲದೇ, ಬೇಕಾದ ಸಹಾಯ ನೀಡಲು ಸಿದ್ಧರೆಂದೂ ಹೇಳಿದರು. ಅದರಂತೆ ಹುಸೇನರು ಮನೆಯವರು ನೂರು ಜನ ಸೈನಿಕರು ಹಾಗೂ ಕುದುರೆ ಸವಾರರೊಡನೆ ಹೊರಟು ಕರ್ಬಾಲದ ಬಳಿಯಲ್ಲಿ ಯುಜೀದ್‌ನ ಸೈನಿಕರಿಂದ ಹತರಾದರು. ಹುಸೇನ್‌ರು ಮಡಿದದ್ದು ಮೊಹರಂನ ಹತ್ತನೆಯ ದಿನ. ಮೊಹರಂನ ಇನ್ನೊಂದು ಹೆಸರು "ಸೈಯದುಲ್ ಅಶಹರ್" ಅಂದರೆ ಎಲ್ಲಾ ತಿಂಗಳುಗಳ ದೊರೆ. ಹುಸೇನರು ಹುತಾತ್ಮರಾದ ಈ ತಿಂಗಳು ದುಃಖದಾಯಕದ ಪವಿತ್ರದಿನ ಎನಿಸಿಕೊಳ್ಳುತ್ತದೆ. ಈ ಮೊಹರಂನ್ನು ಪೀರಲಹಬ್ಬ, ಅಲಾಬಿಹಬ್ಬ, ಬಾಬಯ್ಯನಹಬ್ಬ, ಅಲಾಯಿ ಹಬ್ಬ, ಮೊಹರಂ ಕಡೆಯದಿನ ಎಂಬ ಹಲವಾರು ಹೆಸರುಗಳಿಂದ ಕರೆಯುವರು.[೫೨]

ಚರಿತ್ರೆಯಲ್ಲಿ ಆಡಳಿತ ನಡೆಸಿದ ಬಹುಮನಿ ಸುಲ್ತಾನರು, ಬಿಜಾಪುರದ ಆದಿಲ್‌ಶಾಹಿಗಳು ಸಂಭ್ರಮ ಸಡಗರದಿಂದ ಆಚರಿಸುತ್ತಿದ್ದ ಮೊಹರಂ ಅಕ್ಬರ್ ಎಂಬ ಮೊಗಲ್ ದೊರೆಯು "ದೀನ್-ಇ-ಇಲಾಯಿ"ಯನ್ನು ಸ್ಥಾಪಿಸಿದ ಆನಂತರದಲ್ಲಿ ರಾಷ್ಟ್ರೀಯ ಹಬ್ಬವಾಗಿ ಮಾರ್ಪಾಡಾಯಿತು. ಇಂದು ಕರ್ನಾಟಕದಾದ್ಯಂತ ಆಚರಣೆಯಲ್ಲಿರುವ ಮೊಹರಂ ಮೂಲತಃ ಶೋಕಸ್ಥಾಯಿಯಾಗಿದ್ದರೂ, ಕಾಲಗರ್ಭದಲ್ಲಿ ತನ್ನ ಮೂಲ ಭಾವವನ್ನು ಕಳೆದುಕೊಂಡಿದ್ದರೂ ಹಿಂದೂ ಮತ್ತು ಮುಸ್ಲಿಮರ ಭಾಗವಹಿಸುವಿಕೆಯಿಂದ ಉತ್ಸವವು ಮೆರಗು ಪಡೆದು ರಂಜಿಸುತ್ತದೆ. ಮೊಳಕಾಲ್ಮೂರು ಪರಿಸರದ ಜಮ್ಮಲಮಲ್ಕಿ, ಸಮೀಪದ ಆಂಧ್ರಪ್ರದೇಶದ ಗಲ್‌ಗಲ್ ಎಂಬ ಊರುಗಳಲ್ಲಿ ಈ ಹಬ್ಬ ಪ್ರಸಿದ್ಧಿಯನ್ನು ಪಡೆದುಕೊಂಡಿದೆ. ಮೊಳಕಾಲ್ಮೂರು ಪಟ್ಟಣದಲ್ಲಿಯೂ ಸಹ ಈ ಹಬ್ಬವನ್ನು ಇಲ್ಲಿನ ಮುಸಲ್ಮಾನರು ದುಃಖದ ಸಂಕೇತವಾಗಿ ಹತ್ತು ದಿನಗಳ ಕಾಲ ಆಚರಿಸುವಂತಹ ಸಂಪ್ರದಾಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ಇಲ್ಲಿ ಚಂದ್ರನ ದರ್ಶನವಾದ ಮರುದಿನ (ದೀಪಾವಳಿ ಅಮಾವಾಸ್ಯೆಯಾದ ಮೂರು ದಿನಗಳನಂತರ) ಅಂದರೆ ಮೊಹರಂನ ಹತ್ತು ದಿನಗಳಲ್ಲಿನ ಮೊದಲನೆಯ ದಿನದಂದು ಮುಲ್ಲಾನನ್ನು ಒಳಗೊಂಡಂತೆ ಊರಿನ ಹಿರಿಯರೆಲ್ಲರೂ ಸೇರಿ ಹಿಂದಿನ ವರ್ಷ ಅಲಾವಿ ತೆಗೆದಿದ್ದ ಸ್ಥಳಕ್ಕೆ ಬಂದು ಈ ಹಿಂದೆಯೇ ಇಟ್ಟಿದ್ದ ಬಾರೇಮುಳ್ಳಿನ ರಂಬೆ, ನಾಲ್ಕು ಕಲ್ಲುಗಳನ್ನು ಎಸೆದು ಹಾಕಿ ಗುದ್ಲಿಯನ್ನು ಹಾಕುವುದರ ಮೂಲಕ ಅಲಾವಿ ಕುಣಿಯನ್ನು ತೋಡುತ್ತಾರೆ. ಹೀಗೆ 'ಗುದ್ಲಿಬಿತ್ತು' ಎಂಬ ವಿಶೇಷ ಕಾರ್ಯದಿಂದ ಆರಂಭಗೊಳ್ಳುವ ಈ ಹಬ್ಬವು ಮೊಹರಂ ಕಡೆಯ ದಿನದವರೆಗಿನ ಹತ್ತು ದಿನಗಳ ಕಾಲ ನಡೆಯುತ್ತದೆ.

ಅಲಾವಿ ಕುಣಿಯನ್ನು ತೋಡಿದ ದಿನ ಸಂಜೆಯೇ ಇಲ್ಲಿನ ಮಸೀದಿಗಳಲ್ಲಿ ವಿವಿಧ ರೀತಿಯ ವಸ್ತ್ರ ಹಾಗೂ ಬೆಳ್ಳಿ, ಕಂಚು, ಬಂಗಾರದ ಮುಖ, ಛತ್ರಿ, ತೊಟ್ಟಿಲು ಕುದುರೆ ಎಂಬ ಮುಂತಾದ

ವಸ್ತುಗಳಿಂದ ಮಾಡಿ ಶೃಂಗಾರಗೊಳಿಸಿದ ಪೀರಾಗಳನ್ನು ಇಡಲಾಗುತ್ತದೆ. ಈ ಪೀರಾಗಳನ್ನು ಖಾಸಿಂಸಾಬ, ಪೀರಲ, ಇಮಾಮ್‌ಸಾಬ್, ಏಳುಸವಾರಿ, ಯಮನೂರ ಎಂಬ ಮುಂತಾದ ಹೆಸರುಗಳಿಂದ ಕರೆಯಲಾಗುತ್ತದೆ. ಗುದ್ದಲಿ ಬಿದ್ದ ದಿನದಿಂದಲೇ ನಮ್ಮೂರಿನ ದೇವರುಗಳು ಬೇರೆ ಊರಿಗೆ ಹೋಗಬಾರದೆಂಬ ನಂಬಿಕೆಯಿಂದ, ಊರಿನ ಗಡಿಸೀಮೆಯನ್ನು ದಾಟದಂತೆ ಎಚ್ಚರವಹಿಸಿ, ಪ್ರತಿದಿನ ಒಂದೊಂದು ಪೀರಾಗಳನ್ನು ಒಂಬತ್ತು ದಿನಗಳಕಾಲ ಊರಿನಲ್ಲಿ ಮೆರವಣಿಗೆಯನ್ನು ಮಾಡಲಾಗುತ್ತದೆ. ಈ ಒಂಭತ್ತು ದಿನಗಳ ಮಧ್ಯದಲ್ಲಿ ಸಣ್ಣ ಹಾಗೂ ದೊಡ್ಡ ಕತ್ತಲು ರಾತ್ರಿಗಳು ವಿಶೇಷವಾಗಿರುತ್ತದೆ. ಈ ದಿನಗಳಂದು ಇಡೀ ರಾತ್ರಿ ಅಲಾವಿ ಕುಣಿಯ ಸುತ್ತ ಅಲಾವಿಯನ್ನು ಆಡಲಾಗುತ್ತದೆ. ಹಾಗೂ ಹಗಲು ವೇಷ, ಕೋಲಾಟ, ಕರಡಿವೇಷ, ಸ್ತ್ರೀ-ಪುರುಷ ವೇಷಗಳನ್ನು ಹಾಕುವುದರ ಜೊತೆಗೆ ಟ್ರಾಕ್ಟರ್ ಬಂಡಿಗಳ ಮೂಲಕ ಕಟ್ಟಿಗೆ ತುಂಡುಗಳನ್ನು, ದೊಡ್ಡ ದೊಡ್ಡ ಮರದದಿಮ್ಮಿಗಳನ್ನು ತಂದು ಅಲಾವಿ ಕುಣಿಗೆ ಹಾಕಲಾಗುತ್ತದೆ. ಸಣ್ಣ ಖಥಲ್ ರಾತ್ರಿಯ ಮರುದಿನವನ್ನು ಏಳುಸವಾರಿ ಮೆರವಣಿಗೆಯನ್ನು ಮಾಡಿದರೆ, ದೊಡ್ಡ ಖಥಲ್ ರಾತ್ರಿಯ ಮರುದಿನದಂದು ಮೊಹರಂನ ಹತ್ತನೆಯ ಅಂದರೆ ಕಡೆಯ ದಿನವನ್ನು ಆಚರಿಸಲಾಗುತ್ತದೆ. ಈ ದಿನದಂದೆ ಇಮಾಮ್ ಹುಸೇನರು ಹುತಾತ್ಮರಾದ್ದರಿಂದ ಈ ದಿನ ಬಹಳ ಪ್ರಮುಖವಾಗಿರುತ್ತದೆ. ಅಂದರೆ ಈ ದಿನ ದೇವರು ಸಾಯುವ ಅಥವಾ ದೇವರನ್ನು ಹೊಳೆಗೆ ವಿಸರ್ಜಿಸುವ ದಿನವಾಗಿರುತ್ತದೆ. ಈ ದಿನದಂದು ಎಲ್ಲಾ ಪೀರಾಗಳನ್ನು ಮೆರವಣಿಗೆ ಮಾಡುವುದರ ಜೊತೆಗೆ ಕಟ್ಟಿಗೆಯಿಂದ ತಯಾರಿಸಿ ಕಟ್ಟಿಗೆ ಕಾಣದಂತೆ ಬಣ್ಣದ ಕಾಗದಗಳನ್ನು ಅಂಟಿಸಿ ಅಲಂಕಾರಗೊಳಿಸಿದ್ದ ಗುಂಬಜ್ ಅಥವಾ ಮಸೀದಿ ಆಕಾರದ ರಚನೆಯನ್ನು ಹೊಂದಿರುವ ಡೋಲಿಯನ್ನು ಹೊರತೆಗೆದು ಮೆರವಣಿಗೆ ಮಾಡಲಾಗುತ್ತದೆ. ಈ ಡೋಲಿಯ ತುದಿಯಲ್ಲಿಟ್ಟಿರುವ ಅರ್ಧಚಂದ್ರಾಕಾರದ ಬೆಳ್ಳಿಯ ಆಭರಣ ವಿಟ್ಟಿರುತ್ತಾರೆ. ಈ ಅರ್ಧಚಂದ್ರ ದುಃಖದ ಸಂಕೇತವಾಗಿರುತ್ತದೆ. ಈ ದಿನದ ಸಂಜೆ ಅಲಾಯಿ ಕುಣಿಯಸುತ್ತಾ ಗಂಡಸರು ಅಲಾಯಿ ಆಡಿದರೆ ಊರಿನಲ್ಲಿರುವ ಸ್ತ್ರೀಯರೆಲ್ಲರೂ ಬಂದು ಈ ದೃಶ್ಯವನ್ನು ನೋಡಿ ಸವಿಯುತ್ತಾರೆ. ಅಲಾಯಿಕುಣಿ ಮುಚ್ಚುವ ಸಮಯದಲ್ಲಿ ಭಕ್ತಾದಿಗಳು ಅದರಲ್ಲಿ ಉಪ್ಪು, ಸುರಿಯುತ್ತಾರೆ. ಸಂಜೆಯಾದಾಗ ಪೀರಾಗಳು ಹೊಳೆಗೆ ಹೊಗುತ್ತವೆ. ಅಂದರೆ ಅವು ಸತ್ತುಹೋಗುತ್ತವೆ. ಹಾಗಾಗಿ ಹಬ್ಬವೂ ಕೊನೆಗೊಳ್ಳುತ್ತದೆ. ಪೀರಾಗಳ ವಸ್ತ್ರ, ಆಭರಣಗಳನ್ನು ಬಿಚ್ಚಿ ಪೆಟ್ಟಿಗೆಯಲ್ಲಿ ಹಾಕಿಕೊಂಡು ಶೋಕಗೀತೆಯನ್ನು ಹಾಡುತ್ತಾ ಮಸೀದಿ ಅಥವಾ ದರ್ಗಾಕ್ಕೆ ಬರುತ್ತಾರೆ. ಮುಸ್ಲಿಮರಂತೆ ಹಿಂದೂಗಳು ಸಹ ಈ ಹಬ್ಬದಲ್ಲಿ ಪೀರಾಗಳನ್ನು ಹಿಡಿಯುವುದರ ಮೂಲಕ ಭಾಗವಹಿಸಿ, ಅಲಾಯಿ ಆಡುವುದರಿಂದ ಹಿಂದೂಗಳಿಗೂ ಸಹ ಇದು ಶ್ರೇಷ್ಠ ಹಬ್ಬವಾಗಿ ಪರಿಣಮಿಸಿದೆ. ಈ ಹಬ್ಬವು ಪಟ್ಟಣದಲ್ಲಿರುವ ಹಿಂದೂ-ಮುಸ್ಲಿಮರ ನಡುವಿನ ಭಾವೈಕ್ಯತೆಯ ಸಂಕೇತವಾಗಿದೆ ಎನ್ನಲಾಗಿದೆ.

**ಕಾರ ಹುಣ್ಣಿವೆ**

ಮೊಳಕಾಲ್ಮೂರುವಿನಲ್ಲಿ ಆಚರಿಸುವ ಹಬ್ಬಗಳಲ್ಲಿ ಕಾರಹುಣ್ಣಿವೆಯು ಪ್ರಮುಖವಾದ ಸ್ಥಾನವನ್ನು ಪಡೆದುಕೊಂಡಿದೆ. ಈ ಹಬ್ಬವು ರೈತರ ಅಥವಾ ಒಕ್ಕಲಿಗರ ಪ್ರಧಾನ ಹಬ್ಬವಾಗಿದೆ. ಈ ಹಬ್ಬದಲ್ಲಿ ವರ್ಷಾರಂಭದ ಮಳೆಯನ್ನು ಸ್ವಾಗತಿಸಿ, ಕೃಷಿ ಆರಂಭದ ಪೂಜೆಯೆನ್ನುವಂತೆ ಎತ್ತುಗಳನ್ನು ಸಿಂಗರಿಸಿ ಪೂಜಿಸುವಂತಹ ದಿನವಾಗಿದೆ. ಮಾನವನು ತನ್ನೊಂದಿಗೆ ಅನೋನ್ಯತೆಯಿಂದ ಜೊತೆಗೂಡಿರುವ ಎತ್ತುಗಳ ಬಗ್ಗೆ ಹೊಂದಿರುವ ಗೌರವ, ಅಭಿಮಾನದ ಪ್ರತೀಕವಾಗಿ ಆಚರಿಸುವಂತಹ ಹಬ್ಬವೇ ಈ ಕಾರಹುಣ್ಣಿವೆಯಾಗಿದೆ. ಕಾರ ಹುಣ್ಣಿವೆಯ ದಿನದಂದು ಹಬ್ಬದ ವಾತಾವರಣ ಇಡೀ ಪಟ್ಟಣದಲ್ಲಿ ಆವರಿಸಿದ್ದರೂ ಇದರ ಆಚರಣೆ ಪಿ.ಟಿ. ಹಟ್ಟಿಯಲ್ಲಿ(ಪುಟಗೋಸಿತಿಮ್ಮಯ್ಯನಹಟ್ಟಿ) ಮಾತ್ರ ಕಂಡುಬರುತ್ತದೆ. ಇಲ್ಲಿ ಎತ್ತುಗಳ ಓಟದ ಸ್ಪರ್ಧೆಯನ್ನು ನಡೆಸುತ್ತಾರೆ.

ಈ ಹಬ್ಬದ ದಿನದಂದು ಎತ್ತುಗಳನ್ನು ಯಾವುದೇ ರೀತಿಯ ಕೃಷಿ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುವುದಿಲ್ಲ. ಅಂದು ಬೆಳಿಗ್ಗೆನೇ ಎತ್ತು, ಬಂಡಿಗಳನ್ನು ಕಟ್ಟಿಕೊಂಡು ಹಳ್ಳಕ್ಕೊ, ನದಿಗೋ ಹೋಗಿ ಎತ್ತುಗಳಿಗೆ ಸ್ನಾನ ಮಾಡಿಸಿಕೊಂಡು ಬರುವುದು ಸಾಂಪ್ರದಾಯವಾಗಿದೆ. ಸ್ನಾನಮಾಡಿಸಿ ಕೊಂಡು ಬಂದ ನಂತರ ಎತ್ತುಗಳ ಕೊಂಬುಗಳಿಗೆ ಬಣ್ಣವನ್ನು ಹಚ್ಚಿ, ಎತ್ತುಗಳನ್ನು ಗೆಜ್ಜೆ, ಘಂಟೆ, ಹಣೆಪಟ್ಟಿ, ಹಣೆಕಟ್ಟು, ಗಗ್ರಿ, ಜೂಲು, ಮಗಡ, ಗೊಂಡೇವು, ರಿಬ್ಬನ್ನು, ಮೈಕಟ್ಟು ಎಂಬ ಮುಂತಾದ ವಸ್ತುಗಳಿಂದ ಅಲಂಕರಿಸಲಾಗುತ್ತದೆ. ಹಾಗೆಯೇ ಎತ್ತಿನ ಬಂಡಿಗಳನ್ನು ಸಹ ಅಲಂಕರಿಸಲಾಗುತ್ತದೆ. ಸಂಜೆಯ ವೇಳೆಗೆ ಅಂದರೆ ಬಿಸಿಲು ಇಳಿಯುವ ವೇಳೆಗೆ ಹಟ್ಟಿಯ ಮುಖ್ಯಸ್ಥರ, ಹಿರಿಯರ ಮನೆಯ ಎತ್ತುಗಳಿಗೆ ಬಾಸಿಂಗವನ್ನು ಕಟ್ಟಿಕೊಂಡು ವಾದ್ಯಗಳೊಂದಿಗೆ ಅಗಸೆಯ ಹತ್ತಿರ ಬರಲಾಗುತ್ತದೆ. ಈ ದಿನದಂದು ಅಗಸೆಗೆ ಅಡ್ಡವಾಗಿ ಮಾವು-ಬೇವಿನ ತೋರಣವನ್ನು ಎತ್ತರದಲ್ಲಿ ಕಟ್ಟಿ ಅಗಸೆಯನ್ನು ಕೆಳವರ್ಗದವರು ಸಿಂಗರಿಸಿರುತ್ತಾರೆ. ಹೀಗೆ ಅಗಸೆಯ ಹತ್ತಿರ ಹಟ್ಟಿಯ ಮುಖ್ಯಸ್ಥ. ಪ್ರಮುಖರಾದವರ ಎತ್ತುಗಳು ಬಂದೊಡನೆ ಹಟ್ಟಿಯಲ್ಲಿನ ಇತರರ ಎತ್ತುಗಳನ್ನು ಸಹ ಹೊಡೆದುಕೊಂಡು ಬಂದು ಒಂದು ನಿರ್ದಿಷ್ಟ ಸ್ಥಳದಲ್ಲಿ ಸಾಲಾಗಿ ನಿಲ್ಲಿಸಿ ಒಂದು ಕಡೆಯ ನಿಗದಿತ ಸ್ಥಳದಿಂದ ಮತ್ತೊಂದು ಕಡೆಯ ನಿರ್ದಿಷ್ಟ ಸ್ಥಳದವರೆಗೆ ಎತ್ತುಗಳನ್ನು ಓಡಿಸಲಾಗುತ್ತದೆ.(ಕರಿಹರಿಯಲಾಗುತ್ತದೆ.)ಐದು ಸುತ್ತು ಕರಿಯನ್ನು ಹರಿಯುವುದು ಸಾಂಪ್ರದಾಯ ಆದರೆ ಇಲ್ಲಿ ಮೂರು ಸುತ್ತು ಕರಿಯನ್ನು ಹರಿಯಲಾಗುತ್ತದೆ. ಹೀಗೆ ಸ್ಪರ್ಧೆಯಲ್ಲಿ ಭಾಗಿಯಾದ ಎತ್ತುಗಳಲ್ಲಿ ಅಗಸೆಗೆ ಕಟ್ಟಿದ ಮಾವು-ಬೇವಿನ ತೋರಣದೊಳಗೆ ಯಾವುದು ಮೊದಲು ಓಡಿ ಹೋಗುವುದೋ ಆ ಎತ್ತನ್ನು ಜಯಶಾಲಿಯೆಂದು ಪರಿಗಣಿಸಿ ಅಗಸೆಗೆ ಕಟ್ಟಿದ್ದ ತೋರಣವನ್ನು ಹರಿಯಲಾಗುತ್ತದೆ. ಎತ್ತರದಲ್ಲಿ ಕಟ್ಟಿರುವ ಈ ತೋರಣವನ್ನು ಮುಟ್ಟಿಕೀಳುವುದು ಒಂದು ರೀತಿಯ ಸಾಹಸ ಸ್ಪರ್ಧೆಯಾಗಿರುತ್ತದೆ. ಯಾವ ಎತ್ತು ಸ್ಪರ್ಧೆಯಲ್ಲಿ ಜಯಗಳಿಸುವುದೋ ಆ ಎತ್ತಿಗೆ ಹಾಗೂ ಆ ಎತ್ತಿನ ಒಡೆಯನಿಗೆ ಹಟ್ಟಿಯಲ್ಲಿ ಈ ಹಬ್ಬದದಿನದಂದು ರಾಜಮರ್ಯಾದೆಯಿರುತ್ತದೆ. ಜಯಗೊಂಡ ಎತ್ತಿಗೆ ಹಟ್ಟಿಯ

ಜನರೆಲ್ಲರೂ ಸೇರಿ ಅಥವಾಪಟ್ಟಣ ಪಂಚಾಯಿತಿಯ ವತಿಯಿಂದ ಉಡುಗೊರೆಯನ್ನು ನೀಡಿ, ವಾದ್ಯವೃಂದಗಳೊಂದಿಗೆ ಆ ದಿನ ರಾತ್ರಿ ಊರೆಲ್ಲಾ ಮೆರವಣಿಗೆಯನ್ನು ಮಾಡುತ್ತಾರೆ. ಈ ಮೆರವಣಿಗೆಯಲ್ಲಿ ಹಟ್ಟಿಯಲ್ಲಿನ ಅದರಲ್ಲೂ ಎತ್ತಿನೊಡೆಯನ ಮನೆಯ ಸಂಬಂಧಿಗಳಾದ ಹದಿ ಹರೆಯದ ಹೆಣ್ಣುಮಕ್ಕಳು ಕಳಸಗಳನ್ನು ಹಿಡಿಯುವ ಸಾಂಪ್ರದಾಯವು ಇದೆ. ಹಟ್ಟಿಯಲ್ಲಿನ ಹಿರಿಯ ಕಿರಿಯರೆಲ್ಲರ ಸಹಕಾರ ಪ್ರೊತ್ಸಾಹದಿಂದ ಸಾಗುವ ಮೆರವಣಿಗೆಯ ಉತ್ಸವವು ಇಡೀ ಹಟ್ಟಿಯ ಜನತೆಯಲ್ಲಿ ಸಂತೋಷದಾಯಕ ವಾತಾವರಣವನ್ನು ಕಲ್ಪಿಸುತ್ತದೆ. ಆನಂತರದಲ್ಲಿ ಗೆದ್ದಂತಹ ಎತ್ತಿಗೆ ಆರು ತಿಂಗಳುಗಳ ಕಾಲ ದೈಹಿಕ ಶ್ರಮನೀಡದೇ ಅದನ್ನು ಮನೆಯಲ್ಲಿಯೇ ಕಟ್ಟಿಹಾಕಿ ಮೇಯಿಸಬೇಕೆಂಬ ನಂಬಿಕೆಯೂ ಇಲ್ಲಿನ ಜನತೆಯಲ್ಲಿದೆ.

ಒಟ್ಟಾರೆಯಾಗಿ ಮಾನವನ ಜೀವನದ ಉದ್ದಕ್ಕೂ ಆತನ ಬೆನ್ನಹಿಂದೆಯೇ ಸಹಸ್ರಾರು ವರ್ಷಗಳಿಂದ ಬೆಳೆದು ಬಂದಿರುವ ಮೌಖಿಕ ಪರಂಪರೆಯ ಕುರುಹುಗಳಾದ ಐತಿಹ್ಯಗಳು, ನಂಬಿಕೆಗಳು, ಆಚರಣೆಗಳು, ರೂಢಿ ಸಂಪ್ರದಾಯಗಳು, ಆಚಾರವಿಚಾರಗಳು, ಜಾತ್ರೆ ಉತ್ಸವಗಳು ಹಬ್ಬ–ಹರಿದಿನಗಳೆಂಬ ಮುಂತಾದ ಮೌಲ್ಯಗಳೂ ಸಹ ಚರಿತ್ರೆಯ ಅಧ್ಯಯನಕ್ಕೆ, ಪುನರಚನೆಗೆ ಸಹಕಾರಿಯಾಗಿವೆ. ಮೌಖಿಕ ಸಂಪ್ರದಾಯದಲ್ಲಿ ಬೆಳೆದು ಬಂದಿರುವಂತಹ ಹಬ್ಬಗಳಂತೂ ಮಾನವನ ಸಾಂಸ್ಕೃತಿಕ ಜೀವನದ ಒಂದು ಭಾಗವೆಂಬಂತೆ ಸಂಬಂಧ ಹೊಂದಿವೆ. ನಮ್ಮಲ್ಲಿರುವ ಹಳೆಯ ನೋವುಗಳನ್ನು ಮರೆಸುವಂತಹ ಜಾತ್ರೆ–ಉತ್ಸವಗಳು, ನಂಬಿಕೆ ಆಚರಣೆಗಳ ನಡುವಿನ ಬಾಂಧವ್ಯದ ಕೊಂಡಿ ಕಳಚದಂತೆ ಅವುಗಳನ್ನು ತಲೆ ತಲೆಮಾರುಗಳಿಂದ ನಮ್ಮ ಪೂರ್ವಜರು ಉಳಿಸಿ ಬೆಳೆಸಿಕೊಂಡು ಬಂದಿದ್ದಾರೆ. ನಾವುಗಳು ಸಹ ಆಸಂಬಂಧವನ್ನು ಗಟ್ಟಿಗೊಳಿಸಿಕೊಂಡು ಮುಂದಿನ ಪೀಳಿಗೆಯವರಿಗೆ ಅವುಗಳಲ್ಲಿರುವ ಮೌಲ್ಯತೆಯನ್ನು, ಸಾತ್ವಿಕತೆಯನ್ನು ನೀಡಿದರೆ ಸಾಮೂದಾಯಿಕ ಶಾಂತಿ, ದೈವಭಕ್ತಿ, ಮನೋರಂಜನೆ, ಭಾವೈಕ್ಯತೆಯನ್ನು ಉಂಟು ಮಾಡಬೇಕಾಗಿದೆ. ಈ ಮೌಖಿಕ ಪರಂಪರೆಯನ್ನು ಸಾಂಪ್ರಾದಾಯಿಕವಾಗಿ ಬೆಳೆಸಿಕೊಂಡು ಹೋಗುವುದರಿಂದ ಒಂದು ಪ್ರದೇಶದಲ್ಲಿನ ಸಾಂಸ್ಕೃತಿಕ ಪರಂಪರೆಯನ್ನು ತಿಳಿಯಲು ಅನುಕೂಲವಾಗುತ್ತದೆ ಎಂದು ಹೇಳಬಹುದಾಗಿದೆ.

**ಅಡಿಟಿಪ್ಪಣಿಗಳು**

೧. ಕರಿಬಸಪ್ಪ ಎ., **ಬಳ್ಳಾರಿ ಜಿಲ್ಲೆಯ ಐತಿಹ್ಯಗಳು**, ಪು.೯

೨. ಅದೇ, ಪು.೮

೩. ಅದೇ, ಪು.೭

೪. ನಿಂಗಣ್ಣ ಚಿ.ಸಿ.(ಸಂ), **ಕನ್ನಡ ಸಾಹಿತ್ಯ ಸಂಸ್ಕೃತಿ ಕೋಶ**, ಪು.೫೨೫

೫. ಅದೇ, ಪು.೫೨೬

೬. ಅದೇ, ಪು.೫೨೬

೭. ಭೀಮರೆಡ್ಡಿ ಕೆ.ಎನ್., **ಮೊಳಕಾಲ್ಮೂರು ತಾಲೂಕು ದರ್ಶನ**, ಪು.೧೪

೮. ಅದೇ, ಪು.೧೪

೯. **ಮೈಸೂರು ಗ್ಯಾಸೆಟಿಯರ್, ಸಂಪುಟ ೨**, ಪು.೫೩೫

೧೦. ಭೀಮರೆಡ್ಡಿ ಕೆ.ಎನ್., **ಪೂರ್ವೋಕ್ತ**, ಪು.೧೪

೧೧. ಮೈಲಾರಪ್ಪ ಬಿ., **ಮೊಳಕಾಲ್ಮೂರು ತಾಲೂಕಿನ ಸ್ಥಳನಾಮಗಳು(ಅಪ್ರಕಟಿತ ಎಂ.ಫಿಲ್. ಪ್ರೌಢಪ್ರಬಂಧ)**, ಪು.೯೪

೧೨. **ಪದ್ಮ ಸಿಂಚನ**, ಸ್ಮರಣ ಸಂಚಿಕೆ, ಪು.೨೮

೧೩. ಓಬಳೇಶ್ವರರವರ ಮಾಹಿತಿ ಮತ್ತು ಉಲ್ಲೇಖ, ವಯಸ್ಸು ೩೫

೧೪. ಚಂದ್ರಶೇಖರ ಬೈ.ಸೆ.ಯವರ ಮಾಹಿತಿ ಮತ್ತು ಉಲ್ಲೇಖ, ವಯಸ್ಸು ೬೮

೧೫. ಸಣ್ಣಯ್ಯನವರ ಮಾಹಿತಿ ಮತ್ತು ಉಲ್ಲೇಖ, ವಯಸ್ಸು ೭೮

೧೬. ಸಣ್ಣಬೊಮ್ಮಣ್ಣನವರ ಮಾಹಿತಿ ಮತ್ತು ಉಲ್ಲೇಖ, ವಯಸ್ಸು ೩೨

೧೭. ಶಾಮರಾಯರು ತ.ಸು., **ಮೂರು ತಲೆಮಾರು**, ಪು.೨೯-೫೪

೧೮. ಕ್ಷೇತ್ರಕಾರ್ಯ ಮಾಹಿತಿ

೧೯. ಅದೇ,

೨೦. ವಸಂತಮಾಸ್ತರರವರ ಮಾಹಿತಿ ಮತ್ತು ಉಲ್ಲೇಖ, ವಯಸ್ಸು ೮೦

೨೧. ಕೃಷ್ಣಮೂರ್ತಿ ವಾಂಜ್ರೆಯವರ ಮಾಹಿತಿ ಮತ್ತು ಉಲ್ಲೇಖ, ವಯಸ್ಸು ೫೫

೨೨. ಚಂದ್ರಶೇಖರ ಬೈ.ಸೆ.ಯವರ ಮಾಹಿತಿ ಮತ್ತು ಉಲ್ಲೇಖ, ವಯಸ್ಸು, ೬೮

೨೩. ರಾಘವೇಂದ್ರರವರ ಮಾಹಿತಿ ಮತ್ತು ಉಲ್ಲೇಖ, ವಯಸ್ಸು ೬೫

೨೪. ಗಿರಿಜಾ ಟಿ., **ಚಿತ್ರದುರ್ಗ ಜಿಲ್ಲಾದರ್ಶಿನಿ**, ಪು.೨೫೮

೨೫. ದುರುಗಪ್ಪ ಏಕಬೋಟೆಯವರ ಮಾಹಿತಿ ಮತ್ತು ಉಲ್ಲೇಖ, ವಯಸ್ಸು ೮೬

೨೬. ಗಂಗಮ್ಮ ಐಯ್ಯನೋರ ಮಾಹಿತಿ ಮತ್ತು ಉಲ್ಲೇಖ, ವಯಸ್ಸು ೮೫

೨೭. **ಪದ್ಮಸಿಂಚನ**, ಸ್ಮರಣಸಂಚಿಕೆ, ಪು.೨೩-೨೪

೨೮. ಕೃಷ್ಣಮೂರ್ತಿ ವಾಂಜ್ರೆಯವರ ಮಾಹಿತಿ ಮತ್ತು ಉಲ್ಲೇಖ, ವಯಸ್ಸು ೫೫

೨೯. ಮಂಜುನಾಥ ಬೇವಿನಕಟ್ಟೆ, **ಪರಿಷೆ v/s ಮಾನ್ಯೇವು**, ಪು೧೧೦

೩೦. ಬರಗೂರು ರಾಮಚಂದ್ರಪ್ಪ, **ಕರ್ನಾಟಕ ಸಂಗಾತಿ**, ಪು.೩೬೧

೩೧. ಮಂಜುನಾಥ ಬೇವಿನಕಟ್ಟೆ, **ಪೂರ್ವೋಕ್ತ**, ಪು.೧೧೦

೩೨. ಹಂಪನಾಗರಾಜಯ್ಯ, **ಕರ್ನಾಟಕದ ಜಾತ್ರೆಗಳು**, ಪು.೯

೩೩. ಮಂಜುನಾಥ ಬೇವಿನಕಟ್ಟೆ, **ಪೂರ್ವೋಕ್ತ**, ಪು.೧೧೧

೩೪. ಕ್ಷೇತ್ರಕಾರ್ಯ ಮಾಹಿತಿ

೩೫. **ಕನ್ನಡ ನಿಘಂಟು**, ಸಂಪುಟ ೭, ಪು.೭೦೮೫

೩೬. ಕ್ಷೇತ್ರಕಾರ್ಯ ಮಾಹಿತಿ

೩೭. ಸಿದ್ದಣ್ಣ ಎ., **ನುಂಕೀಮಲೆ ಭೈರವರಾಧನೆ ಹೊಳಹು**(ಅಪ್ರಕಟಿತ ಎಂ.ಫಿಲ್.ಪ್ರೌಢಪ್ರಬಂಧ), ಪು.೪೩

೩೮. ಅದೇ,

೩೯. ರಮೇಶ ಕೆ., **ಉಜ್ಜಯಿನಿ ಗ್ರಾಮಾಧ್ಯಯನ**(ಅಪ್ರಕಟಿತ ಎಂ.ಫಿಲ್.ಪ್ರೌಢಪ್ರಬಂಧ), ಪು.೮೧

೪೦. ವಿದ್ವಾನ್ ವಿ.ಎನ್.ಭಟ್ಟ, **ಭಾರತೀಯ ಹಬ್ಬಗಳ ವೈಶಿಷ್ಟ್ಯ**, ಪು.೨೪-೨೬

೪೧. ಸಿದ್ಧಣ್ಣ ಎ., **ಪೂರ್ವೋಕ್ತ**, ಪು.೫೧-೫೨

೪೨. ವಿದ್ವಾನ್ ವಿ.ಎನ್.ಭಟ್ಟ, **ಪೂರ್ವೋಕ್ತ**, ಪು.೧೭

೪೩. ಅದೇ, ಪು.೧೯

೪೪. ಅದೇ, ಪು.೨೨

೪೫. ಅದೇ, ೧೦೬-೧೦೭

೪೬. ಅದೇ, ೧೦೧-೧೦೪

೪೭. ರಮೇಶ ಬಿ.ಜಿ., **ನಮ್ಮ ಹಬ್ಬಗಳು**, ಪು.೧೯

೪೮. ಅದೇ, ಪು.೪೪

೪೯. ವಿದ್ವಾನ್ ವಿ.ಎನ್.ಭಟ್ಟ, **ಪೂರ್ವೋಕ್ತ**, ಪು.೧೧-೧೨

೫೦. **ಕನ್ನಡ ನಿಘಂಟು**, ಸಂಪುಟ ೭, ಪು.೭೪೬

೫೧. ಷಹಸೀನಾಬೇಗಂ, **ಕರ್ನಾಟಕ ಮುಸ್ಲಿಂ ಜಾನಪದ**, ಪು.೧೪೦

೫೨. ಕನ್ನಡ ನಿಘಂಟು, **ಪೂರ್ವೋಕ್ತ**, ಪು.೭೪೬

## ಅಧ್ಯಾಯ ಐದು

# ಸಮಾರೋಪ

ಕರ್ನಾಟಕದ ಪ್ರತಿಯೊಂದು ಹಳ್ಳಿಯೂ ಭಾರತೀಯ ಚಾರಿತ್ರಿಕ ಮತ್ತು ಸಾಂಸ್ಕೃತಿಕ ವಲಯಕ್ಕೆ ಅಪಾರವಾದ ಕೊಡುಗೆಯನ್ನು ನೀಡಿವೆ. ಇತಿಹಾಸ ಅಧ್ಯಯನದಲ್ಲಿ ಹಳ್ಳಿಗಳ ಚರಿತ್ರೆಯನ್ನು ಕಡೆಗಣಿಸಿ, ಕೇವಲ ರಾಜಮಹಾರಾಜರು ನಡೆಸಿದ ಕದನಗಳ ಜಯಾಪಜಯಗಳಿಗೆ ಸಂಬಂಧಿಸಿದ ರಾಜಕೀಯ ಸಂಗತಿಗಳನ್ನು ಮಾತ್ರ ದಾಖಲಿಸ ಲಾಗಿತ್ತು. ಆದರೆ ಕಾಲಾನಂತರದಲ್ಲಿ ಚರಿತ್ರೆಯ ಬರವಣಿಗೆಯಲ್ಲುಂಟಾದ ಬದಲಾವಣೆಯಿಂದ ಇತಿಹಾಸವೆಂದರೆ ಕೇವಲ ರಾಷ್ಟ್ರವೊಂದರ ರಾಜಕೀಯ ಚರಿತ್ರೆಯಲ್ಲ. ಅದು ರಾಷ್ಟ್ರ, ರಾಜ್ಯ, ಪ್ರಾಂತ್ಯ, ಪ್ರದೇಶ, ನಗರ, ಗ್ರಾಮ, ಸಂಸ್ಥೆ, ಜನಾಂಗವೊಂದರ ಹಾಗೂ ಸಾಮಾನ್ಯ ಜನತೆಯ ಕಥೆಯಾಗಿದೆಂಬುದನ್ನು ಅರಿತು ಪ್ರತಿಯೊಂದು ಹಳ್ಳಿಯ ಇತಿಹಾಸವನ್ನು ಮತ್ತೊಮ್ಮೆ ಮರು ಜೋಡಣೆ ಮಾಡಿ ಸ್ಥಳೀಯಮಟ್ಟದ ಸೂಕ್ಷ್ಮ ಅಧ್ಯಯನಗಳನ್ನು ನಡೆಸುವುದು ಅನಿವಾರ್ಯವಾಯಿತು. ಇದರಿಂದ ಕೇವಲ ರಾಜಕೀಯ ಸಂಗತಿಗಳನ್ನಷ್ಟೇ ಅಲ್ಲದೇ ಆರ್ಥಿಕ, ಸಾಮಾಜಿಕ, ಚಾರಿತ್ರಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಎಂಬ ಹತ್ತು ಹಲವು ಸಂಗತಿಗಳನ್ನು ದಾಖಲಿಸುವ ಪ್ರಯತ್ನಗಳು ಸಾಗಿಬಂದವು. ಮೊಳಕಾಲ್ಮೂರು ಪ್ರಾಕ್ಚಾರಿತ್ರಿಕವಾಗಿಯೂ ಪುರಾತತ್ವೀಯವಾಗಿಯೂ ಜಿಲ್ಲೆಯಲ್ಲಷ್ಟೇ ಅಲ್ಲದೇ ರಾಜ್ಯ, ರಾಷ್ಟ್ರಮಟ್ಟದ ಚರಿತ್ರೆಯಲ್ಲಿ ಅದ್ವಿತೀಯ ಸ್ಥಾನ ಪಡೆದುಕೊಂಡಿದೆ. ಇಲ್ಲಿ ಲಭ್ಯವಿರುವ ಸಾಹಿತ್ಯ, ಪುರಾತತ್ವೀಯ, ಮೌಖಿಕ, ಆಕರಗಳಿಂದಷ್ಟೇ ಅಲ್ಲದೇ ಕ್ಷೇತ್ರಕಾರ್ಯದ ನೆರವಿನಿಂದ ಕಂಡುಕೊಂಡ ಇಲ್ಲಿನ ಇತಿಹಾಸ ಸ್ಥಳೀಯ ಚರಿತ್ರೆ ಮತ್ತು ಸಂಸ್ಕೃತಿಯನ್ನು ಬರಹದ ರೂಪದಲ್ಲಿ 'ಮೊಳಕಾಲ್ಮೂರು: ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ' ಎಂಬ ಪ್ರೌಢಪ್ರಬಂಧದಲ್ಲಿ ದಾಖಲಿಸುವ ಸಣ್ಣ ಪ್ರಯತ್ನವನ್ನು ಮಾಡಿದೆ.

ಪ್ರಸ್ತುತ ಅಧ್ಯಯನವನ್ನು ಊರಿನ ಉತ್ತರಕ್ಕಿರುವ ಬೆಟ್ಟದ ಮೇಲಿನ ಕೋಟೆಯಿಂದ ದಕ್ಷಿಣದ ಮಾರುತಿ ಬಡಾವಣೆವರೆಗೆ, ಪೂರ್ವದ ಕರ್ನಾಟಕ-ಆಂಧ್ರಪ್ರದೇಶ ಗಡಿಯಂಚಿನ ಗಾಳಿಮಾರಮ್ಮ ಗುಡಿಯಿಂದ ಪಶ್ಚಿಮದ ಕೋತಲಗುಂಡಿ ಕಣಿವೆಯವರೆಗಿನ ಪರಿಸರದಲ್ಲಿ

ಕೈಗೊಂಡ ಕ್ಷೇತ್ರಕಾರ್ಯ ಹಾಗೂ ಲಭ್ಯವಾದ ಆಕರಗಳ ಹಿನ್ನೆಲೆಯಲ್ಲಿ ಕಟ್ಟಿಕೊಡಲು ಪ್ರಯತ್ನಿಸಲಾಗಿದೆ. ಇಲ್ಲಿನ ಭೌಗೋಳಿಕ ಪರಿಸರವು ನಿಸರ್ಗದತ್ತವಾದ ಬೆಟ್ಟಗುಡ್ಡ, ಆ ಬೆಟ್ಟಗುಡ್ಡಗಳ ನಡುವೆ ಕಂಗೊಳಿಸುವ ಕಣಿವೆ, ಹಳ್ಳ-ಕೊಳ್ಳ ಹಾಗೂ ಕೆರೆ-ಕುಂಟೆಗಳಿಂದ ವೈವಿಧ್ಯಮಯವಾಗಿದೆ.

ಇಲ್ಲಿನ ಪರಿಸರದಲ್ಲಿ ಶಿಲಾಯುಗದ ಕಾಲದಿಂದ ಪ್ರಸ್ತುತ ದಿನಮಾನದವರೆಗೆ ಮಾನವನು ಕೈಗೊಂಡ ಹಲವಾರು ಚಟುವಟಿಕೆಗಳ ಕುರುಹುಗಳು ಕಂಡುಬಂದಿವೆ. ಬೆಟ್ಟಗುಡ್ಡಗಳಿಂದ ಸುತ್ತುವರಿದ ಈ ಪ್ರದೇಶದಲ್ಲಿ 'ಮೋರೆರ ಮನೆಗಳು', 'ಮೋರೆರ ಇಂಡ್ಲು' ಎಂದು ಸ್ಥಳೀಯವಾಗಿ ಗುರುತಿಸುವ ಬೃಹತ್ ಶಿಲಾಯುಗದ ಸಮಾಧಿಗಳು ಕಂಡುಬಂದಿವೆ. ಇಲ್ಲಿನ ಬೆಟ್ಟದ ತಪ್ಪಲಿನ ಪ್ರದೇಶದಲ್ಲಿ ದೊರೆತ ನವಶಿಲಾಯುಗ ಸಂಸ್ಕೃತಿಯ ಕಲ್ಲಿನ ಕೈಕೊಡಲಿಯಿಂದ ಮೊಳಕಾಲ್ಮೂರು ನವಶಿಲಾಯುಗದನೆಲೆಯೂ ಆಗಿತ್ತು ಎಂಬ ಅಂಶ ಬೆಳಕಿಗೆ ಬಂದಿತು. ಹಾಗೆಯೇ ಇಲ್ಲಿನ ಸೂಕ್ಷ್ಮ ಮತ್ತು ಹಳೆಯ ಶಿಲಾಯುಗ ಸಂಸ್ಕೃತಿಯ ಶೋಧನೆಗಾಗಿ ಹೆಚ್ಚಿನ ಸಂಶೋಧನೆಯ ಅವಶ್ಯಕತೆ ಇರುತ್ತದೆ. ಹೀಗೆ ಇಲ್ಲಿನ ಪರಿಸರ ಪ್ರಾಗಿತಿಹಾಸ ಮಾನವನ ವಾಸಕ್ಕೆ ಹೇಳಿ ಮಾಡಿಸಿದಂತಹ ನೆಲೆಯಾಗಿತ್ತೆಂದು ತಿಳಿಯಲಾಗಿದೆ.

ಚಾರಿತ್ರಿಕ ಯುಗಕ್ಕೆ ಸಂಬಂಧಿಸಿದಂತೆ ಇತಿಹಾಸದಲ್ಲಿ ಆಡಳಿತ ನಡೆಸಿದ ರಾಜಮನೆತನಗಳಲ್ಲಿ ಯಾವೊಂದು ರಾಜ ಮನೆತನವು ನಿರ್ದಿಷ್ಟವಾಗಿ ಇಲ್ಲಿ ಆಡಳಿತ ನಡೆಸಿರುವುದಿಲ್ಲ. ಆದರೂ ಇಲ್ಲಿನ ಚಾರಿತ್ರಿಕ ಇತಿಹಾಸ ಮೌರ್ಯರ ಕಾಲದಿಂದ ಸ್ವಾತಂತ್ರ್ಯ ಚಳುವಳಿಯ ಕಾಲಘಟ್ಟದ ವರೆಗೆ  ವಿಸ್ತಾರಗೊಂಡಿರುವುದು ತಿಳಿದುಬಂದಿದೆ. ಕದಂಬರು, ನೊಳಂಬರು, ಕುಮ್ಮಟದ ಅರಸರು, ವಿಜಯನಗರದ ಅರಸರು, ಪಾಳೆಯಗಾರರು, ಹೈದರಾಲಿ-ಟಿಪ್ಪು, ಮೈಸೂರಿನ ಒಡೆಯರ ಆಡಳಿತಕ್ಕೆ ಸಂಬಂಧಿಸಿದ ಶಾಸನಗಳು, ಶಾಸನಶಿಲ್ಪಗಳು, ಕೆರೆಕಟ್ಟೆಗಳು, ಕೋಟೆ-ಕೊತ್ತಲಗಳು, ದೇವಾಲಯಗಳು, ದೇವತಾಮೂರ್ತಿ ಶಿಲ್ಪಗಳೆಂಬ ಮೊದಲಾದ ಸ್ಮಾರಕಗಳ ಕುರಿತಾಗಿ ಒದಗಿಬಂದ ಮಾಹಿತಿಯ ಹಿನ್ನೆಲೆಯಲ್ಲಿ ಈ ಪ್ರದೇಶವು ಧಾರ್ಮಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಅದ್ವಿತೀಯವಾದ ಸ್ಥಾನ ಪಡೆದಿರುವುದು ದೃಢವಾಗಿದೆ. ಮೊಳಕಾಲ್ಮೂರು ಸ್ಥಳನಾಮದ ಕುರಿತು ವಿವಿಧ ವಿದ್ವಾಂಸರ ಅಭಿಪ್ರಾಯಗಳನ್ನು ತಿಳಿಯು ವುದರ ಜೊತೆಗೆ ಮರಳುಕಲ್ಲುಗಳಿಂದ ಕೂಡಿರುವ ಊರು ಮರಳು ಕಲ್ಲು ಊರು> ಮರಳು ಕಲ್ಲೂರು>ಮರಳ್‌ಕಲ್ಲೂರು>ಮೊರಳ್‌ಕಲೂರು>ಮೊಳ್‌ಕಲೂರು>ಮೊಳಕಾಲ್ಮೂರು ಎಂದಾಗಿರ ಬೇಕೆಂದು ಕಂಡುಕೊಳ್ಳಲಾಗಿದೆ.

ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪದ ಪ್ರಭಾವವೂ ಮೊಳಕಾಲ್ಮೂರು ಪ್ರದೇಶದ ಮೇಲೆಯೂ ಆಗಿದೆ ಎನ್ನಬಹುದು. ದೇವಾಲಯ ವಾಸ್ತುಶಿಲ್ಪಕ್ಕೆ ಸಂಬಂಧಿಸಿದಂತೆ ಶೈವ, ವೈಷ್ಣವ ಹಾಗೂ ಶಾಕ್ತಮತ ಪಂಥಗಳಿಗೆ ಸಂಬಂಧಿಸಿದಂತೆ ದೇವಾಲಯಗಳು ಹಾಗೂ

ಮೂರ್ತಿಶಿಲ್ಪಗಳು ಕಂಡುಬರುತ್ತಿದ್ದು, ಅವುಗಳೆಲ್ಲವೂ ವಿಜಯನಗರೋತ್ತರ ಹಾಗೂ ೨೦ನೇ ಶತಮಾನದಲ್ಲಿ ನಿರ್ಮಾಣಗೊಂಡಿವೆ. ಇಲ್ಲಿನ ಬಹುತೇಕ ದೇವಾಲಯಗಳು ಅಳಿವಿನ ಅಂಚಿನಲ್ಲಿರುವುದರಿಂದ ಸ್ಥಳೀಯರು ಅವುಗಳನ್ನು ಜೀರ್ಣೋದ್ಧಾರಗೊಳಿಸಿದ್ದಾರೆ. ಇದರಿಂದ ಆ ದೇವಾಲಯಗಳ ಮೂಲ ಸ್ವರೂಪಕ್ಕೆ ಧಕ್ಕೆಯಾಗಿದೆ ಎನ್ನಲಾಗಿದೆ. ಇಲ್ಲಿನ ಶೈವ, ವೈಷ್ಣವ ಹಾಗೂ ಶಾಕ್ತ ದೇವಾಲಯಗಳೆಲ್ಲವೂ ಒಂದೇ ರೀತಿಯ ರಚನೆಯನ್ನು ಹೊಂದಿಲ್ಲ. ಬದಲಾಗಿ ಒಂದಕ್ಕಿಂತ ಒಂದು ವಿಶೇಷವಾಗಿ ರಚಿತಗೊಂಡಿರುವುದು ಕಂಡುಬಂದಿವೆ.

ಇಲ್ಲಿನ ಶೈವ ದೇವಾಲಯಗಳಲ್ಲಿ ಹೆಚ್ಚಾಗಿ ಶಿವಾಲಯಗಳಿದ್ದು, ಎಲ್ಲವೂ ಗರ್ಭಗೃಹ ಮತ್ತು ಸಭಾಮಂಟಪವನ್ನು ಹೊಂದಿದ್ದು, ಸಭಾಮಂಟಪದಲ್ಲಿ ಗರ್ಭಗುಡಿಯ ಲಿಂಗಕ್ಕೆ ಅಭಿಮುಖವಾಗಿ ಶಿವನ ವಾಹನವಾದ ನಂದಿಯನ್ನು ಹಾಗೂ ಸಭಾಮಂಟಪದ ಮುಂಭಾಗದಲ್ಲಿ ದೀಪಸ್ತಂಭದಿಂದ ಪ್ರತಿಷ್ಠಾಪನೆಗೊಂಡಿದ್ದು, ಹೆಚ್ಚಾಗಿ ಪೂರ್ವಾಭಿಮುಖವಾಗಿ ನಿರ್ಮಾಣ ಗೊಂಡಿವೆ. ಆದರೆ ಇಲ್ಲಿನ ಎಲ್ಲಾ ಶೈವ ದೇವಾಲಯಗಳಿಗೆ ಸಂಬಂಧಿಸಿ ನೋಡಿದರೆ ಎನ್.ಎಂ.ಎಸ್.ಬಡಾವಣೆಯ ಈಶ್ವರ ದೇವಾಲಯದಲ್ಲಿ ಮಾತ್ರ ನಂದಿ ಹಾಗೂ ದೀಪಸ್ತಂಭದ ಪ್ರತಿಷ್ಠಾಪನೆ ಇರುವುದಿಲ್ಲ. ಬದಲಾಗಿ ಇದು ದಕ್ಷಿಣಾಭಿಮುಖವಾಗಿದೆ. ಹಾಗೆಯೇ ಉತ್ತರಾಭಿಮುಖ ವಾಗಿರುವ ಕೆಳಗಿನ ಈಶ್ವರಗುಡಿಯಲ್ಲಿ ದೀಪಸ್ತಂಭ ಇಲ್ಲದಿರುವುದು, ಪಶ್ಚಿಮಾಭಿಮುಖವಾಗಿರುವ ಗೌರಮ್ಮನ ಗುಡಿಯಲ್ಲಿ ದೀಪಸ್ತಂಭ ಇಲ್ಲದಿರುವುದು ಕಂಡುಬರುತ್ತದೆ. ಹಾಗೆಯೇ ಇಲ್ಲಿನ ಶೈವ ದೇವಾಲಯಗಳಲ್ಲಿಯೇ ಬಹು ಎತ್ತರದ ಅಧಿಷ್ಠಾನದ ಮೇಲೆ ಗೌರಮ್ಮನ ಗುಡಿ ರಚಿತ ಗೊಂಡಿರುವುದು ಹಾಗೂ ಬೆಟ್ಟದ ಮೇಲಿನ ಈಶ್ವರ ದೇವಾಲಯದ ಭಿತ್ತಿಯ ಭಾಗದಲ್ಲಿ ಮಾತ್ರ ಹಲವು ಪ್ರಾಣಿಗಳ ಉಬ್ಬುಶಿಲ್ಪಗಳಿರುವುದು ಬೆಳಕಿಗೆ ಬಂದಿದೆ.

ಶೈವಮತ ಪಂಥಕ್ಕೆ ಸಂಬಂಧಿಸಿದಂತೆ ಶಿವಾಲಯಗಳು ಹೆಚ್ಚಾಗಿ ಕಂಡುಬರುವಂತೆ ವೈಷ್ಣವ ದೇವಾಲಯಗಳಲ್ಲಿ ಆಂಜನೇಯ ದೇವಾಲಯಗಳೇ ಹೆಚ್ಚಿನ ಪ್ರಮಾಣದಲ್ಲಿ ಕಂಡುಬಂದಿವೆ. ಊರಿಗೆ ಒಂದು ಹನುಮಂತ ದೇವಾಲಯವಿರುವುದು ಹಾಗೂ ಆ ದೇವಾಲಯಗಳೆಲ್ಲವೂ ದಕ್ಷಿಣಾಭಿಮುಖವಾಗಿ ನಿರ್ಮಾಣಗೊಂಡಿರುವುದು ಸರ್ವೇಸಾಮಾನ್ಯ. ಆದರೆ ಇದಕ್ಕೆ ವಿರುದ್ಧ ವೆಂಬಂತೆ ಮೊಳಕಾಲ್ಮೂರಿನ ಉತ್ತರದಲ್ಲಿ ವೀರಾಂಜನೇಯ, ಬಾಲಾಂಜನೇಯ, ಪೂರ್ವದಲ್ಲಿ ಬಯಲು ಆಂಜನೇಯ ಮತ್ತು ದಕ್ಷಿಣದಲ್ಲಿ ಜನ್ನಿಗೆ ಪಾಲು ಆಂಜನೇಯ ದೇವಾಲಯಗಳಿರುವುದು ಕಂಡುಬಂದಿವೆ. ಅಷ್ಟೇ ಅಲ್ಲದೇ ಇಲ್ಲಿನ ಬೆಟ್ಟದ ಮೇಲೆ ಮತ್ತೊಂದು ಕೋಟೆ ಆಂಜನೇಯ ದೇವಾಲಯವಿದ್ದು, ಅದು ಉತ್ತರಾಭಿಮುಖವಾಗಿ ನಿರ್ಮಾಣಗೊಂಡಿದ್ದು, ಗರ್ಭಗುಡಿಯಲ್ಲಿನ ದೇವತಾಮೂರ್ತಿ ಪಶ್ಚಿಮಕ್ಕೆ ಮುಖಮಾಡಿ ಸ್ಥಾನಿಕ ಭಂಗಿಯಲ್ಲಿರುವುದು ಒಂದು ವಿಶೇಷ ಆಗಿದೆ. ಈ ಕುರಿತಾಗಿ ಯೋಚಿಸಿದರೇ ಬಹುಶಃ ಈ ದೇವತಾ ಮೂರ್ತಿಯನ್ನು ಬೇರೆ

ಕಡೆಯಿಂದ ತಂದು ಮೊದಲೇ ಇದ್ದಂತಹ ಆಲಯದೊಳಗೆ ಪ್ರತಿಷ್ಠಾಪಿಸಿರಬೇಕು ಎನಿಸುತ್ತದೆ. ಇಲ್ಲಿನ ವೆಂಕಟರಮಣ ದೇವಾಲಯವನ್ನು ಹೊರತುಪಡಿಸಿದರೆ ಉಳಿದ ಯಾವ ವೈಷ್ಣವ ದೇವಾಲಯದ ಭಿತ್ತಿಯಲ್ಲಿ ವಿವಿಧ ಪ್ರಾಣಿಗಳ ಉಬ್ಬುಶಿಲ್ಪಗಳು ಕಂಡುಬರುವುದಿಲ್ಲ. ಮೊಳಕಾಲ್ಮೂರಿನ ದುರ್ಗಾದೇವಿ ದೇವಾಲಯವನ್ನು ಹೊರತುಪಡಿಸಿದರೆ ಉಳಿದೆಲ್ಲಾ ಶಾಕ್ತ ದೇವಾಲಯಗಳು ಕೇವಲ ಗರ್ಭಗುಡಿಯನ್ನು ಮಾತ್ರ ಒಳಗೊಂಡಂತಹ ಒಂದು ಅಂಕಣದ ಚಿಕ್ಕ ಗುಡಿಗಳಾಗಿದ್ದು, ಎಲ್ಲವೂ ಸಹ ಪೂರ್ವಾಭಿಮುಖವಾಗಿ ರಚಿತಗೊಂಡಿವೆ. ಆದರೆ ಬಯಲು ಆಂಜನೇಯ ಬಡಾವಣೆಯ ಚೌಡೇಶ್ವರಿ ದೇವಾಲಯ ಮಾತ್ರ ದಕ್ಷಿಣಾಭಿಮುಖವಾಗಿ ನಿರ್ಮಾಣಗೊಂಡಿರುವುದು ಬೆಳಕಿಗೆ ಬಂದಿದೆ.

ಮೊಳಕಾಲ್ಮೂರಿನಲ್ಲಿರುವ ಎಲ್ಲಾ ದೇವಾಲಯಗಳ ಗರ್ಭಗುಡಿಯಲ್ಲಿ ದೇವತಾಮೂರ್ತಿ ಶಿಲ್ಪಗಳು ಹಾಗೂ ಕೆಲವೊಂದು ದೇವಾಲಯಗಳಲ್ಲಿ ಗಾರೆಶಿಲ್ಪಗಳಿರುವುದು ಕಂಡುಬಂದಿದೆ. ಶಿವಲಿಂಗ, ಗಣೇಶ, ನಂದಿ, ವಿಷ್ಣು, ನರಸಿಂಹ, ದುರ್ಗಿ, ಪಾರ್ವತಿ, ಮಾರಮ್ಮ ಎಂಬ ಶೈವ, ವೈಷ್ಣವ ಮತ್ತು ಶಾಕ್ತಪರಂಪರೆಯ ಮೂರ್ತಿಶಿಲ್ಪಗಳೂ ಸಹ ಇಲ್ಲಿನ ಸ್ಥಳೀಯ ಇತಿಹಾಸದ ರಚನೆಯಲ್ಲಿ ಸಹಕಾರಿಯಾಗಿವೆ.

ದೇವಾಲಯದ ವಾಸ್ತುಶಿಲ್ಪದಂತೆ ಕೋಟೆ ಕೊತ್ತಲಗಳೆಂಬ ರಕ್ಷಣಾ ವಾಸ್ತುಶಿಲ್ಪವೂ ಬೆಳೆದುಬಂದಿರುವುದನ್ನು ಇಲ್ಲಿನ ಕೋಟೆಯಿಂದ ತಿಳಿಯಲಾಗಿದೆ. ಕೆಳಗಿನಿಂದ ಬೆಟ್ಟದ ಮೇಲಕ್ಕೆ ಹೋದರೆ ಎರಡು ಬೆಟ್ಟಗಳ ನಡುವೆ ರಚಿತಗೊಂಡಿರುವ ಕೋಟೆಯು ಅಭೇದ್ಯವಾದುದಾಗಿದೆ. ಕೋಟೆಯ ನಿರ್ಮಾಣ, ಇತಿಹಾಸ, ರಚನೆಯ ಕುರಿತಾದ ಅಂಶಗಳೂ ಬೆಳಕಿಗೆ ಬಂದಿವೆ. ಅಷ್ಟೇ ಅಲ್ಲದೆ ಕೋಟೆಯಲ್ಲಿನ ಹಾಳಾದ ಕಟ್ಟಡಗಳು, ಉಗ್ರಾಣಗಳು, ದೇವಾಲಯಗಳು, ಸೈನಿಕರ ವಸತಿಗೃಹಗಳ ಅಳಿದುಳಿದ ಭಾಗಗಳನ್ನಾದರೂ ಸಂರಕ್ಷಿಸಿದರೆ ಮುಂದಿನ ಪೀಳಿಗೆಯ ಅಧ್ಯಯನಕಾರರಿಗೆ ಅನುಕೂಲವಾಗುತ್ತದೆ. ಹಾಗೆಯೇ ಕೋಟೆಯಲ್ಲಿನ ನಾಗತಿಕೆರೆ, ತುಪ್ಪದಮ್ಮನ ಬಾವಿ, ನೀಲಮ್ಮನ ಕುಂಟೆ, ಏಣಿಮಾರಮ್ಮನ ಹೊಂಡ, ಕಂಪಿಲರಾಯನ ಹೊಂಡ ಎಂಬ ಮುಂತಾದ ನೀರಿನ ಆಶ್ರಯತಾಣಗಳನ್ನು ಕೇವಲ ದಾಖಲಿಸುವ ಪ್ರಯತ್ನ ಮಾತ್ರ ಮಾಡಿದೆ. ಇಲ್ಲಿನ ಕೋಟೆಯ ಪ್ರಮುಖ ದ್ವಾರಬಾಗಿಲುಗಳು, ದಿಡ್ಡಿಬಾಗಿಲುಗಳು, ಬುರುಜುಗಳಿಂದ ಇಡೀ ಕೋಟೆಯ ರಚನಾ ತಂತ್ರಗಾರಿಕೆಯು ದೃಢವಾಗಿದೆ.

ಮೊಳಕಾಲ್ಮೂರಿನ ಸ್ಥಳೀಯ ಇತಿಹಾಸದ ರಚನೆಯಲ್ಲಿ ಶಾಸನಗಳು ಹಾಗೂ ಶಾಸನಶಿಲ್ಪಗಳ ಪಾತ್ರ ಅತಿಮುಖ್ಯವಾಗಿದೆ. ಪಾಳೆಯಗಾರರ ಕಾಲದ ಶಾಸನಗಳೆರಡು ಕೆರೆ ನಿರ್ಮಾಣ ಮತ್ತು ಕೋಟೆಗೆ ಸಂಬಂಧಿಸಿದಂತೆ ಮಾಹಿತಿ ನೀಡಿದರೆ, ಕಾಳಿದಾಸನ ಯಮಕ ಶ್ಲೋಕದ ಶಾಸನವು ಎಡದಿಂದ–ಬಲಕ್ಕೆ, ಬಲದಿಂದ–ಎಡಕ್ಕೆ ಓದಿದರೂ ಒಂದೇ ಅರ್ಥವನ್ನು ಕೊಡುವಂತಹ

ವಿಶೇಷತೆಯನ್ನೊಂದಿರುವುದು ದೃಢವಾಗಿದೆ. ಹಾಗೆಯೇ ಶಾಸನ ಶಿಲ್ಪಗಳೆಂದು ಕರೆಯುವ ವೀರಗಲ್ಲು, ಮಹಾಸತಿಕಲ್ಲುಗಳು ಒಂದು ಕಾಲದಲ್ಲಿ ಈ ಪ್ರದೇಶದ ಜನತೆಯಲ್ಲಿದ್ದ ಸ್ವಾಮಿನಿಷ್ಠೆ, ಪರಾಕ್ರಮ, ವೀರತ್ವ, ಹೋರಾಟದ ಮನೋಭಾವ ಹಾಗೂ ಆತ್ಮಾರ್ಪಣೆ, ತ್ಯಾಗ, ಪಾತಿವ್ರತೆ, ಆದರ್ಶವೊಂದರ ಪರಂಫರೆಯನ್ನು ಸಾರುವ ಪ್ರತೀಕಗಳಾಗಿವೆ. ಆದರೆ ಪ್ರಸ್ತುತ ದಿನಮಾನಗಳಲ್ಲಿ ಸ್ಥಳೀಯ ಜನರಲ್ಲಿ ಅವುಗಳ ಕುರಿತಾದ ಪ್ರಜ್ಞೆಯಿಲ್ಲದ ಕಾರಣದಿಂದ ನಿಧಿಯ ಆಸೆಯಿಂದ ಭಗ್ನಗೊಂಡು ಹಾಳಾಗಿ ಹೋಗುತ್ತಿರುವುದು ಒಂದು ದುರಂತವೇ ಆಗಿದೆನ್ನಬಹುದು. ಈ ಶಾಸನ ಶಿಲ್ಪಗಳನ್ನು ಸಂರಕ್ಷಿಸಿದರೆ ಅದೇ ನಾವು ಮನುಕುಲಕ್ಕೆ ಮುಂದಿನ ಪೀಳಿಗೆಗೆ ಕೊಡುವ ಕೊಡುಗೆ ಎಂಬ ಭಾವನೆ ಸ್ಥಳೀಯರಲ್ಲಿ ಉಂಟಾದರೆ/ಮೂಡಿಸಿದರೆ ಅವುಗಳ ನಾಶವನ್ನು ತಡೆಯಬಹುದೆನಿಸುತ್ತದೆ.

ಮೊಳಕಾಲ್ಮೂರಿನ ಚರಿತ್ರೆ ಮತ್ತು ಸಂಸ್ಕೃತಿಯನ್ನೊಳಗೊಂಡ ಸ್ಥಳೀಯ ಇತಿಹಾಸದ ರಚನೆಯಲ್ಲಿ ಮೌಖಿಕ ಆಕರಗಳ ನೆರವು ಸಹ ಪ್ರಮುಖವಾಯಿತು. ಈ ನಿಟ್ಟಿನಲ್ಲಿ ಇಲ್ಲಿನ ದೇವದೇವತೆಗಳ ದೇವಾಲಯಗಳ ಮೂರ್ತಿಶಿಲ್ಪಗಳ ಕೋಟೆ ಕೊತ್ತಲಗಳ, ಸ್ಥಳನಾಮ, ಮೊದಲಾದವುಗಳ ಕುರಿತಾದ ಐತಿಹ್ಯಗಳು ಸಹಕಾರಿಯಾದವು. ಹಾಗೆಯೇ ಮಾನವನು ತನ್ನ ಜೀವಿತದುದ್ದಕ್ಕೂ ಹಲವಾರು ನಂಬಿಕೆ ಆಚರಣೆಗಳನ್ನು ಪಾಲಿಸುವುದರ ಜೊತೆಗೆ ತನ್ನ ವಿಶ್ರಾಂತಿಗಾಗಿ, ಮನೋರಂಜನೆಗಾಗಿ ಅನೇಕ ರೀತಿಯ ಹಬ್ಬಹರಿದಿನಗಳನ್ನು ಸಾಂಪ್ರದಾಯ ಬದ್ಧವಾಗಿ ಆಚರಿಸಿಕೊಂಡು ಬರುವುದರ ಹಿಂದೆ ಅಡಗಿರುವ ಚರಿತ್ರೆಯನ್ನು ಅರಿಯಲಾಯಿತು. ಅಷ್ಟೇ ಅಲ್ಲದೇ ಮೇಲು–ಕೀಳು, ಬಡವ–ಶ್ರೀಮಂತ, ಪುರುಷ–ಸ್ತ್ರೀ ಎಂಬ ಯಾವುದೇ ರೀತಿಯ ತಾರತಮ್ಯವಿಲ್ಲದೇ ಸಾಮೂಹಿಕವಾಗಿ ನಡೆಸಿಕೊಂಡು ಬರುವಂತಹ ಜಾತ್ರೆಗಳು ಇಲ್ಲಿನ ಸಂಸ್ಕೃತಿಯ ಒಂದು ಭಾಗವೇ ಆಗಿದೆ ಎಂಬ ಅಂಶ ಅಧ್ಯಯನದಿಂದ ಕಂಡುಕೊಂಡಿದ ರಿಂದ ಇಲ್ಲಿನ ಸಾಂಸ್ಕೃತಿಕ ಪರಂಪರೆಯನ್ನು ಅರಿಯಲು ಅನುಕೂಲವಾಯಿತು.

ಮೊಳಕಾಲ್ಮೂರು: ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನದ ಕುರಿತಾಗಿ ಹೇಳುವುದಾದರೆ ಪ್ರಾಗೈತಿಹಾಸಿಕ ಕಾಲದಿಂದ ಚಾರಿತ್ರಿಕ ಕಾಲದವರೆಗೆ ಮಹತ್ವ ಪಡೆದಿರುವ ಹಾಗೂ ಪ್ರಸ್ತುತ ದಿನಮಾನಗಳಲ್ಲಿ ರೇಷ್ಮೆ ಸೀರೆಗಳಿಗೆ ಹೆಸರಾಗಿರುವ ಮೊಳಕಾಲ್ಮೂರಿನಲ್ಲಿ ಶೋಧಿತಗೊಂಡಂತಹ ಪ್ರಾಚ್ಯವಶೇಷಗಳು ಹಾಗೂ ಬಿಡಿಬಿಡಿಯಾಗಿ ದಾಖಲೆಗೊಂಡಂತಹ ಇಲ್ಲಿನ ಚಾರಿತ್ರಿಕ ಅಂಶಗಳನ್ನು ಸಂಗ್ರಹಿಸಿ, ವಿಶ್ಲೇಷಣೆ ಮಾಡಿ, ಜನಪದೀಯವಾಗಿ ಸ್ಥಳೀಯರಲ್ಲಿ ಉಳಿದುಬಂದಿರುವ ಕಥೆ, ಪುರಾಣ, ಐತಿಹ್ಯಗಳ ಕುರಿತಾಗಿ ಅವರನ್ನು ಸಂದರ್ಶಿಸಿ, ಅವರಿಂದ ಮಾಹಿತಿಯನ್ನು ದಾಖಲಿಸಿ, ವಿಮರ್ಶೆಗೈದು, ಯಾವುದೇ ಪೂರ್ವಗ್ರಹ ಪೀಡನೆಗೆ ಒಳಗಾಗದೇ ವಸ್ತುನಿಷ್ಠವಾಗಿ ಇಲ್ಲಿನ ಸ್ಥಳೀಯ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಇತಿಹಾಸವನ್ನು ಕಟ್ಟಿಕೊಡುವ ಪ್ರಯತ್ನವನ್ನು ಮಾಡಲಾಗಿದೆ. ಈ ಅಧ್ಯಯನದಲ್ಲಿ ದೇವಾಲಯಗಳು ಸೇರಿದಂತೆ ಕೆಲವೊಂದು ಸ್ಮಾರಕಾವಶೇಷಗಳು

ಅಳಿವಿನಂಚಿನಲ್ಲಿದ್ದುದರಿಂದ ಹಾಗೂ ಜೀರ್ಣೋದ್ಧಾರಗೊಳಿಸಿದ್ದರಿಂದ ಅವುಗಳಿಗೆ ಸಂಬಂಧಿಸಿದ ಅಧ್ಯಯನದಲ್ಲಿ ಸ್ವಲ್ಪ ಹಿನ್ನೆಡೆಯಾಗಿದೆ ಎಂಬುದನ್ನು ಒಪ್ಪಿಕೊಳ್ಳಬೇಕಾಗಿದೆ. ಅಷ್ಟೇ ಅಲ್ಲದೇ ಕಡಿಮೆ ಸಮಯದ ಕಾಲಾವಕಾಶವಿರುವುದರಿಂದ ಇಲ್ಲಿನ ಮುಸ್ಲಿಂ ಸ್ಮಾರಕಗಳು, ಮುಸ್ಲಿಂ ಸಂಸ್ಕೃತಿ ಹಾಗೂ ಕೆರೆ–ಕಟ್ಟೆ, ಬಾವಿಗಳು, ಮಠಗಳು, ಜಾನಪದ ಕಲೆಗಳೆಂಬ ಮೊದಲಾದ ಅಂಶಗಳ ಕುರಿತಾಗಿ ಅಧ್ಯಯನ ನಡೆಸಲಾಗಲಿಲ್ಲ. ಇವುಗಳೆಲ್ಲವುಗಳ ಕುರಿತಾಗಿ ಇನ್ನೂ ಹೆಚ್ಚಿನ ಸಂಶೋಧನೆಗಳು ನಡೆದರೆ ನಾಡಿನ ಚರಿತ್ರೆ ಮತ್ತು ಸಾಂಸ್ಕೃತಿಕ ಅಧ್ಯಯನದಲ್ಲಿ ಮೊಳಕಾಲ್ಮೂರಿನ ಪಾತ್ರ ಮತ್ತು ಮಹತ್ವವೆನೆಂಬುದು ಅನಾವರಣಗೊಳ್ಳುತ್ತದೆ ಎಂದು ಭಾವಿಸುತ್ತೇನೆ.

# ಅನುಬಂಧಗಳು

೧. ಗ್ರಂಥಋಣ

೨. ವಕ್ತೃವಿವರಗಳು

೩. ನಕ್ಷೆಗಳು

೪. ಛಾಯಾಚಿತ್ರಗಳು

# ಗ್ರಂಥಋಣ


ಅಪರ್ಣಾ ಕೂ.ಸ., **ದೇವಾಲಯ ವಾಸ್ತುಶಿಲ್ಪ ಪರಿಚಯ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

ಆರಾಧ್ಯ ಶ್ರೀ ಶೈಲ ಎಚ್., **ಸಂಶೋಧನೆಯ ಹಾದಿಯಲ್ಲಿ,** ಆರೋಹಣ ಪ್ರಕಾಶನ, ಚಿತ್ರದುರ್ಗ, ೧೯೮೩.

**ಎಪಿಗ್ರಫಿ ಕರ್ನಾಟಕ,** ಸಂ.೧೧(ಹಳೆಯದು), ಬೆಂಗಳೂರು, ೧೯೦೩.

**ಕನ್ನಡ ವಿಷಯ ನಿಘಂಟು,** ಸಂ.೭, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೩.

**ಕರ್ನಾಟಕ ಗ್ರಾಮಸೂಚಿ,** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೫.

ಕರಿಬಸಪ್ಪ, **ಬಳ್ಳಾರಿ ಜಿಲ್ಲೆಯ ಐತಿಹ್ಯಗಳು,** ಸಾಯಿಮಣಿ ಪ್ರಕಾಶನ, ಹೊಸಪೇಟೆ, ೨೦೦೯.

ಕಾಮತ್ ಯು.ಸೂರ್ಯನಾಥ, **ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಸಂ.೩,** ಎಂ.ಬಿ.ಡಿ. ಮುದ್ರಾಕ್ಷರ ಶಾಲೆ, ಬೆಂಗಳೂರು, ೧೯೮೬.

ಕಾಮತ್ ಯು.ಸೂರ್ಯನಾಥ, **ಕರ್ನಾಟಕದ ಸಂಕ್ಷಿಪ್ತ ಇತಿಹಾಸ,** ಎಂ.ಸಿ.ಸಿ.ಪಬ್ಲಿಕೇಷನ್ಸ್, ಬೆಂಗಳೂರು, ೨೦೧೧.

ಕುಲಕರ್ಣಿ ಡಿ.ಜಿ., **ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳು,** ಕರ್ನಾಟಕ ಇತಿಹಾಸ ಸಂಶೋಧನಾ ಮಂಡಳಿ, ಧಾರವಾಡ, ೨೦೦೮.

ಕೃಷ್ಣ ಎಂ.ಎಚ್., **ಕನ್ನಡ ನಾಡಿನ ಚರಿತ್ರೆ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೯.

ಕೃಷ್ಣಕುಮಾರ್ ಸಿ.ಪಿ. **ಭಾರತೀಯ ಶಾಸನಶಾಸ್ತ್ರ ಪರಿಚಯ,** ಲಕ್ಷ್ಮಿ ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್, ಮೈಸೂರು, ೨೦೦೧.

ಕೃಷ್ಣಕುಮಾರ್ ಸಿ.ಪಿ., **ಶಾಸನಶಾಸ್ತ್ರ ಪ್ರವೇಶ,** ಚೇತನ ಬುಕ್ ಹೌಸ್, ಮೈಸೂರು, ೨೦೦೧.

ಕೊಟ್ರೇಶ್ ಎಂ., **ಬಳ್ಳಾರಿ ಜಿಲ್ಲೆಯ ಕೋಟೆಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧.

ಕೋಲ್ಕಾರ ಶರಣಬಸಪ್ಪ, **ಶಿಲಾಯುಗದ ಗವಿಚಿತ್ರಗಳು**, ಬಸವ ಪ್ರಕಾಶನ ಮತ್ತು ಪುಸ್ತಕ ವ್ಯಾಪಾರಿಗಳು, ಗುಲಬರ್ಗಾ, ೨೦೧೦.

ಗಿರಿಜಾ ಟಿ., **ಚಿತ್ರದುರ್ಗ ಜಿಲ್ಲಾದರ್ಶಿನಿ**, ರೇಖಾ ಪ್ರಕಾಶನ, ದಾವಣಗೆರೆ, ೧೯೯೧.

ಗೋಪಾಲ ಆರ್.(ಸಂ), **ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ**, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ, ೨೦೦೫.

ಚಿದಾನಂದಮೂರ್ತಿ ಎಂ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೬೬.

ಚಿದಾನಂದಮೂರ್ತಿ ಎಂ., **ಸಂಶೋಧನೆ**, ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು, ೨೦೧೨.

ಚಂದ್ರಶೇಖರಯ್ಯ ಬಿ.ಎಂ., **ಕರ್ನಾಟಕದ ಸಾಂಸ್ಕೃತಿಕ ಇತಿಹಾಸ ಪರಂಪರೆ**, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೫.

ಜೋಶಿ ಎಸ್.ಕೆ., **ಕರ್ನಾಟಕದ ಕೋಟೆ ಕೊತ್ತಲಗಳು, ಭಾಗ-೧**, ಸರಸ್ವತಿ ಆಫ್‌ಸೆಟ್ ಮುದ್ರಣಾಲಯ, ಧಾರವಾಡ, ೨೦೦೮.

ಜೋಶಿ ಶಂ.ಬಾ., **ಎಡೆಗಳು ಹೇಳುವ ಕಂನಾಡ ಕತೆ**, ಶಂ.ಬಾ.ವಿಚಾರ ವೇದಿಕೆ, ಬೆಂಗಳೂರು, ೧೯೪೭.

ತಾಪಿ ಧರ್ಮರಾವ್, **ದೇವಾಲಯಗಳು ಮತ್ತು ಲೈಂಗಿಕ ಶಿಲ್ಪ**, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೧೨.

ತಿಪ್ಪೇಸ್ವಾಮಿ ಮರಿಕುಂಟೆ, **ಮೊಳಕಾಲ್ಮೂರು ದರ್ಶನ**, ಪ್ರಣತಿ ಪ್ರಕಾಶನ, ಮೊಳಕಾಲ್ಮೂರು, ೨೦೧೨.

ತಿಪ್ಪೇರುದ್ರಸ್ವಾಮಿ ಎಚ್., **ಕರ್ನಾಟಕ ಸಂಸ್ಕೃತಿ ಸಮೀಕ್ಷೆ**, ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು, ೧೯೭೪.

ತಿಪ್ಪೇಸ್ವಾಮಿ ಪಿ.ಆರ್., **ಶಿಲ್ಪಕಲಾ ಪ್ರಪಂಚ**, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, ೧೯೯೪.

ತೆಲಗಾವಿ ಲಕ್ಷ್ಮಣ್, ಶ್ರೀನಿವಾಸ ಎಂ.ವಿ.(ಸಂ), **ಚಂದ್ರವಳ್ಳಿ**, ಜಿಲ್ಲಾ ಇತಿಹಾಸ ಸಂಶೋಧನಾ ಮಂಡಳಿ, ಚಿತ್ರದುರ್ಗ, ೧೯೭೬.

ತೆಲಗಾವಿ ಲಕ್ಷ್ಮಣ್(ಸಂ), **ಹರತಿಸಿರಿ**, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, ೧೯೮೭.

ತೆಲಗಾವಿ ಲಕ್ಷ್ಮಣ್, **ಚಿತ್ರದುರ್ಗ ಜಿಲ್ಲೆ ಇತಿಹಾಸ ಅಧ್ಯಯನದ ವ್ಯಾಪಕತೆ ಮತ್ತು ಸಾಧ್ಯತೆಗಳು**, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, ೨೦೦೪.

ತೆಲಗಾವಿ ಲಕ್ಷ್ಮಣ್, **ಎಪ್ಪತ್ತೇಳು ಪಾಳೆಯಗಾರರು**, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, ೨೦೧೦.

ನರಸಿಂಹಮೂರ್ತಿ ಎ.ವಿ., **ಕರ್ನಾಟಕದಲ್ಲಿ ಪುರಾತತ್ವ ಶೋಧನೆ**, ಐಬಿಹೆಚ್ ಪ್ರಕಾಶನ, ಬೆಂಗಳೂರು, ೧೯೭೯.

ನರಸಿಂಹಮೂರ್ತಿ ಹೆಚ್.ಡಿ., **ನಮ್ಮ ಹಬ್ಬಗಳು**, ವಿಕಾಶ ಪ್ರಕಾಶನ, ಹಂಪಿ, ೨೦೦೨.

ನಾಗೇಗೌಡ ಎಚ್.ಎಲ್., **ಪ್ರವಾಸಿ ಕಂಡ ಇಂಡಿಯಾ, ಸಂ.೩**, ಐಬಿಎಚ್ ಪ್ರಕಾಶನ, ಬೆಂಗಳೂರು, ೨೦೦೭.

ಪಾಡಿಗಾರ ಶ್ರೀನಿವಾಸ, **ಪುರಾತತ್ವಶಾಸ್ತ್ರ ಪರಿಚಯ**, ಗಾಯತ್ರಿ ಪ್ರಕಾಶನ, ಧಾರವಾಡ, ೧೯೮೭.

ಪಾಟೀಲ ಎಸ್.ಚನ್ನಬಸಪ್ಪ, **ಕರ್ನಾಟಕದ ಕೋಟೆಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

ಪೆಂಡಕೂರು ಗುರುಮೂರ್ತಿ, **ಬಳ್ಳಾರಿ ಜಿಲ್ಲೆಯ ಸ್ಥಳನಾಮಗಳು**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೬.

ಪ್ರಭಾಕರ ಎಂ.ಎನ್., **ದೇವಾಲಯ ವಾಸ್ತು ಚಂದ್ರಿಕೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

ಪ್ರಭಾಕರ ಎಂ.ಎನ್., **ದೇವಾಲಯವಾಸ್ತು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧.

ಭಟ್ ವಿ.ಎನ್.ವಿದ್ವಾನ್, **ಭಾರತೀಯ ಹಬ್ಬಗಳ ವೈಶಿಷ್ಟ್ಯ**, ವಿಶ್ವನಾಥ ಪ್ರಕಾಶನ, ಶಿವಮೊಗ್ಗ, ೨೦೦೨.

ಭೀಮರೆಡ್ಡಿ ಕೆ.ಎನ್., **ಮೊಳಕಾಲ್ಮೂರು ತಾಲೂಕು ದರ್ಶನ**, ಐಬಿಎಚ್ ಪ್ರಕಾಶನ, ಬೆಂಗಳೂರು, ೧೯೮೭.

ಭೈರಪ್ಪ ಕೆ., **ಹರ್ಷತರುವ ಹಬ್ಬಗಳು**, ಸಿ.ವಿ.ಜಿ.ಪಬ್ಲಿಕೇಷನ್ಸ್, ಬೆಂಗಳೂರು, ೧೯೯೫.

ಮನೋಜ್ ಜಿ., **ದೇವಾಲಯ ವಾಸ್ತು ವಿಜ್ಞಾನ**, ಸುಬೋದಿನಿ ಬುಕ್ ಪಬ್ಲಿಷರ್ಸ್, ಚಿತ್ರದುರ್ಗ, ೨೦೧೫.

ಮಹದೇವ ಸಿ., ವಾಸುದೇವನ್ ಸಿ.ಎಸ್., ರಮೇಶನಾಯಕ, **ಕರ್ನಾಟಕ ದೇವಾಲಯ ಕೋಶ: ಹಾವೇರಿ ಜಿಲ್ಲೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

ಮೂರ್ತಿ ಹುಲಿಕುಂಟೆ ಆರ್.ಎಸ್., **ಚರಿತ್ರೆ ವೆಲುಗುಲೋ ರಾಯದುರ್ಗಂ(ತೆಲುಗು ಕೃತಿ)**, ಲೇಖಕರ ಪ್ರಕಾಶನ, ರಾಯದುರ್ಗಂ, ೨೦೦೧.

**ಮೈಸೂರು ಗ್ಯಾಸೆಟಿಯರ್**, ಸಂ.೨

ಯೋಗೀಶ್ವರಪ್ಪ ಡಿ.ಎನ್., **ಮಧ್ಯಕಾಲೀನ ಕರ್ನಾಟಕದ ಪಾಳೆಯಗಾರರು**, ಧಾತ್ರಿ ಪುಸ್ತಕ ಮಾಲೆ, ಬೆಂಗಳೂರು, ೨೦೦೯.

ರಮೇಶ ಬಿ.ಜಿ., **ನಮ್ಮ ಹಬ್ಬಗಳು**, ಚಂದನ ಪ್ರಕಾಶನ, ಬೆಂಗಳೂರು, ೨೦೦೭.

ರಾಜಶೇಖರ ಎಸ್., **ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ**, ಸುಜಾತ ಪಬ್ಲಿಕೇಷನ್ಸ್, ಧಾರವಾಡ, ೧೯೭೮.

ರಾಮಶೇಷನ್ ನೀ.ಕೃ., **ಕರ್ನಾಟಕದ ಕೋಟೆ ಕೊತ್ತಲಗಳು**, ಐಬಿಎಚ್ ಪ್ರಕಾಶನ, ಬೆಂಗಳೂರು, ೧೯೮೦.

ರಾಮಚಂದ್ರರಾವ್ ಎಸ್.ಕೆ., **ಮೂರ್ತಿಶಿಲ್ಪ: ನೆಲೆ-ಹಿನ್ನೆಲೆ**, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೫.

ರಾಮಚಂದ್ರರಾವ್ ಎಸ್.ಕೆ., **ಭಾರತೀಯ ದೇವಾಲಯ: ನೆಲೆ-ಹಿನ್ನೆಲೆ**, ಶ್ರೀಕಂಠತೀರ್ಥ ಪ್ರಕಾಶನ, ಬೆಂಗಳೂರು, ೧೯೮೦.

ಶಾಮರಾಯರು ತ.ಸು., **ಮೂರು ತಲೆಮಾರು**, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಸುವರ್ಣ ಸಾಹಿತ್ಯ ಗ್ರಂಥಮಾಲೆ, ಬೆಂಗಳೂರು, ೧೦೦೬.

ಶಿವತಾರಕ್ ಕೆ.ಬಿ., **ಕರ್ನಾಟಕ ಪುರಾತತ್ವ ನೆಲೆಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

ಷಹಸೀನಾ ಬೇಗಂ, **ಕರ್ನಾಟಕ ಮುಸ್ಲಿಂ ಜಾನಪದ**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೦.

ಷೇಕ್ ಅಲಿ(ಸಂ), **ಕರ್ನಾಟಕ ಚರಿತ್ರೆ ಸಂಪುಟಗಳು ೧ರಿಂದ ೫**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಸತ್ಯನ್ ಬಿ.ಎನ್.(ಮು.ಸಂ), **ಚಿತ್ರದುರ್ಗ ಡಿಸ್ಟ್ರಿಕ್ ಗ್ಯಾಸೆಟಿಯರ್**, ಕರ್ನಾಟಕ ಸರ್ಕಾರ, ಬೆಂಗಳೂರು, ೧೯೬೭.

ಸುರೇಶ ಬಿ., **ಚಿತ್ರದುರ್ಗ-ದಾವಣಗೆರೆ ಜಿಲ್ಲೆಗಳ ದೇವಾಲಯಗಳು**, ಸಂಶೋಧನ ಪ್ರಕಾಶನ, ಚಿತ್ರದುರ್ಗ, ೨೦೦೯.

ಸುಂದರ ಅ., **ಪ್ರಾಚ್ಯವಸ್ತು ಸಂಶೋಧನೆ**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೮.

ಸೋಮಶೇಖರ ಎಸ್.ವೈ., **ಜಟಂಗಿ ರಾಮೇಶ್ವರ ಸಾಂಸ್ಕೃತಿಕ ದರ್ಶನ,** ಸುಮೇಧ ಪ್ರಕಾಶನ, ಚಿತ್ರದುರ್ಗ, ೨೦೦೪.

ಸೋಮಶೇಖರ ಎಸ್.ವೈ.(ಸಂ), **ಬ್ರಹ್ಮಗಿರಿ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

ಹಿರಿಯಣ್ಣ ಅಂಬಳಿಕೆ(ಮು.ಸಂ.), **ಕನ್ನಡ ವಿಷಯ ವಿಶ್ವಕೋಶ,** ಇತಿಹಾಸ ಮತ್ತು ಪುರಾತತ್ವ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೦೯.

ಹೊಂಗನೂರು ನಂಜಯ್ಯ, **ಸ್ಥಳನಾಮಗಳು,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೦೯.

**ಲೇಖನಗಳು**

ಉಲ್ಲಾನಹಳ್ಳಿ ಜಯಣ್ಣ, 'ಮೊಳಕಾಲ್ಮೂರು ತಾಲೂಕು ಹಾನಗಲ್ಲಿನ ಸಮೀಕ್ಷೆ', **ಇತಿಹಾಸ ದರ್ಶನ,** ಸಂ.೧೭, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ೨೦೦೨.

ತಿಪ್ಪೇಸ್ವಾಮಿ ಎಸ್., 'ಸಂತೇಗುಡ್ಡದ ಗುಹಾವರ್ಣಚಿತ್ರಗಳು ಹಾಗೂ ಪ್ರಾಚ್ಯಾವಶೇಷಗಳು', **ಇತಿಹಾಸ ದರ್ಶನ,** ಸಂ.೨೧, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ೨೦೦೬.

ತಿಪ್ಪೇಸ್ವಾಮಿ ಎಚ್., 'ನುಂಕಮಲೆ ಪರಿಸರದಲ್ಲಿ ಪ್ರಾಗೈತಿಹಾಸಿಕ ನೆಲೆಗಳ ಶೋಧನೆ', **ಇತಿಹಾಸ ದರ್ಶನ,** ಸಂ.೧೫, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ೨೦೦೦.

ವಿರೂಪಾಕ್ಷಿ, 'ಚಿನ್ನಹಗರಿ ನದಿ ಪರಿಸರದ ಪ್ರಾಚ್ಯಾವಶೇಷಗಳು: ಒಂದು ಶೋಧನೆ', **ಇತಿಹಾಸ ದರ್ಶನ,** ಸಂ.೧೩, ಕರ್ನಾಟಕ ಇತಿಹಾಸ ಅಕಾಸೆಮಿ, ಬೆಂಗಳೂರು, ೧೯೯೭.

ಸುಂದರ ಅ., 'ಜಟಂಗ ರಾಮೇಶ್ವರದಲ್ಲಿಯ ಪ್ರಾಗೈತಿಹಾಸಿಕ ಪುರಾತತ್ವ ಅವಶೇಷಗಳು ಮತ್ತು ಐತಿಹ್ಯ: ಒಂದು ವಿವೇಚನೆ', **ಇತಿಹಾಸ ದರ್ಶನ,** ಸಂ.೬, ಕರ್ನಾಟಕ ಇತಿಹಾಸ ಅಕಾಡೆಮಿ(ರಿ), ಬೆಂಗಳೂರು, ೧೯೯೧.

**ಅಪ್ರಕಟಿತ ಸಂಶೋಧನ ಗ್ರಂಥಗಳು**

ಜಯಣ್ಣ ಯು., **ಮೊಳಕಾಲ್ಮೂರು ತಾಲೂಕಿನ ಪುರಾತತ್ವೀಯ ಪರಿಸರ,** ಅಪ್ರಕಟಿತ ಪಿಎಚ್.ಡಿ.ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ತಿಪ್ಪೇಸ್ವಾಮಿ ಎಸ್., **ರಕ್ಷಣಾ ವಾಸ್ತುಶಿಲ್ಪ: ಚಿತ್ರದುರ್ಗ ಜಿಲ್ಲೆ,** ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಮಲ್ಲಿಕಾರ್ಜುನ ಕೆ., **ಮೊಳಕಾಲ್ಮೂರು ಗ್ರಾಮಾಧ್ಯಯನ ಮತ್ತು ಸ್ಥಿತ್ಯಂತರಗಳು**, ಅಪ್ರಕಟಿತ ಎಂ.ಫಿಲ್.ಪ್ರೌಢಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಮೈಲಾರಪ್ಪ ಬಿ., **ಮೊಳಕಾಲ್ಮೂರು ತಾಲೂಕಿನ ಸ್ಥಳನಾಮಗಳು**, ಅಪ್ರಕಟಿತ ಎಂ.ಫಿಲ್. ಪ್ರೌಢಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಲೋಕೇಶ ಜಿ.ಎಂ., **ಚಿನ್ನಹಗರಿ ನದಿ ಪರಿಸರದ ಚಾರಿತ್ರಿಕ ಅಧ್ಯಯನ**, ಅಪ್ರಕಟಿತ ಎಂ.ಫಿಲ್.ಪ್ರೌಢಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಸಿದ್ದಣ್ಣ ಎ., **ನುಂಕೇಮಲೆ ಭೈರವಾರಾಧನೆ ಹೊಳಹು**, ಅಪ್ರಕಟಿತ ಎಂ.ಫಿಲ್.ಪ್ರೌಢಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಸ್ಮರಣ ಸಂಚಿಕೆಗಳು**

**ಗಡಿನಾಡು**(ಮೊಳಕಾಲ್ಮೂರು ಗಡಿನಾಡೋತ್ಸವ ನೆನಪಿನ ಸಂಚಿಕೆ) ವಿಚಾರ ಪ್ರಕಾಶನ, ದಾವಣಗೆರೆ, ೨೦೦೨.

**ದುರ್ಗಸಿರಿ**(ದುರ್ಗೋತ್ಸವ-೯೮, ಸ್ಮರಣ ಸಂಚಿಕೆ), ಚಿತ್ರದುರ್ಗ ಜಿಲ್ಲಾ ಉತ್ಸವ ಸಮಿತಿ, ಚಿತ್ರದುರ್ಗ, ೧೯೯೯.

**ಪದ್ಮಸಿಂಚನ**(ಶ್ರೀ ಮಾರ್ಕಂಡೇಯ ಸ್ವಾಮಿ ದೇವಾಲಯದ ಅಮೃತ ಮಹೋತ್ಸವದ ಸಂಚಿಕೆ) ಶ್ರೀ ಪದ್ಮಶಾಲೀ ಬಹೂತ್ತಮ ಸಮಾಜ, ಮೊಳಕಾಲ್ಮೂರು, ೨೦೧೫.

**ಮೊಳಗುವ ಕಲ್ಲು**(ಚಿತ್ರದುರ್ಗ ಜಿಲ್ಲಾ ೭ನೇ ಕನ್ನಡ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆ) ಸ್ವಾಗತ ಸಮಿತಿ, ಮೊಳಕಾಲ್ಮೂರ, ೨೦೦೨.

**ಅಂತರ್ಜಾಲ ಮಾಹಿತಿ**

www.google.com Geographical featurs of molakalnuru

www.google.com Molakalmuru Taluk Map

www.onefivenine come india/village/chitradurga/molkalnuru

## ೨. ವಕ್ತೃ ವಿವರ

| ಹೆಸರು | ವೃತ್ತಿ | ವಯಸ್ಸು |
|---|---|---|
| ವಸಂತಮಾಸ್ತರ್ | ನಿವೃತ್ತ ಶಿಕ್ಷಕರು | ೮೦ |
| ಕೃಷ್ಣಮೂರ್ತಿವಾಂಜ್ರೆ | ಅರ್ಚಕರು | ೫೫ |
| ಪೂಜಾರಪ್ಪ | ಅರ್ಚಕರು | ೫೦ |
| ಮಲ್ಲಿಕಾರ್ಜುನ | ಕೆಇಬಿ ನೌಕರರು | ೪೬ |
| ತಿಪ್ಪಮ್ಮ | ದೇವಾಲಯದ ಸೇವಕರು ೩೯ | |
| ದೊಡ್ಡಮಾರಣ್ಣ | ರೈತರು | ೬೦ |
| ಟಿ.ಶಿವಾನಂದ | ನಿವೃತ್ತ ಶಿಕ್ಷಕರು | ೭೧ |
| ರಾಘವೇಂದ್ರ | ನಿವೃತ್ತ ಡಿಜಿಎಂ ಮ್ಯಾನೇಜರ್ | ೬೫ |
| ಪಾಂಡುರಂಗ | ಕೈಮಗ್ಗ ನೇಕಾರರು | ೪೫ |
| ದುರುಗಪ್ಪ ಏಕಬೋಟಿ | ನಿವೃತ್ತ ಶಿಕ್ಷಕರು | ೮೬ |
| ಗಂಗಮ್ಮ ಐಯ್ಯನೊರು | ಮಠದ ಉಸ್ತುವಾರಿ ವಂಶಸ್ಥರು | ೮೫ |
| ಟಿ.ಕೃಷ್ಣಮೂರ್ತಿ | ನಿವೃತ್ತ ಜವಳಿ ಇಲಾಖಾಧಿಕಾರಿಗಳು | ೭೯ |
| ಮಾರಕ್ಕ | ಗೃಹಿಣಿ | ೬೦ |
| ಓಬಳೇಶ | ಕೂಲಿಕಾರ್ಮಿಕರು | ૩೫ |
| ಸಣ್ಣಬೊಮ್ಮಣ್ಣ | ಕೈಮಗ್ಗ ನೇಕಾರರು | ૩೨ |
| ಮಹೇಶ | ಕೂಲಿಕಾರ್ಮಿಕರು | ૩೦ |
| ದೇವರಾಜ | ಡ್ರೈವರ್ | ૩೦ |
| ತಮ್ಮಪ್ಪಸ್ವಾಮಿ | ಮಠದ ಉಸ್ತುವಾರಿದಾರರು | ೭೫ |
| ಚಂದ್ರಶೇಖರ ಬೈ.ಸೆ. | ಅರ್ಚಕರು | ೬೮ |
| ಲಕ್ಷ್ಮೀಬಾಯಿ ಬೈ.ಸೆ. | ಗೃಹಿಣಿ | ೫೮ |

| | | |
|---|---|---|
| ಕುಮಾರ | ಸ್ನಾತಕೋತ್ತರ ಪದವೀಧರ | ೩೦ |
| ಹರೀಶ | ವ್ಯಾಪಾರ | ೩೦ |
| ಈರಣ್ಣ | ಸ್ನಾತಕೋತ್ತರ ಪದವೀಧರ | ೩೫ |
| ಮರಿಕುಂಟೆ ತಿಪ್ಪೇಸ್ವಾಮಿ | ತಾಲೂಕು ಲೆಕ್ಕ ಪತ್ರಾಧಿಕಾರಿ | ೫೯ |
| ಮೈಲಾರಪ್ಪ | ಉಪನ್ಯಾಸಕರು | ೩೮ |
| ಮಂಜುನಾಥ | ಅರ್ಚಕರು | ೩೩ |
| ವೆಂಕಟೇಶ ಕೆ.ಜಿ. | ಹಿರಿಯ ಪತ್ರಕರ್ತರು | ೬೬ |
| ಭಾಷಾ ಎಸ್. | ಬಡಗಿತನ(corpenter) | ೪೨ |
| ಮಂಜುನಾಥಸ್ವಾಮಿ ನಾಯಕ | ವಕೀಲರು | ೪೦ |
| ಘಟಕಾರಿ ಶರಣಪ್ಪ | ಅರ್ಚಕರು | ೫೬ |
| ಸಣ್ಣಯ್ಯ | ರೈತರು | ೭೮ |
| ನಟರಾಜ್ | ಅರ್ಚಕರು | ೭೧ |
| ರವಿ | ಸ್ನಾತಕೋತ್ತರ ಪದವೀಧರ | ೩೦ |
| ಸುರೇಶ | ಪದವೀಧರ | ೩೨ |
| ಪ್ರಕಾರ | ಶಿಕ್ಷಕರು | ೫೮ |

# ಮೊಳಕಾಲ್ಮೂರು ತಾಲೂಕು ನಕ್ಷೆ



# ಮೊಳಕಾಲ್ಮೂರು ಪಟ್ಟಣ ನಕ್ಷೆ



# ಛಾಯಾಚಿತ್ರಗಳು



ಗಾಳಿಮಾರಮ್ಮ ದೇವಾಲಯ ಬಳಿಯ ಪುಷ್ಕರಣಿ



ರಾಯದುರ್ಗ ರಸ್ತೆಯಲ್ಲಿನ ವೀರಮಾಸ್ತಿಕಲ್ಲು



ಎನ್.ಎಂ.ಎಸ್.ಬಡಾವಣೆಯ ಈಶ್ವರ ದೇವಾಲಯ



ಕೋಟೆಯ ಈಶ್ವರನ ಬಾಗಿಲು



ಬೆಟ್ಟದ ಮೇಲಿಂದ ಪುರದ ನೋಟ


ಬೆಟ್ಟದ ಮೇಲಿನ ಲಕ್ಷ್ಮವ್ವ ನಾಗತಿ ಕೆರೆ


ಏಣಿ ಮಾರಮ್ಮ ಬುರುಜು


ಏಣಿ ಮಾರಮ್ಮನ ಕೋಟೆಯ ಸಾಲು



ಕೋಟೆ ಆಂಜನೇಯನ ಮೂರ್ತಿಶಿಲ್ಪ



ಕೋಟೆಯ ಏಣಿಮಾರಮ್ಮ ದ್ವಾರಬಾಗಿಲು



ಕೋಟೆಯ ಹನುಮನ ಬಾಗಿಲು



ಕಂಪಿಲರಾಯನ ಹೊಂಡ



ಕೋಟೆಯ ಮೇಲಿನ ಈಶ್ವರನ ಲಿಂಗ



ಕೋತಲಗೊಂದಿ ಕೆರೆ



ಬೃಹತಶಿಲಾಯುಗ ಗೋರಿ



ಬೃಹತಶಿಲಾಯುಗದ ನೆಲೆ



ಕ್ಷೇತ್ರಕಾರ್ಯದಲ್ಲಿ ದೊರೆತ ನವಶಿಲಾಯುಗದ ಕಲ್ಲಿನ ಕೈಕೊಡಲಿ


ಹಿರೇಮಠ


ಶ್ರೀ ವೆಂಕಟರಮಣ ದೇವಾಲಯದ ಪ್ರವೇಶದ್ವಾರ


ವೆಂಕಟರಮಣ ದೇವಾಲಯದ ಗೋಪುರದ ಭಾಗ


ಶ್ರೀ ಪಾಂಡುರಂಗ ರುಕ್ಮಿಣಿ ಮೂರ್ತಿಶಿಲ್ಪ


ಶ್ರೀ ಜನ್ನಿಗೆಪಾಲು ಅಂಜನೇಯನ ಮೂರ್ತಿಶಿಲ್ಪ


ಹಿರೇಮಠದ ಆವರಣದಲ್ಲಿನ ವೀರಗಲ್ಲು

